

ಪಶ್ಚಿಮ ವಾಹಿನಿ



# ಕಲಾ ಲೋಕಕ್ಕೊಂದು ಕೊಡುಗೆ

# ಎಂ. ಎಸ್. ನಿರ್ಮಲ್ ಕುಮಾರ್

ದಿ|| ಎಂ. ಜೆ. ಶುದ್ಧೋದನರ ಪುತ್ರ ಶ್ರೀ ಎಂ. ಎಸ್. ನಿರ್ಮಲ್ ಕುಮಾರ್. ಅವರ ಯಾವುದೇ ಚಿತ್ರವನ್ನು ನೋಡಿದರೂ ತಂದೆಯ ಮಾರ್ಗದಲ್ಲಿ ಸಾಗುತ್ತಿರುವ ಸೂಚನೆ ಕಾಣುತ್ತದೆ. ಜಯ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ ಹಾಗೂ ಚಿತ್ರಕಲಾ ಶಾಲೆಯಲ್ಲಿ ೧೯೬೨ರಿಂದ ೧೯೬೭ರವರೆಗೆ ಐದು ವರ್ಷ ಓದಿ ಡಿಪ್ಲೊಮ ಪಡೆದವರು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ವಿಶ್ವಕೋಶಕ್ಕೆ ಚಿತ್ರ ವಿವರಗಳು, ಯುವ ಕರ್ನಾಟಕಕ್ಕೆ ರಕ್ಷಾಪುಟ ವಿನ್ಯಾಸ ಇವರ ಕೊಡುಗೆ.

– **ಪಿ. ಎಂ. ರಾಜನ್**, ಮೈಸೂರು

ಕಲಾವಿದರ ವಿಳಾಸ: **ಎಂ. ಎಸ್. ನಿರ್ಮಲ್ ಕುಮಾರ್**, ೯೭೯, ೮ನೇ ಮುಖ್ಯರಸ್ತೆ, ಗೋಕುಲಂ ಎರಡನೇ ಹಂತ, ಮೈಸೂರು - ೫೭೦ ೦೦೨



ಪಶ್ಚಿಮ ವಾಹಿನಿ



ಮೈಸೂರಿನ ಶಿವರಾಮಪೇಟೆ



ಶ್ರೀರಂಗಪಟ್ಟಣ

# ಹೊಸತು

## ಒಳಗೇನಿದೆ.....




ಚಿತ್ರಗಳು : ಕಮಲಂ ಅರಸು, ಸ್ಯಾಮ್, ರವಿಕುಮಾರ್ ಅಜ್ಜೀಪುರ
ಎನ್. ಆರ್. ಬೊಮ್ಮಳ್ಳಿ

ಮುಖಚಿತ್ರ : ಗಿರಿಧರ ಖಾಸನೀಸ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಚು**ನಾವಣಾ ಫಲಿತಾಂಶ ಪ್ರಕಟವಾದ ಎಷ್ಟೋ ದಿನಗಳ ನಂತರ ಯಾವುದೋ ಮಾಂತ್ರಿಕನ ಪ್ರಭಾವದಿಂದಲೋ ಎಂಬಂತೆ ನಮ್ಮ ರಾಜ್ಯದಲ್ಲಿ ಒಂದು ಸಮ್ಮಿಶ್ರ ಸರ್ಕಾರ ಅಧಿಕಾರಕ್ಕೆ ಬಂದಿದೆ. ಏತಕ್ಕೆ ಮತ್ತು ಯಾವ ಆಧಾರದ ಮೇಲೆ ಕಾಂಗ್ರೆಸ್ ಮತ್ತು ಜಾತ್ಯತೀತ ಜನತಾದಳ ಜೊತೆಯಾಗಿರುವುವೆಂಬ ವಿಸ್ಮಯ ಆ ಪಕ್ಷಗಳ ವರಿಷ್ಠರನ್ನೂ ಬಾಧಿಸುತ್ತಿದೆ. ಯಾರು ಮಂತ್ರಿಗಳಾಗ ಬೇಕೆಂಬುದರ ಬಗೆಗಿನ ರಾಡಿ ಇಡೀ ರಾಜ್ಯವನ್ನು ವ್ಯಾಪಿಸಿರುವುದು ಒಂದು ದೊಡ್ಡ ಕಳಂಕ. ಈ ಕದನ ಮುಂದಿನ ಐದು ವರ್ಷಗಳ ಕಾಲವೂ ನಡೆಯುವ ಸಂಭವವಿದೆ. ಅದಕ್ಕೆ ಮುಂಚೆಯೇ ಸರ್ಕಾರ ಬಿದ್ದುಹೋದರೆ ಅದು ಬೇರೆ ಮಾತು. ಭಾರತೀಯ ಜನತಾ ಪಕ್ಷವನ್ನು ಅಧಿಕಾರಕ್ಕೆ ಬಾರದಂತೆ ತಡೆಯಲು ಈ ಎರಡು ಪಕ್ಷಗಳು ಜೊತೆಯಾಗಿರುವುದು ಆಕ್ಷೇಪಣೀಯವಲ್ಲ; ಅದು ಅಪೇಕ್ಷಣೀಯ. ವೆಂಕಯ್ಯ ನಾಯ್ಡು ಇದನ್ನು ಅಪವಿತ್ರ ಮೈತ್ರಿಯೆಂದು ಕಿರುಚಾಟ ನಡೆಸಲು ಅವರ ಅಸಮಾಧಾನವೇ ಕಾರಣ. ತಮ್ಮ ಪಕ್ಷವನ್ನು ಆಯ್ಕೆ ಮಾಡಿಕೊಳ್ಳಲು ದೇವೇಗೌಡರ ಪಕ್ಷ ಮುಂದಾಗಲಿಲ್ಲವೆಂಬುದು ಅವರಿಗೆ ಪಿತ್ತ ಕೆರಳಿಸಿದೆ. ಏಕೆ ಆಯ್ಕೆ ಮಾಡಿಕೊಳ್ಳಲಿಲ್ಲವೆಂದು ತಮ್ಮ ಪಕ್ಷದ ಎಲ್ಲ ಚಟುವಟಿಕೆಗಳನ್ನೂ ವಿಮರ್ಶಿಸಿಕೊಳ್ಳುವುದು ವೆಂಕಯ್ಯನವರ ಆರೋಗ್ಯಕ್ಕೆ ಒಳ್ಳೆಯದು. ಹೇಗೂ ಅವರು ನಮ್ಮ ರಾಜ್ಯವನ್ನು "ಪ್ರತಿನಿಧಿಸುವ" ಹಿರಿಯರಾಗಿ ರಾಜ್ಯಸಭೆಯನ್ನು ಎರಡನೆಯ ಬಾರಿಗೆ ಪ್ರವೇಶಿಸುತ್ತಿದ್ದಾರಾದ್ದರಿಂದ ಮುಂದೆ ಎಂದಾದರೂ ನಮ್ಮ ಮುಖ್ಯಮಂತ್ರಿಯೂ ಆಗಿಬಿಡಬಹುದು. ಆದ್ದರಿಂದ ವಿಮರ್ಶೆ ಮಾಡಿಕೊಳ್ಳುವ ಸಂಪ್ರದಾಯವನ್ನವರು ಬೆಳೆಸಿಕೊಳ್ಳ ಬೇಕೆಂಬ ನಿರೀಕ್ಷೆ ತಪ್ಪಲ್ಲ. ಆತ ಎಂದೂ ನಮ್ಮ ಕಾವೇರಿ-ಕೃಷ್ಣಾ ನೀರಿನ ಬಗ್ಗೆ ಆಸಕ್ತಿ ತೋರಲಿಲ್ಲ ವಾದರೂ ಅವರ ಪಕ್ಷದ ಶಾಸಕರು ಆತನಲ್ಲಿ ವಿಶ್ವಾಸ ತೋರಿ ತಮ್ಮ ಪಕ್ಷದ ವರ್ಚಸ್ಸನ್ನು ಪ್ರಕಾಶಿಸಿದ್ದಾರೆ. ತಾನು ಆ ಪಕ್ಷಕ್ಕಿಂತ ಭಿನ್ನನಲ್ಲವೆಂಬುದನ್ನು ಪ್ರತಿಪಾದಿಸಲು ಅಪ್ಪ-ಮಕ್ಕಳ ಪಕ್ಷವಾದ ದೇವೇಗೌಡ ಪಕ್ಷವು ವೆಂಕಯ್ಯವನರಿಗಿಂತಲೂ ಅಪಥ್ಯವೆನಿಸುವ ರಾಮಸ್ವಾಮಿ ಎಂಬ ತಮಿಳು ನಾಡು ಪ್ರಭೃತಿಯನ್ನು ರಾಜ್ಯಸಭೆಗೆ ಸ್ಪರ್ಧಿಯಾಗಿ ಹಿಡಿದು ತಂದಿದೆ. ಇಲ್ಲದ ನೀರನ್ನು ಬಿಡಿ, ಬಿಡಿ, ಎಂದು ಬೊಬ್ಬೆ ಹಾಕಲು ಇನ್ನೊಂದು ಬಾಯನ್ನು ರಾಜ್ಯಸಭೆಗೆ ಅರ್ಪಿಸುವ ಖ್ಯಾತಿ ದೇವೇಗೌಡರ ದ್ದಾಗಬಹುದು. ಆ ರಾಮಸ್ವಾಮಿಯೆಂಬ ಚಾಣಾಕ್ಷ ವ್ಯಾಪಾರಿ-ಉದ್ಯಮಿಗೂ ದೇವೇಗೌಡರ ಪಕ್ಷಕ್ಕೂ ಏನು ಸಂಬಂಧವೋ ಕರ್ನಾಟಕದ ಜನತೆಗೆ ಗೊತ್ತಿಲ್ಲ. ಆದರೂ ಬಹು ಅಕ್ಷರಗಳ ಹೆಸರಿನ ಈ ಮಹಾತ್ಮ ನಮ್ಮ ರಾಜ್ಯದ "ಪ್ರತಿನಿಧಿ" ಆಗಿಬಿಡುತ್ತಾನೆ! ದೇವೇಗೌಡರ ಪಕ್ಷದಲ್ಲಿ ಮೊದಲಿನಿಂದಲೂ ಇದ್ದವರು, ಹೊಸದಾಗಿ ಸೇರಿ ಮಂತ್ರಿಗಳಾಗಿರುವ ಪ್ರಜ್ಞಾವಂತರು ಇಂತಹ ಆಯ್ಕೆಯನ್ನು ಒಪ್ಪಿಕೊಂಡದ್ದಾದರೂ ಹೇಗೆ ? ಅಥವಾ, ಅಪ್ಪ-ಮಕ್ಕಳ ಪಕ್ಷಕ್ಕೆ ಸೇರಿದ್ದರಿಂದ ಬಾಯಿ ಬಿಡುವ ಸ್ವಾತಂತ್ರ್ಯವನ್ನು ಸ್ವಯಂಪ್ರೇರಣೆಯಿಂದ ಬಿಟ್ಟುಕೊಟ್ಟಿದ್ದಾರೋ ? ಇದೆಲ್ಲದರ ನಡುವೆ ಸಂಗಾತಿ ಶ್ರೀರಾಮರೆಡ್ಡಿಯವರು ರಾಮಸ್ವಾಮಿಯಂತಹ ಧೀಮಂತನಿಗೆ ಮತ ಚಲಾಯಿಸಬೇಕಾಗಿ ಬಂದಿರುವ ಪೇಚಾಟಕ್ಕೆ ಸಂಕಟ ವ್ಯಕ್ತಪಡಿಸಬೇಕಾಗಿದೆ.

ಕಾಂಗ್ರೆಸ್ – ಜಾತ್ಯತೀತ ಜನತಾದಳ ಜೊತೆಯಾಗಿ ಸರ್ಕಾರ ರಚಿಸುವ ಮುನ್ನ ಒಂದು ಸಾಮಾನ್ಯ ಆಕಾಂಕ್ಷಾ ಪ್ರಣಾಲಿಕೆಯನ್ನು ಸಿದ್ಧಗೊಳಿಸಲಿಲ್ಲ. ಹೋಗಲಿ, ನಂತರವಾದರೂ ಅದನ್ನು ಮಾಡುತ್ತಾರೆಯೇ ಎಂದು ನೋಡಿದರೆ ಈವರೆಗೆ ಅದರ ಗೋಜಿಗೆ ಹೋಗಿರದ ದಾಖಲೆ ಆ ಪಕ್ಷಗಳದ್ದು. ಎತ್ತು-ಕೋಣಗಳ ಹೂಡಿಕೆಯಿಂದ ನಮ್ಮ ರಾಜ್ಯವು ಏರಿಯನ್ನೇರುವುದೋ ನೀರಿನಲ್ಲಿ ಮುಳುಗುವುದೋ ಎಂಬ ಆತಂಕ ಗಾಢವಾಗುತ್ತಿದೆ. ಯಾವ ಸಮಸ್ಯೆಯನ್ನು ಈ ಸರ್ಕಾರ ಎದುರಿಸುತ್ತದೆ, ಅದರ ಆದ್ಯತೆಗಳು ಯಾವುವು, ಪರಿಹಾರದ ದಾರಿ ಯಾವುದು, ಎಂಬುದರ ಗೊಡವೆಗೇ ಹೋಗದೆ ಸರ್ಕಾರ ರಚಿಸಿರುವ ವೀರರು ಇನ್ನಾದರೂ ಆ ಪ್ರಶ್ನೆಗಳನ್ನು ಗಮನಿಸಲು ಮುಂದಾಗುತ್ತಾರೆಯೆ ? ಒಂದು ಉದಾಹರಣೆ ನೀಡುವುದಾದರೆ, ನಮ್ಮ ವೈದ್ಯಕೀಯ ಮತ್ತು ತಾಂತ್ರಿಕ ಶಿಕ್ಷಣದ ಪರಿಸ್ಥಿತಿಯನ್ನು ಅವಲೋಕಿಸಬಹುದು. ಆ ವಿದ್ಯಾಲಯಗಳಿಗೆ ಪ್ರವೇಶದ ನೀತಿ ಯಾವುದು ? ನಮ್ಮ ಯುವ ವಿದ್ಯಾರ್ಥಿ-ವಿದ್ಯಾರ್ಥಿನಿಯರ ಮನೋದಾರ್ಢ್ಯದ ಪರೀಕ್ಷೆ ಮಾಡ ಹೊರಟಿರುವ ಸರ್ಕಾರ ಮತ್ತು ಖಾಸಗಿ ಆಡಳಿತ ಮಂಡಲಿಗಳಿಗೆ ಸೌಜನ್ಯದ ಪಾಠ ಹೇಳುವವರಾರು ? ಖಾಸಗಿಯವರಿಗೆ ಕಡೆಯ ಎಚ್ಚರ ನೀಡಿ, ಅವರ ವಿದ್ಯಾಲಯಗಳಿಗೆ ವಿದ್ಯಾರ್ಥಿ ಗಳನ್ನು ಆಯ್ಕೆ ಮಾಡುವುದಿಲ್ಲವೆಂದು ಸರ್ಕಾರ ನಿರ್ಧಾರ ಪ್ರಕಟಿಸಿದರೆ ಅವರಿಗೆ ವಿದ್ಯಾರ್ಥಿಗಳು ಎಲ್ಲಿಂದ ಬರುತ್ತಾರೆ ? ಕಾಲೇಜುಗಳನ್ನು ನಡೆಸಲು ಮುಂದಾದಾಗ 'ಇದು ಸಾರ್ವಜನಿಕ ಸೇವೆ' ಎಂದು ಘೋಷಿಸಿಕೊಂಡ ಖಾಸಗಿ ವಿದ್ಯಾಲಯಗಳ ದಣಿಗಳು ಈಗ ಬಳಸುತ್ತಿರುವ ಭಾಷೆ ಹೆಚ್ಚು ಕಡಿಮೆ ಪಾಳೆಯಗಾರರ ಧೋರಣೆಯನ್ನು ಪ್ರತಿಬಿಂಬಿಸುತ್ತಿದೆ. ಕಾಲೇಜುಗಳಿಗೆ ಪ್ರವೇಶವನ್ನು ನಿಯಂತ್ರಿಸಲು ಸರ್ಕಾರಕ್ಕೆ ಯಾವ ಹಕ್ಕೂ ಇಲ್ಲವೆಂದು ಖಾಸಗಿ ವಲಯದ ವಕ್ತಾರ ಜಾಲಪ್ಪ ಹೇಳಿದ್ದಾರೆ. ಕಾಲೇಜು ಆರಂಭಿಸುವಾಗ ಸರ್ಕಾರಕ್ಕೆ ಮತ್ತು ಸಮಾಜಕ್ಕೆ ಬರೆದುಕೊಟ್ಟ ಮುಚ್ಚಳಿಕೆ ಯನ್ನವರು ಮರೆತಿರುವುದು ಶೋಚನೀಯ. ಸರ್ಕಾರವು ಅದನ್ನವರಿಗೆ ನೆನಪಿಸಲು ಹಿಂಜರಿದರೆ ಸಾರ್ವಜನಿಕರು ಆ ಕೆಲಸವನ್ನು ಕ್ರಿಯಾತ್ಮಕವಾಗಿ ಮಾಡಬೇಕಾಗುತ್ತದೆ.

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಸಂಪುಟ-೫ ಸಂಚಿಕೆ - ೧೨ ಜುಲೈ ೨೦೦೪



**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೪
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com

# ಸಾಮಾನ್ಯ ಕನಿಷ್ಠ ಕಾರ್ಯಕ್ರಮ

**ಸಂಪಾದಕೀಯ**

''ಇದೇನು ಕನಿಷ್ಠವೋ ಅನಿಷ್ಟವೋ ?'' – ಹೀಗೆ ಕೇಳಿದವರೊಬ್ಬರು ಇತ್ತೀಚೆಗಷ್ಟೆ ಕೇಂದ್ರ ಸರ್ಕಾರದಿಂದ ಹೊರಹಾಕಿಸಿಕೊಂಡ ಸಚಿವರು, ವಾಜಪೇಯಿ ಸರ್ಕಾರದಲ್ಲಿದ್ದು ಭಾರತೀಯ ಜನತಾ ಪಕ್ಷದ ಏಳಿಗೆಗಾಗಿ ದುಡ್ಡಿನ ಚೀಲವಿರುವವರಲ್ಲೆಲ್ಲಾ ಕೈಂಕರ್ಯ ನಡೆಸಿದವರು. ತಾವು ಐದು ವರ್ಷದ ಆಳ್ವಿಕೆಯಲ್ಲಿ ಜಾರಿಗೊಳಿಸಿದ ಕಾರ್ಯಕ್ರಮವು ಅನಿಷ್ಟವಷ್ಟೇ ಅಲ್ಲ, ಅಪಾಯಕಾರಿಯೂ ಆಗಿದ್ದಿತೆಂಬ ತಿಳುವಳಿಕೆ ಇವರಲ್ಲಿ ಇನ್ನೂ ಮೂಡಿಲ್ಲ. ಈಗ ಕೇಂದ್ರ ಸರ್ಕಾರದಲ್ಲಿ ಪಾಲ್ಗೊಂಡಿರುವ ಹಾಗೂ ಸಚಿವ ಸಂಪುಟವನ್ನು ಸೇರದೆ ಹೊರಗಿನಿಂದ ಬೆಂಬಲ ನೀಡುತ್ತಿರುವ ಎಲ್ಲ ಪಕ್ಷಗಳೂ ಒಟ್ಟಾಗಿ ಒಂದು ಕಾರ್ಯಸೂಚಿಯನ್ನು ಸಿದ್ಧಗೊಳಿಸಿ ಅದನ್ನು ಮಾರ್ಗದರ್ಶಿ ಸೂತ್ರದಂತೆ ಪರಿಗಣಿಸಲು ಬದ್ಧರಾಗಿರುವುದು ಒಂದು ಒಳ್ಳೆಯ ಬೆಳವಣಿಗೆ. ನಮ್ಮ ಪ್ರಜಾಪ್ರಭುತ್ವದ ಮಾದರಿಯು ಕೆಲವೊಮ್ಮೆ ಪ್ರಶ್ನಾರ್ಹವಾಗಿರುವುದು ನಿಜ. ಇವರು ಬಂದಾಗ ಅವರು ಮಾಡಿದ್ದುದನ್ನೆಲ್ಲಾ ಕೆದಕಿ ಶುಭ್ರಗೊಳಿಸುವುದು ಮತ್ತು ಮತ್ತೆ ಅವರು ಬಂದಾಗ ಇನ್ನೊಂದು ಬಾರಿ ಅವರ ಹಿಂದಿನ ಅದೇ ಮಲಿನವನ್ನು ಹರಡುವುದು. – ಒಬ್ಬೊಬ್ಬರೂ ರಿಪೇರಿಯಲ್ಲಿ ತೊಡಗುವುದನ್ನೇ ಪ್ರಧಾನ ಆಕಾಂಕ್ಷೆಯನ್ನಾಗಿ ಮಾಡಿಕೊಂಡರೆ ಮುಂದಕ್ಕೆ ಸಾಗುವ ಹೆಜ್ಜೆಗಳು ವಿರಳವಾಗಿಬಿಡುತ್ತವೆ. ಆದರೆ ದೇಶದ ಸರ್ವತೋಮುಖ ವಿಕಾಸಕ್ಕೆ ಕುತ್ತು ತರುವ ನೀತಿಗಳನ್ನು ಜಾರಿಗೆ ತಂದಿದ್ದರೆ ಅವನ್ನು ಕಿತ್ತೊಗೆದು ಪರ್ಯಾಯದ ರಚನೆಯಲ್ಲಿ ಮಗ್ನವಾಗುವುದು ಹೊಸ ಸರ್ಕಾರದ ಮೇರು ಜವಾಬ್ದಾರಿಯಾಗಿರುತ್ತದೆ. ಇಂದಿನ ಕೇಂದ್ರ ಸರ್ಕಾರವು ಅಂತಹ ಗುರುತರ ಕರ್ತವ್ಯದಲ್ಲಿ ನಿರತವಾಗಬೇಕಾಗಿದೆ. ಅದಕ್ಕೆ ದಿಕ್ಸೂಚಿಯಾಗಿ ಸಾಮಾನ್ಯ ಕನಿಷ್ಠ ಕಾರ್ಯಕ್ರಮದ ಚಿಂತನೆ ನಡೆದಿದೆ, ಒಂದು ವಿಶಾಲ ತಳಹದಿಯ ಯೋಜನೆ ಸಿದ್ಧವಾಗಿದೆ.

ಈ ಯೋಜನೆಯೇ ಸರ್ವಸ್ವವೆಂದು ಭಾವಿಸುವುದು ತಪ್ಪಾಗುತ್ತದೆ. ವಿದೇಶಿ ಬಂಡವಾಳದ ಹಿಡಿತ, ಆರ್ಥಿಕ ಸ್ವಾವಲಂಬನೆ, ದೇಶದ ಸಾರ್ವಭೌಮತ್ವ, ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಸಮಗ್ರವಾದ ನೀತಿ ನಿರೂಪಣೆಯು ಈ ಕಾರ್ಯಕ್ರಮದಲ್ಲಿಲ್ಲ. ಇರುವಷ್ಟು ಅಂಶಗಳೂ ನಿಷ್ಠೆ ಮತ್ತು ದಕ್ಷತೆಗಳಿಂದ ಕಾರ್ಯರೂಪಕ್ಕೆ ಬರುತ್ತವೋ ಇಲ್ಲವೋ ಎಂಬುದರ ಬಗ್ಗೆ ಶಂಕೆಗೆ ಆಸ್ಪದವಿದೆ. ರಾಜಕೀಯವಾಗಿ ಸುಸ್ಥಿರ ಸರ್ಕಾರ ರಚನೆಗೆ ಅನಿವಾರ್ಯವಾಗಿ ಇಂಥದೊಂದು ಕಾರ್ಯಕ್ರಮದ ನಿರೂಪಣೆಯಾಗಬೇಕಿತ್ತು ಎಂಬ ಕಾರಣದಿಂದ ಮಾತ್ರವೇ ಕಾಂಗ್ರೆಸ್ ಪಕ್ಷವು ಈ ಕಾರ್ಯಕ್ರಮದ ಆಶಯಗಳನ್ನು ಬೆಂಬಲಿಸುತ್ತಿದೆಯೇ ಎಂಬ ಪ್ರಶ್ನೆಗೆ ಕ್ರಮೇಣ ಉತ್ತರ ದೊರೆಯುತ್ತದೆ. ಕಳೆದ ಐವತ್ತು ವರ್ಷಗಳಲ್ಲಿ ಮಾಡದಿದ್ದುದನ್ನು ಕಾಂಗ್ರೆಸ್ ಪಕ್ಷವು ಈಗ ಮಾಡಲು ತವಕದಿಂದಿರುತ್ತದೆಯೆಂದು ಭಾವಿಸಲು ಯಾವ ಪುರಾವೆಯೂ ಇಲ್ಲ. ವಾಜಪೇಯಿ ಸರ್ಕಾರದ ಎಷ್ಟೋ ಜನವಿರೋಧಿ ನೀತಿಗಳನ್ನು ನೋಡುತ್ತಾ ಕೈ ಕಟ್ಟಿ ಕುಳಿತಿದ್ದ ಪಕ್ಷ ಕಾಂಗ್ರೆಸ್ ಎಂಬುದನ್ನು ಯಾರೂ ಮರೆತಿಲ್ಲ. ಭೂಸುಧಾರಣೆ, ಕೃಷಿಯನ್ನು ವಿದೇಶಿ ಆಕ್ರಮಣದಿಂದ ರಕ್ಷಿಸುವುದು, ನಮ್ಮ ಮಾರುಕಟ್ಟೆಯ ಮೇಲಿನ ಧಾಳಿಯನ್ನು ತಡೆಗಟ್ಟುವುದು, ಸ್ಟಾಕ್ ಎಕ್ಸ್‌ಚೇಂಜ್‌ನ ಗೂಳಿಗಳನ್ನು ನಿಯಂತ್ರಿಸುವುದು, ಇಂಥವೆಲ್ಲಾ ಮನಮೋಹನ ಸಿಂಗ್ – ಚಿದಂಬರಂ ವಿಶೇಷವಾಗಿ ಆಸಕ್ತಿ ವಹಿಸಬಹುದಾದ ಅಂಶಗಳಲ್ಲ. ಅವರಿಬ್ಬರ ಉದ್ದೇಶ ಮತ್ತು ಕ್ರಿಯೆ ಹಿಂದೆಯೇ ಸಾಬೀತಾಗಿದೆ. ಚಿದಂಬರಂ ತಮ್ಮ ಪೂರ್ವಾವತಾರದಲ್ಲಿ ವಾಷಿಂಗ್‌ಟನ್‌ಗೆ ತೆರಳಿದ್ದಾಗ ಉದ್ಯಮಿಗಳನ್ನೂ ಬಂಡವಾಳ ಹೂಡುವವರನ್ನೂ ಭಾರತಕ್ಕೆ ಆಹ್ವಾನಿಸುತ್ತಾ ಹೇಳಿದ್ದ ಮಾತು ಇದು – ''ಎರಡು ಶತಮಾನಗಳ ಹಿಂದೆ ಭಾರತಕ್ಕೆ ಬಂದ ಈಸ್ಟ್ ಇಂಡಿಯಾ ಕಂಪೆನಿ ದೇಶವನ್ನು ಬಿಟ್ಟುಹೋಗಬೇಕಾಯಿತು. ನಿಮಗೆ ಅಂತಹ ಒತ್ತಾಯವಿರುವುದಿಲ್ಲ. ಬನ್ನಿ, ಚಿರಕಾಲ ನಮ್ಮಲ್ಲಿ ನೆಲೆಸಿ.'' ಇದು ನಮ್ಮ ಅರ್ಥಮಂತ್ರಿಗಳ ಮನೋಭೂಮಿಕೆಯನ್ನು ತಿಳಿಯಲು ಒಂದು ನಿದರ್ಶನ, ಅಷ್ಟೆ. ಅಂದರೆ, ಸಾಮಾನ್ಯ ಕನಿಷ್ಠ ಕಾರ್ಯಕ್ರಮ ನಮ್ಮ ಮುಂದಿದ್ದರೂ ಎಲ್ಲಾ ಕ್ಷೇಮವಾಗೇನೂ ಇಲ್ಲವೆಂದರ್ಥ. ಅರುಣ್ ಶೌರಿ – ಜಸ್ವಂತ್ ಸಿಂಗರ ಹೇಯ ಆರ್ಥಿಕ ನೀತಿಗಳು ಬೇರೆ ರೀತಿಯಲ್ಲಿ ಮುಂದುವರಿಯಬಹುದೆಂಬ ಆತಂಕ ಇದ್ದೇ ಇದೆ. ತಮ್ಮ ಕಾಲಾವಧಿಯಲ್ಲಿ ಎರಡು-ಮೂರು ತಿಂಗಳಿಗೊಮ್ಮೆ ಪೆಟ್ರೋಲ್ ಮತ್ತು ಡೀಸೆಲ್ ಬೆಲೆ ಏರಿಸುತ್ತಿದ್ದ ಭಾರತೀಯ ಜನತಾ ಪಕ್ಷದ ಧುರೀಣರು ಈಗಿನ ಬೆಲೆ ಏರಿಕೆಯನ್ನು ವಿರೋಧಿಸಲು ಬೀದಿಗಿಳಿಯುತ್ತಾರಂತೆ. ಆ ಪಕ್ಷದ ನಾಚಿಕೆಗೇಡಿನ ಕೃತ್ರಿಮಕ್ಕೆ ಇದೊಂದು ಸಾಕ್ಷಿ. ಅದೇ, ಸಾರ್ವಜನಿಕ ಉದ್ದಿಮೆಯೊಂದನ್ನು ಪ್ರಮೋದ್ ಮಹಾಜನ್ ನೆಂಟರಿಗೋ ಇಷ್ಟರಿಗೋ ಹಸ್ತಾಂತರಿಸಿದರೆ ಆ ಪಕ್ಷ ಚಕಾರವೆತ್ತುವ ಸಂಭವವಿಲ್ಲ. ಆದ್ದರಿಂದ ಕೇವಲ ಎಡ ಪಕ್ಷಗಳಲ್ಲ, ಇಡೀ ಜನತೆ ಕಟ್ಟೆಚ್ಚರದಿಂದ ಸಾಮಾನ್ಯ ಕನಿಷ್ಠ ಕಾರ್ಯಕ್ರಮದ ಉಲ್ಲಂಘನೆಯಾಗದಂತೆ ನೋಡಿಕೊಳ್ಳಬೇಕು, ವೆಂಕಯ್ಯ ಪಕ್ಷವು ಮತ್ತೆ ಸರ್ಕಾರವನ್ನು ಸ್ವಾಧೀನಪಡಿಸಿಕೊಳ್ಳದಂತೆ ತಡೆಗಟ್ಟಬೇಕು. ಪಠ್ಯ ಪುಸ್ತಕಗಳನ್ನು ಹೊಲಸು ಮಾಡಿದ್ದ ಮುರಳಿ ಮನೋಹರ ಜೋಶಿ ಈಗಾಗಲೆ ಬೀದಿಗಿಳಿಯುವ ಸೂಚನೆ ನೀಡಿದ್ದಾರೆ; ಅವರ ಸ್ವಯಂಘೋಷಿತ ಪಾಂಡಿತ್ಯದ ಒಂದು ಗುಲಗಂಜಿಯಷ್ಟನ್ನೂ ಬದಲಾಯಿಸಲು ಬಿಡುವುದಿಲ್ಲವಂತೆ! ಹೀಗೆ ಹೊಂಚು ಹಾಕುತ್ತಿರುವ ನಾಯಕರು ಚುನಾವಣೆಗಳಲ್ಲಿ ಸೋತು ರಾಜ್ಯಸಭೆಗೆ ಲಗ್ಗೆಯಿಟ್ಟಿದ್ದಾರೆ. ಆದರೆ ಅವರ ಮೃಗೀಯ ಪ್ರಭುತ್ವ ಕೇವಲ ಒಂದು ಕೆಟ್ಟ ಕನಸಾಗಿ ಉಳಿಯುವಂತೆ ಮಾಡುವ ಹೊಣೆ ನಮ್ಮೆಲ್ಲರದೂ ಆಗಿದೆ.

ಕಾಂಗ್ರೆಸ್ ಪಕ್ಷವು ಹಿಂದೊಮ್ಮೆ ಇಪ್ಪತ್ತು ಅಂಶಗಳ ಕಾರ್ಯಕ್ರಮವೊಂದನ್ನು ಘೋಷಿಸಿ, ಮೋಡಗಳ ಮೇಲೆ ನಿಂತು ಅದಕ್ಕೆ ಎಲ್ಲೆಂದರಲ್ಲಿ ಅಬ್ಬರದ ಪ್ರಚಾರ ನೀಡಿತ್ತು. ಸರ್ಕಾರದ ಹಣದಿಂದ ನೂರಾರು ಗೋಷ್ಠಿಗಳು ನಡೆದು ನಾಡಿನ 'ಖ್ಯಾತ' ವಿದ್ವಾಂಸರೆಲ್ಲಾ ಈ ಕಾರ್ಯಕ್ರಮವನ್ನು ಶ್ಲಾಘಿಸುವುದರಲ್ಲೇ ಗಂಟಲು ಒಣಗಿಸಿಕೊಂಡರು. ಅದರ ಮೇಲಿನ ಯಾವ ಟೀಕೆಯೂ ಪ್ರಚಾರಕ್ಕೆ ಬಾರದಂತೆ ಸೋನಿಯಾರ ಮೈದುನ ಸಂಜಯ ಗಾಂಧಿ ನೋಡಿಕೊಂಡಿದ್ದು ಇನ್ನೂ ದೇಶದ ಸ್ಮೃತಿಯಲ್ಲಿ ಉಳಿದಿದೆ. ಇಪ್ಪತ್ತು ಅಂಶಗಳ ಕಾರ್ಯಕ್ರಮ ಬಂದಿದೆ, ಇನ್ನೇನು ಬೇಕು, ಎಲ್ಲಾ ಸುಗಮವಾಗಿದೆ, ಎಂಬ ಭಾವನೆಯನ್ನು ಹರಡಲು ಉಗ್ರ ಪ್ರಯತ್ನಗಳು ನಡೆದಿದ್ದುವು. ಈಗಿನ ಕಾಂಗ್ರೆಸ್ ನಾಯಕರಿಗೆ ಆ ಇಪ್ಪತ್ತು ಅಂಶಗಳು ಜ್ಞಾಪಕದಲ್ಲಿವೆಯೇ ಎಂಬುದು ಅನುಮಾನ. ಕಾಂಗ್ರೆಸ್ ಪಕ್ಷದ ಈ ಪರಂಪರೆ ಜೀವಂತವಾಗಿರುತ್ತದೆ. ಸಾಮಾನ್ಯ ಕನಿಷ್ಠ ಕಾರ್ಯಕ್ರಮವನ್ನು ಕೇವಲ ಘೋಷಣೆಯಾಗಿಬಿಡಲು ಅವಕಾಶ ನೀಡದಿರುವಷ್ಟಾದರೂ ಸಾರ್ವಜನಿಕರ ಒತ್ತಡ ಇರಬೇಕಾಗುತ್ತದೆ.

ಅಮೆರಿಕಾದ ಜೊತೆ ಭಾರತದ ಸೈನ್ಯವು ಜಂಟೀ ಕವಾಯತುಗಳನ್ನು ಮಾಡುವ ಅಪಾಯಕಾರಿ ಬೆಳವಣಿಗೆಯೊಂದು ವಾಜಪೇಯಿ ಸರ್ಕಾರದ ಹೀನಾಯ ಕೊಡುಗೆ. ಅದನ್ನು ಕೂಡಲೆ ರದ್ದುಗೊಳಿಸಬೇಕು. ಅದಕ್ಕೆ ಬೇಕಾದಂತಹ ಸೂತ್ರವು ನಮ್ಮ ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿಲ್ಲ. ಅಂತಹ ಬೇರೆ ಹತ್ತಾರು ಪ್ರಸಂಗಗಳಿವೆ. ಅವನ್ನೆಲ್ಲಾ ದೃಢವಾಗಿ ಎದುರಿಸುವ ಸಾಮರ್ಥ್ಯವನ್ನು

ಕೇಂದ್ರದ ಸಮ್ಮಿಶ್ರ ಸರ್ಕಾರ ಪ್ರದರ್ಶಿಸಬೇಕಾಗಿದೆ. ಉದಾಹರಣೆಗೆ, ಸಾರ್ವಜನಿಕ ಸಂಪತ್ತಿನ ಆಗರಗಳನ್ನು ವಾಜಪೇಯಿ – ಶೌರಿ ಬೇಕಾಬಿಟ್ಟಿಯಾಗಿ ಖಾಸಗಿಯವರಿಗೆ ಹಸ್ತಾಂತರಿಸಿದ್ದರು. ಅದರಲ್ಲಿ ಏನೇನು ಅವ್ಯವಹಾರಗಳಿದ್ದುವೋ ಅವೆಲ್ಲಾ ಬೆಳಕಿಗೆ ಬಂದಿಲ್ಲ. ಹಾಗೆ ಹಾಳುಗೆಡವಲ್ಪಟ್ಟ ಎಲ್ಲ ಸಾರ್ವಜನಿಕ ಸಂಪತ್ತನ್ನು ಹಿಂದಕ್ಕೆ ಪಡೆಯಬೇಕು, ಖಾಸಗಿಯವರು ನೀಡಿದ್ದ ಹಣಕ್ಕಿಂತ ಒಂದು ಚಿಕ್ಕ ಕಾಸನ್ನೂ ಅಧಿಕವಾಗಿ ನೀಡಕೂಡದು. ಇನ್ನೊಂದು ಉದಾಹರಣೆಯನ್ನು ನೋಡುವುದಾದರೆ, ಕಲುಷಿತ ವ್ಯಕ್ತಿತ್ವವನ್ನುಳ್ಳ ಕೆಲವರು ಕೇಂದ್ರದಲ್ಲಿ ಮಂತ್ರಿಗಳಾಗಿದ್ದಾರೆಂಬ ಆರೋಪದತ್ತ ಕಣ್ಣು ಹಾಯಿಸಬಹುದು. ಆಪಾದನೆಯನ್ನು ಹೊರಿಸಿ ವಿಚಾರಣೆಯನ್ನು ಮುಂದೂಡುತ್ತಾ ಬರುವ ಸಂಪ್ರದಾಯ ನಮ್ಮದು. ಆಪಾದಿತನು ಶಿಕ್ಷೆಯನ್ನೂ ಪಡೆಯುವುದಿಲ್ಲ, ಆಪಾದನೆಯಿಂದ ಮುಕ್ತನೂ ಆಗುವುದಿಲ್ಲ. ಅಂಥವರು ಸಾರ್ವಜನಿಕ ಜೀವನದಿಂದ ನಿರ್ಗಮಿಸಬೇಕೆಂದು ಇದರ ಸೂಚ್ಯಾರ್ಥ. ಇದರ ಬಗ್ಗೆ ನ್ಯಾಯಾಂಗವು ಜಾಣ ಕುರುಡನ್ನು ಅವಲಂಬಿಸಿ ಆಪಾದನೆಗಳ ವಿಚಾರಣೆಯನ್ನು ಒಂದರ್ಧ ಶತಮಾನದ ಪರ್ಯಂತ ದೂಡುತ್ತಲೇ ಬರುವುದು ಅರ್ಥಹೀನವಾದ್ದು. ಇಂದಿನ ಕೇಂದ್ರ ಸರ್ಕಾರ ಇದನ್ನು ಬಗೆಹರಿಸುವತ್ತ ದೃಷ್ಟಿ ಹರಿಸಬೇಕು. ಮಸೀದಿ ಉರುಳಿಸಿದವರು ಮಂತ್ರಿಗಳಾದರು, ಕಾರಾಗೃಹಕ್ಕೆ ತಳ್ಳಲ್ಪಡಲಿಲ್ಲ. ಶವಪೆಟ್ಟಿಗೆಯ ಖದೀಮರು ಗೌರವದಿಂದ ಬಾಳುತ್ತಾರೆ, ಮಂತ್ರಿ ಪದವಿ ಕಳೆದುಕೊಳ್ಳಲಿಲ್ಲ. ಮೇವು ಹಗರಣದವರು ಮಾತ್ರ ಮಂತ್ರಿಯಾಗಬಾರದೆಂದು ಆಗ್ರಹಿಸುವ ಭಾರತೀಯ ಜನತಾ ಪಕ್ಷವು ನ್ಯಾಯಾಲಯಗಳನ್ನು ಚುರುಕುಗೊಳಿಸುವ ಕನಿಷ್ಠ ಕಾರ್ಯಕ್ರಮವನ್ನಾದರೂ ಹಾಕಿಕೊಂಡಿರುತ್ತಿದ್ದರೆ ಒಳಿತಿತ್ತು.

## ದ್ರಾವಿಡ ಪಕ್ಷಗಳ ಕಸರತ್ತು

**ತ**ಮಿಳುನಾಡಿನ ಎರಡು ದೊಡ್ಡ ಪಕ್ಷಗಳು ದ್ರಾವಿಡ ಮುನ್ನೇತ್ರ ಕಳಗಂ ಮತ್ತು ಅಣ್ಣಾ ದ್ರಾವಿಡ ಮುನ್ನೇತ್ರ ಕಳಗಂ. ಅಣ್ಣಾದೊರೈ ಕಾಲದಲ್ಲಿ ಒಂದಾಗಿದ್ದ ಪಕ್ಷ ಆಮೇಲೆ ಎರಡಾದದ್ದು ಇತಿಹಾಸ. ರಾಮಸ್ವಾಮಿ ನಾಯ್ಕರ್ ಕಟ್ಟಿ ಬೆಳೆಸಿದ್ದ ದ್ರಾವಿಡ ಕಳಗಂ ಅಣ್ಣಾದೊರೈ ಕಾಲಕ್ಕೆ ಒಂದು ಪಕ್ಷವಾಗಿ ಕ್ಷೀಣವಾಗಿತ್ತು, ಆದರೆ ಅದರ ಸೈದ್ಧಾಂತಿಕ ನೆಲೆ ಇನ್ನೂ ಗಟ್ಟಿಯಾಗಿಯೇ ಇತ್ತು. ಕೇಂದ್ರ ಸರ್ಕಾರದಲ್ಲಿ ಯಾವಾಗಲೂ ಅಣ್ಣಾ ಭಾಗವಹಿಸಲಿಲ್ಲ; ಬದಲಾಗಿ ಯಾವಾಗಲೂ ಕೇಂದ್ರದ ಜೊತೆ ಜಟಾಪಟಿ ನಡೆಸುತ್ತಲೇ ಇದ್ದರು. ಅನೇಕ ರಾಜ್ಯಗಳ ಸಂಯುಕ್ತ ರಾಷ್ಟ್ರ ಭಾರತವೆಂಬುದನ್ನು ಸದಾ ಅವರು ನೆನಪಿಸುತ್ತಿದ್ದರು ಮತ್ತು ಹಿಂದಿ ಹೇರಿಕೆಯ ವಿರುದ್ಧ ಪ್ರಚಂಡ ಬಿರುಗಾಳಿ ಎಬ್ಬಿಸಿದ್ದರು. ತಮಿಳುನಾಡಿನ ಅಭಿವೃದ್ಧಿಗಾಗಿ ಅವರದೇನಾದರೂ ವಿಶಿಷ್ಟ ಕೊಡುಗೆ ಇದೆಯೇ ಎಂಬುದಕ್ಕೆ ಚರಿತ್ರೆಯಲ್ಲಿ ಅಂತಹ ಗಮನಾರ್ಹ ಉಲ್ಲೇಖಗಳೇನೂ ಉಳಿದಿಲ್ಲ. ಕಾಂಗ್ರೆಸ್ಸಿಗೆ ಪರ್ಯಾಯವೊಂದನ್ನು ಪ್ರಾಯೋಗಿಕವಾಗಿ ರೂಪಿಸಿ ತೋರಿಸಿದ ಖ್ಯಾತಿ ಅವರದು. ಅವರ ನಂತರ ಕರುಣಾನಿಧಿ, ಎಂ.ಜಿ. ರಾಮಚಂದ್ರನ್ ಮತ್ತು ಜಯಲಲಿತಾ ರಂಗವನ್ನೇರಿದರು. ವೈಯಕ್ತಿಕ ಮಹದಾಸೆಗಳು ರಾಜ್ಯ ಮತ್ತು ಪಕ್ಷಗಳಿಗಿಂತ ದೊಡ್ಡದಾದಾಗ ಕರುಣಾನಿಧಿ ಮತ್ತು ರಾಮಚಂದ್ರನ್ ಬೇರೆಬೇರೆ ಆದರು. ಸೈದ್ಧಾಂತಿಕ ಒಲವುಗಳೇನೂ ಪಕ್ಷವು ಇಬ್ಭಾಗವಾಗಲು ಕಾರಣವಾಗಿರಲಿಲ್ಲ. ಮಾನ್ಯ ಇ.ವಿ.ಆರ್. ಪ್ರಚುರಗೊಳಿಸಿದ್ದ ವಿಚಾರವಾದಿ ನೆಲೆಯು ಅಣ್ಣಾದೊರೈಗೆ ಕಿಂಚಿತ್ತಾದರೂ ಪ್ರಸ್ತುತವಾಗಿತ್ತು, ಪ್ರಿಯವಾಗಿತ್ತು. ನಂತರದವರಿಗೆ ಮೂಕಾಂಬಿಕೆ ಹೆಚ್ಚು ಪ್ರಿಯಳಾದಳು. ಆರ್ಥಿಕ ಅಭಿವೃದ್ಧಿ, ಯೋಜನೆ, ಮುಂತಾದವೆಲ್ಲಾ ಇವರಿಗೆ ತೀರಾ ಗೌಣವೆಂದೇ ಹೇಳಬೇಕು. ಜಯಲಲಿತಾ ಅವರಿಗಂತೂ ಅಣ್ಣಾದೊರೈ ಮತ್ತು ಇ.ವಿ.ಆರ್. ಇತಿಹಾಸದಲ್ಲಿ ಆಗಿಹೋದವರೆಂಬ ಪ್ರಜ್ಞೆಯೂ ಇಲ್ಲ; ಆದರೂ ಆಕೆಯ ಪಕ್ಷವೂ ದ್ರಾವಿಡ ಕಳಗಂ ಎಂದೇ ತನ್ನನ್ನು ತಾನು ಕರೆದುಕೊಳ್ಳುತ್ತದೆ. ಅಣ್ಣಾದೊರೈ ನಂತರದ ಕಳಗಂ ರಾಜಕೀಯ ಅಧಿಕಾರಕ್ಕಾಗಿ ಒಂದೊಂದು ಬಾರಿಯೂ ಒಂದೊಂದು ತೆರನಾದ ಸಖ್ಯ ಬೆಳೆಸಿಕೊಂಡಿದೆ. ಅದರಲ್ಲಿ ಏನಾದರೂ ತತ್ತ್ವವಿದೆಯೆಂಬುದನ್ನು ಯಾವ ಸಂಶೋಧನೆಯೂ ಸಿದ್ಧಪಡಿಸಲಾರದು. ಕರುಣಾನಿಧಿ ಮತ್ತು ಜಯ ಲಲಿತಾ ಕಳಗಂಗಳು ಜಾತ್ಯತೀತವೂ ಆಗುತ್ತವೆ, ಮತೀಯವೂ ಆಗುತ್ತವೆ. ಬೇರೆಯವರು ತಮ್ಮ ಅನುಕೂಲಕ್ಕೆ ಇವರನ್ನು ರೂಢಿಸಿ ಕೊಳ್ಳುವಂತೆ ಇವರೂ ಬೇರೆಯವರನ್ನು ಪೋಷಿಸುತ್ತಾರೆ, ಇಲ್ಲವೆ ಪೋಷಿಸುವವರಂತೆ ತೋರ್ಪಡಿಸಿಕೊಳ್ಳುತ್ತಾರೆ. ಎರಡು ಪಕ್ಷಗಳೂ ಬೇರೆಬೇರೆ ಕಾಲಗಳಲ್ಲಿ ವಾಜಪೇಯಿ ಸರ್ಕಾರದಲ್ಲಿ ಸೇರಿಕೊಂಡಿವೆ ಮತ್ತು ಹೊರನಡೆದಿವೆ. ಒಳಗಿದ್ದಾಗ ಅವರನ್ನು 'ಮತೀಯ'ವೆಂದು ದೂಷಿಸಿದವರೇ ಅವರು ಹೊರಬಂದಾಗ 'ಜಾತ್ಯತೀತ'ರೆಂದು ಹಾಡಿ ಹೊಗಳಿ ತಬ್ಬಿಕೊಂಡಿರುವುದುಂಟು.

ವಾಜಪೇಯಿ ಸರ್ಕಾರದಲ್ಲಿ ಭಾಗಿಯಾಗಿದ್ದಾಗ ಕರುಣಾನಿಧಿಯವರ ಕಳಗಂ ಎಂದೂ ಒಂದು ಕಿರುಬೆರಳನ್ನು ಅಲುಗಾಡಿಸದೆ 'ತಥಾಸ್ತು' ಪಕ್ಷವಾಗಿ ನಿದ್ದೆ ಹೋಗಿತ್ತು; ಸಾರ್ವಜನಿಕ ಆಸ್ತಿಯ ಲೂಟಿಯಾದಾಗ ಶೌರಿಯ ಕ್ರಮವನ್ನು ಪ್ರಶ್ನಿಸಲಿಲ್ಲ, ಮುರಳಿ ಮನೋಹರ ಜೋಶಿಯ ಶಿಕ್ಷಣ ಕ್ಷೇತ್ರದ ದಾಂಧಲೆಯನ್ನು ಟೀಕಿಸಲಿಲ್ಲ, ಫರ್ನಾಂಡೀಸ್‌ರ ವಿರುದ್ಧದ ಆರೋಪಗಳ ಬಗ್ಗೆ ಚಕಾರವೆತ್ತಲಿಲ್ಲ, ಮೋದಿಯ ಹಿಂಸಾಕೃತ್ಯಗಳಿಂದ ಬೆಚ್ಚಿ ಬೀಳಲಿಲ್ಲ. ವಾಜಪೇಯಿ ಪಕ್ಷದ ಕಾರ್ಯಸೂಚಿಯನ್ನು ಕಳಗಂ ಸೈದ್ಧಾಂತಿಕವಾಗಿ ಹೇಗೆ ಸ್ವೀಕರಿಸಿತೆಂಬುದು ಯಕ್ಷಪ್ರಶ್ನೆಯಾಗಿಯೇ ಉಳಿದಿದೆ. ಕಡೆಗೆ ದುರ್ದರ್ಶನ ಇತ್ಯಾದಿ ಮಾಧ್ಯಮಗಳ ಮೂಲಕ ಹಿಂದಿ ಹೇರಿಕೆಯನ್ನು ಸಹ ಕಳಗಂ ಪ್ರತಿಭಟಿಸಲಿಲ್ಲ. ಮುರಸೋಳಿ ಮಾರನ್‌ರ ಆಸ್ಪತ್ರೆ ಖರ್ಚು ಅನಗತ್ಯವೆನಿಸುವವರೆಗೂ ಕರುಣಾನಿಧಿ ಪಕ್ಷ ವಾಜಪೇಯಿ ಸರ್ಕಾರದ ನೆಚ್ಚಿನ ಭಂಟನಾಗಿದ್ದು, ಈಗ ಕಾಂಗ್ರೆಸ್ ಇತ್ಯಾದಿ ಪಕ್ಷಗಳ ಜೊತೆ ಸೇರಿಕೊಂಡಿದೆ. ಅಂದು ಬೆಂಬಲಿಸಿದ್ದನ್ನೆಲ್ಲಾ ಇಂದು ವಿರೋಧಿಸುವ ಕಳಗಂ ಖಂಡಿತ ನಂಬಿಕೆಗೆ ಅರ್ಹವಲ್ಲ. ಅದಕ್ಕೆ ಸಿದ್ಧಾಂತದ ಲವಲೇಶ ಸ್ಪರ್ಶವೂ ಇದ್ದಂತಿಲ್ಲ. ಎಂಟು ಜನ ಮಂತ್ರಿಗಳನ್ನು ಕೇಂದ್ರ ಸರ್ಕಾರದೊಳಕ್ಕೆ ನುಗ್ಗಿಸುವ ವ್ಯವಹಾರ ಜಾಣ್ಮೆ, ಸ್ವಾರ್ಥ ಬುದ್ಧಿ ಮತ್ತು ಸಮಯಸಾಧಕತನ ಈ ಪಕ್ಷಕ್ಕಿದೆ. ಅಷ್ಟನ್ನು ಪಡೆದು, 'ದಕ್ಷಿಣ ತಮಿಳುನಾಡಿಗೆ ಸಂಪುಟದಲ್ಲಿ ಪ್ರಾತಿನಿಧ್ಯ ಬೇಕು' ಎನ್ನುವ ಕಪಟ ರಾಜಕಾರಣ ಕರುಣಾನಿಧಿಯವರದು. ಅವರೇ ಏಕೆ ಎಂಟು ಸ್ಥಾನಗಳ ಪೈಕಿ ಒಂದನ್ನು ಆ ಭಾಗಕ್ಕೆ ಕೊಡಲಿಲ್ಲ? ದಯಾನಿಧಿ ಮಾರನ್‌ಗೆ ಇಂಥದೇ ಖಾತೆ ಬೇಕೆಂದು ಚಂಡಿ ಹಿಡಿಯುವ ಈ ಪಕ್ಷಕ್ಕೆ ಸಂಮಿಶ್ರ ಸರ್ಕಾರದ ಪ್ರಾಥಮಿಕ ನೀತಿಗಳ ಬಗ್ಗೆ ಯಾವ ಗೌರವವಿದೆ? ಕಾವೇರಿ ನೀರಿನ ಬಗೆಗಿನ ಏಕಮೇವ ಅಂಶ ಈ ಪಕ್ಷಕ್ಕೆ ರಾಜನೀತಿ, ಚುನಾವಣೆಗೆ ಅದೇ ಪ್ರಮುಖ ವಿಷಯ. ಪ್ರಗತಿಪರ ಐಕ್ಯ ಒಕ್ಕೂಟದ ಕೇಂದ್ರ ಸರ್ಕಾರದಲ್ಲಿ ಇಂತಹ ಪಕ್ಷಗಳೂ ಇರುವುದರಿಂದ ಅತಿಹೆಚ್ಚಿನ ಎಚ್ಚರ ಅಗತ್ಯ. ''ಇಂತಹ ಸ್ನೇಹಿತರಿದ್ದರೆ ಇನ್ನು ಶತ್ರುಗಳು ಏಕೆ ತಾನೆ ಬೇಕು'' ಎಂಬ ಪರಿಸ್ಥಿತಿ ಉದ್ಭವವಾಗದಂತೆ ವಿಚಕ್ಷಣೆಯಿಂದ ಕೆಲಸ ಮಾಡಬೇಕಾದ್ದು ಕಾಂಗ್ರೆಸ್, ಕಮ್ಯುನಿಸ್ಟ್, ಮುಂತಾದ ಪಕ್ಷಗಳ ಹೊಣೆಯಾಗಿರುತ್ತದೆ.

[signature]

ತಿಂಗಳ ಪತ್ರಿಕೆ
ಹೊಸತು
ನೆನ್ನೆಯು ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

ಶನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
☎ : ೦೮೦-೨೨೨೫೧೬೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೪೨೪೩೦೨




ಜೂನ್ ಸಂಚಿಕೆ

ಆರೋಗ್ಯವಂತ ಶಿಶು 'ಪರಾಗ'ಳ ಆಕರ್ಷಕ ವರ್ಣ ಪಾರದರ್ಶಿಕೆ ಮುಖಪುಟ ಹೊಂದಿದ ಈ ಮಾಸದ 'ಹೊಸತು' ಮನಮೋಹಕ ವಾಗಿತ್ತು.

ಬೆಂಗಳೂರು **ನೆ. ಲ. ರಾಮಮೂರ್ತಿ**

ಪತ್ರಗಳ ಪೈಕಿ ಬಸವರಾಜ ವಕ್ಕುಂದ ಅವರು 'ಸುಳ್ಳು ದೂರಿನ ಕಾರಣದಿಂದ' ಕಾರಾಗೃಹಕ್ಕೆ ಹೋಗಿದ್ದುದಾಗಿ ಹೇಳಿ ಜಾಮೀನು ದೊರಕಲಿಲ್ಲ ವೆಂದು ವ್ಯಸನ ವ್ಯಕ್ತಪಡಿಸಿದ್ದಾರೆ. ಅವರ ಒಂದು ಕವನವೂ ಪತ್ರದ ಜೊತೆ ಪ್ರಕಟವಾಗಿದೆ. ಆದರೆ ಅವರನ್ನು ನೇರವಾಗಿ ಬಲ್ಲವರು ಇಡೀ ಪತ್ರವನ್ನು ನಿರಾಕರಿಸಬೇಕಾಗುತ್ತದೆ. ಒಂದು ಕಾಲೇಜಿನಲ್ಲಿ ಕೆಲಸ ಮಾಡುತ್ತಾ ಅವರು ಹತ್ತಾರು ವಂಚನೆಯ ಪ್ರಕರಣ ಗಳಲ್ಲಿ ಪಾತ್ರವಹಿಸಿದ್ದರೆಂಬುದು ಪತ್ರಿಕೆಗಳಲ್ಲಿ ಜಗಜ್ಜಾಹೀರಾಗಿತ್ತು. ಸಂಪಾದಕರು ಅದನ್ನು ಗಮನಿಸಿರಲಿಲ್ಲವೆಂದು ತೋರುತ್ತದೆ. ಅವರ ಡಾಂಭಿಕ ಪತ್ರ ಮತ್ತು ಕವನ ಪ್ರಕಟವಾಗಿರುವುದೇ ಇದಕ್ಕೆ ಸಾಕ್ಷಿ. ಇಂತಹ ಅಚಾತುರ್ಯ ನಡೆಯಬಾರದೆಂದು ಸೂಚಿಸಬಯಸುತ್ತೇನೆ.

*ಬೆಂಗಳೂರು* **ಶ್ರೀನಾಥ**

ಆರ್. ತಾರಿಣಿ ಶುಭದಾಯಿನಿ ಅವರ 'ರಸ್ತೆಯಲ್ಲಿ ಮೈಚಾಚಿ ಮಲಗಿದ ದೇವರು' ಮತ್ತು ಕೆ. ಷರೀಫಾ ಅವರ 'ಚಳಿಗಾಲ' ತುಂಬಾ ಉತ್ತಮ ಕವನಗಳಾಗಿವೆ. ವಸುಮತಿ ಉಡುಪ ಅವರ 'ಮನೆಯೆಂಬ ಕಸದ ತೊಟ್ಟಿ' ಇಷ್ಟವಾಯಿತು. ಒಂದು ಪುಟ್ಟ ಮನೆಯಲ್ಲಿ ನಮಗೆ ಗೊತ್ತಿಲ್ಲದ ಎಷ್ಟೊಂದು 'ವಸ್ತು'ಗಳು ಅಡಕವಾಗಿರುತ್ತವೆ ಎಂದೂ ಈ ಬರಹದಲ್ಲಿ ಇದೆ. 'ಮನೆ' ಒಂದು ಪುಟ್ಟ ಮ್ಯೂಸಿಯಂ ಇದ್ದ ಹಾಗೆ. 'ಮನೆ' ಎಂದಿಗೂ 'ಕಸದ ತೊಟ್ಟಿ' ಆಗದು!

*ಶಿವಮೊಗ್ಗ* **ಪಿ. ಗೋವಿಂದರಾಜ್**

ಶ್ರೀ ರಾಮಲಿಂಗಪ್ಪ ಟಿ. ಬೇಗೂರು ಅವರ ''ಕುಮಾರವ್ಯಾಸನಲ್ಲಿ ಕುಲ ಚರ್ಚೆ'' ಲೇಖನ ತುಂಬಾ ಅರ್ಥಪೂರ್ಣ ಮತ್ತು ಅಧ್ಯಯನಾರ್ಹವಾಗಿದೆ. ಕುಲದ ಚಲನೆ-ಚರ್ಚೆಗಳು ಕುರಿತಂತೆ ಇಡೀ ಕನ್ನಡ ಕಾವ್ಯವನ್ನು ಮತ್ತೊಮ್ಮೆ ಓದುವ ಮತ್ತು ವಿಶ್ಲೇಷಿಸುವ ಅನಿವಾರ್ಯತೆ ಇರುವುದನ್ನು ಪ್ರಸ್ತುತ ಲೇಖನ ಹೇಳುತ್ತದೆ. ಇದಕ್ಕಾಗಿ ಬೇಗೂರು ಅಭಿನಂದನಾರ್ಹರು.

*ಶಿವಮೊಗ್ಗ* **ಡಾ|| ರಂಗರಾಜ ವನದುರ್ಗ**

ಆರೋಗ್ಯವಂತ ಶಿಶುವಿನ ಮುಖಪುಟ ಹೊತ್ತ 'ಹೊಸತು' ಸಮಯೋಚಿತವಾಗಿ ಆಕರ್ಷಿಸಿದೆ. ಸಂಪಾದಕೀಯದ ಚುನಾವಣಾ ವಿಶ್ಲೇಷಣೆ ಅರ್ಥಗರ್ಭಿತವಾಗಿತ್ತು. ಕೃಷ್ಣಾ ಮೇಲ್ದಂಡೆ ಯೋಜನೆ ಕಥೆ ಕೇಳಿ ಬೇಸರವಾಯಿತು. ಸಂಸ್ಕೃತ ಭಾಷೆಯ ಅಧ್ಯಯನ ವ್ಯಾಪ್ತಿ ಸಂಸ್ಕೃತ ಪ್ರಿಯರಿಗೆ ತುಂಬಾ ಅಚ್ಚುಮೆಚ್ಚು.

ಪಾಂಡವಪುರ **ಆ. ಮೃತ್ಯುಂಜಯ**

ಸಂಪಾದಕೀಯ ತುಂಬ ಖಾರ, ಕಟುವ್ಯಂಗ್ಯ ಗಳಿಂದ ತುಂಬಿದೆ. ಕಮ್ಯುನಿಸ್ಟರು ಈ ಸಲವೂ ಆಡಳಿತದಿಂದ ಹೊರಗುಳಿಯುವ ನಿರ್ಧಾರವನ್ನು




ನೀವೂ ಟೀಕಿಸಿರುವಿರಿ. ನೀವೇ ಬರೆದಿರುವಂತೆ ಕಮ್ಯುನಿಸ್ಟ್ ಪಕ್ಷದ ಅದ್ಭುತ ಗೆಲುವು ಕೇವಲ ಅದರ ಭದ್ರಕೋಟೆ ಎನ್ನಿಸಿದ ಮೂರೇ ರಾಜ್ಯಗಳಿಂದಾಗಿಯಲ್ಲವೇ? ಆದರೂ ಕೇಂದ್ರ ಆಡಳಿತದಲ್ಲಿ ಅದಕ್ಕೆ ನಿರ್ಣಾಯಕ ಶಕ್ತಿ ಇದೆ ಎಂದು ಒಪ್ಪಲೇಬೇಕು.

ಸಾಗರ **ಬ. ನಾ. ರಘುರಾಮ**

**ಗೋವಿಂದರಾಯರ ಲೇಖನದ ಫಲಶ್ರುತಿ**

ಜಿ.ಕೆ.ಜಿ.ಯವರ ಲೇಖನ ಗಯಟೆಯ 'ಉದಾರ ವಾದಿ ಭಾವನೆ ಇರಬಹುದೇ ವಿನಃ, ಉದಾರವಾದಿ ತತ್ವವಲ್ಲ' ಎನ್ನುವ ವಾಕ್ಯವನ್ನು ನೆನಪಿಸುವಂತಿದೆ. ಉದಾರವಾದಿತನ ಒಂದು ಐಡಿಯಾಲಜಿಯಾಗಿ ಬಿಟ್ಟಾಗ, ಗೋವಿಂದರಾಯರ ಲೇಖನದಲ್ಲಿರುವ ವಿರೋಧಾಭಾಸಗಳು ಸೃಷ್ಟಿಯಾಗುತ್ತವೆ. ತಾನು ನಿಂತ ನೆಲೆಯೊಂದನ್ನು ಬಿಟ್ಟು ಮಿಕ್ಕ ಎಲ್ಲವನ್ನೂ ವಿಮರ್ಶಾತ್ಮಕವಾಗಿ ನೋಡಬಲ್ಲ ಉದಾರವಾದಿ 'ಆತ್ಮ ವಿಮರ್ಶೆ'ಯಿಂದಾಗಿಯೇ ಅಲ್ಲವೇ ಮಿಲ್‌ನಂಥ ಲಿಬರಲ್ ಕಡೆಗೆ ವಸಾಹತುಶಾಹಿಯನ್ನು ಸಮರ್ಥಿಸುವಹಾಗಾಗಿದ್ದು?

ಪ್ರಜಾಪ್ರಭುತ್ವ ಒಂದು ಧರ್ಮ, ರಾಜಕೀಯ ನೀತಿಯಲ್ಲ ಎಂದು ಹೇಳುತ್ತಲೇ, ಜಿ.ಕೆ.ಜಿ. ಪ್ರಭುತ್ವ ಜನರ ಮೇಲೆ ಶಸ್ತ್ರಗಳನ್ನು ಬಳಸುವುದನ್ನು ಸಮರ್ಥಿಸಿ ಕೊಂಡಿದ್ದಾರೆ. ಮತ್ತೆ 'ಹಿಂಸೆ, ಹಿಂಸೆಯನ್ನು ಮಾತ್ರ ಹುಟ್ಟುಹಾಕಬಲ್ಲದು' ಎನ್ನುತ್ತಾ, ಜನ ಯಾಕೆ ಸಶಸ್ತ್ರ ಹೋರಾಟಕ್ಕೆ ಇಳಿಯುತ್ತಾರೆ ಎಂಬುದನ್ನು ಮರೆಯು ತ್ತಾರೆ. ಅವರು ಇಂದು ಮೆಚ್ಚಿಕೊಳ್ಳುವ ಪ್ರಜಾಪ್ರಭುತ್ವ ಮತ್ತು ನಾಗರಿಕ ಹಕ್ಕುಗಳು ಕೂಡ ಇತಿಹಾಸದಲ್ಲಿ ಕೇವಲ ಶಾಂತಿ, ಮಾತುಕತೆಗಳಿಂದ ಮೂಡಿ ಬಂದದ್ದಲ್ಲ. ದೇಶಕ್ಕಾಗಿ ಪ್ರಾಣತ್ಯಾಗವನ್ನು 'ಬಾಲಿಶ ರೊಮ್ಯಾಂಟಿಕ್ ಭಾವ' ಎನ್ನುವ ಜಿ.ಕೆ.ಜಿ., ಅದೇ ಭಾವವೇ ಅವರು ಆರಾಧಿಸುವ ಸ್ವಾತಂತ್ರ್ಯವನ್ನು ತರಲು ನೆರವಾಯಿತು ಎನ್ನುವುದನ್ನು ಗಮನಿಸದಿದ್ದರೆ ಹೇಗೆ?

ಅದೆಲ್ಲಾ ಇರಲಿ, ನೂರಕ್ಕೆ ೯೫ ಜನ ರಾತ್ರೋ ರಾತ್ರಿ ಸ್ವತಂತ್ರರಾದದ್ದು ಯಾವಾಗ? ಎಲ್ಲಿ? ಹೇಗೆ? ಬಹುಶಃ ಇದು ರೊಮ್ಯಾಂಟಿಕ್ ಭಾವ ಅಲ್ಲದಿರ ಬಹುದು. ಈ ''ವಿಚಾರವಾದ''ವೇ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಕಾಶ್ಮೀರ, ಈಶಾನ್ಯ ಭಾರತದ ಜನ ಅಥವಾ ನಕ್ಸಲೀಯರನ್ನು ಸ್ತಿಮಿತ ತಪ್ಪಿದವರ ಹಾಗೆ ಕಾಣುವಂತೆ ಮಾಡುತ್ತದೆ. ಈ ಹೋರಾಟಗಳು ಜನ ಬೆಂಬಲವಿಲ್ಲದೆ ಕೇವಲ ಕೆಲವೇ ಮಂದಿ ದಾರಿ ತಪ್ಪಿದವರಿಂದ ನಡೆಸಲ್ಪಡುತ್ತಿದೆ ಎಂದು ಭಾವಿಸಿದರೆ, ಅದಕ್ಕಿಂತಲೂ ರೊಮ್ಯಾಂಟಿಕ್ ಕಲ್ಪನೆ ಬೇರೊಂದಿಲ್ಲ.

ಆದರೆ ಜಿ.ಕೆ.ಜಿ.ಯವರ ನಿಜವಾದ ತಕರಾರು ಗುಪ್ತವಾಗಿ ಸಶಸ್ತ್ರ ಹೋರಾಟಗಾರರ ಧೋರಣೆ ಯನ್ನು ಸಮರ್ಥಿಸುವವರ ಬಗ್ಗೆ ಇದ್ದಂತಿದೆ. ಇದು ಅಧರ್ಮವಾದ್ದರಿಂದ ಎರಡರಲ್ಲಿ ಒಂದನ್ನು ಮಾತ್ರ ಆಯ್ಕೆ ಮಾಡಬೇಕೆಂಬ ಫರ್ಮಾನನ್ನೂ ಅವರು ಹೊರಡಿಸಿದ್ದಾರೆ. ಹಾಗಾದರೆ ಸಶಸ್ತ್ರ ಹೋರಾಟ ಅಪ್ರಜಾತಾಂತ್ರಿಕವೆ? ವ್ಯವಸ್ಥೆಯನ್ನು ಪಲ್ಲಟ ಗೊಳಿಸದೆ, ಸ್ತಿಮಿತ ತಪ್ಪದ ನಾಗರಿಕ ಜನ ಮಾತ್ರ ಧರಣಿ, ಮಾತುಕತೆ ಇತ್ಯಾದಿಗಳ ವಾರಸುದಾರರೆ? ಹಾಗಿದ್ದಲ್ಲಿ ಇಂದು ಆಂಧ್ರ ಸರ್ಕಾರ ಮತ್ತು ನಕ್ಸಲೀಯರ ಜತೆ ಮಾತುಕತೆಯ ಸಾಧ್ಯತೆಯನ್ನೇ ನಿರಾಕರಿಸಿದಂತೆ. ವಾಸ್ತವದಲ್ಲಿ ಎಲ್ಲೆಲ್ಲಿ ಸಶಸ್ತ್ರ ಹೋರಾಟವಿದೆಯೋ ಅಲ್ಲೆಲ್ಲಾ ಮಾತುಕತೆಯ ಅವಕಾಶವನ್ನು ನಿರಾಕರಿಸಲಾಗಿದೆಯೇ ಹೊರತು, ಹೋರಾಟಗಾರರು ಅಂಥ ಸಾಧ್ಯತೆಯನ್ನು ಎಂದೂ ತಿರಸ್ಕರಿಸಿಲ್ಲ. ಪ್ರಜಾ ವಿಮೋಚನೆ ಚಳುವಳಿಯನ್ನು ಹತ್ತಿಕ್ಕುವ ಪ್ರಭುತ್ವಕ್ಕೆ ಮಾತ್ರ ಜಿ.ಕೆ.ಜಿ.ಯವರ ವಾದ ರುಚಿಸಬಲ್ಲದು.

ಅಹಿಂಸೆ, ಉದಾರವಾದ ಇತ್ಯಾದಿ ನೆಲೆಯಿಂದ ಹೊರಟ ಜಿ.ಕೆ.ಜಿ.ಯವರ ಮಾತು ಅರಿವಾಗದೋಪಾದಿ ಯಲ್ಲಿ ಹಿಂಸೆಯನ್ನೇ ಪ್ರಚೋದಿಸುವ ಪ್ರಭುತ್ವವಾದಿ ನೆಲೆ ತಲುಪುವುದು ದೊಡ್ಡ ವ್ಯಂಗ್ಯವಲ್ಲವೆ?

ಬೆಂಗಳೂರು **ವಿ. ಎಸ್. ಶ್ರೀಧರ**

**ಹಿಂದುತ್ವದ ಸ್ವರೂಪ**

ಭಾರತೀಯ ಧಾರ್ಮಿಕತೆಯನ್ನು ಅತ್ಯಂತ ಕನಿಷ್ಠ ಗೊಳಿಸಿ ಕೇವಲ ಹಿಂದುವಾಗಿರಿಸಿ ಅಲ್ಲಿ ಎಲ್ಲಾ ಅವ್ಯವಸ್ಥೆಗಳನ್ನು ತುಂಬಿ ರಾಜಕೀಯ ಲಾಭ ಹಾಗೂ ಸಾಮಾಜಿಕ ದಿವಾಳಿತನಕ್ಕೆ ಬಳಸಿಕೊಂಡಿರುವುದು ಭಾರತೀಯರ ದುರಂತ. ಪದ್ಧತಿಗಳು ಹೊಸತನದ

ಹಾದಿಗಳಾಗಿ ಧರ್ಮ ಮತ್ತು ಜಾತಿ ವಿಂಗಡಣೆಗಳು ಸಾಮಾಜಿಕ ಪರಿವರ್ತನೆಗೆ ಸಾಧನಗಳಾದಾಗ ಹಿಂದುತ್ವದ ನಾಶವಾಗಿ ಭಾರತೀಯತೆ ಬೆಳೆಯಬಲ್ಲದು.

*ಬೆಂಗಳೂರು* ***ನರೇಂದ್ರ ಸಿರಕಜೆ***

**ಕನ್ನಡತನ**

ಡಾ|| ಆರ್. ವಿ. ಭಂಡಾರಿಯವರ 'ಕನ್ನಡ ಏಕೆ ಉಳಿಯಬೇಕು ?' ನಿಜಕ್ಕೂ ಕನ್ನಡಿಗರ ಕಣ್ತೆರೆಸುವಂತಹ ಲೇಖನ. ದೈನಂದಿನ ವ್ಯವಹಾರಗಳಲ್ಲಿ ಕನ್ನಡವನ್ನು ಬಳಸುವುದು ನಮ್ಮ ಜನರಿಗೆ ಮರತೇ ಹೋಗಿದೆ. ಕೂರಿಯರ್‌ಗಳು, ಬಹುರಾಷ್ಟ್ರೀಯ ಸಂಸ್ಥೆಗಳು ಕನ್ನಡ ಬಳಸುವುದಿರಲಿ, ಸರಕಾರಿ ಸಂಸ್ಥೆ, ಅನುದಾನಿತ ಸಂಸ್ಥೆಗಳೇ ಕನ್ನಡ ಬಳಸುವುದರಲ್ಲಿ ಬಹಳ ಹಿಂದಿವೆ. ಇನ್ನು ನ್ಯಾಯಾಲಯಗಳಲ್ಲಿ ಕನ್ನಡವನ್ನು ಬಳಸಲು ಇರುವ ಮಡಿವಂತಿಕೆಯನ್ನು ಏನೆಂದು ಹೇಳಬೇಕೋ ತಿಳಿಯುತ್ತಿಲ್ಲ. ಕನ್ನಡಿಗರೇ ಇಲ್ಲಿ ಕನ್ನಡವನ್ನು ಬಳಸುತ್ತಿಲ್ಲ.

*ಮೈಸೂರು* ***ಕೊ. ಸು. ನರಸಿಂಹಮೂರ್ತಿ***

**ಬದಲಾದ ಸನ್ನಿವೇಶದಲ್ಲಿ ಎಡಪಕ್ಷಗಳು**

ವಿಶ್ವದ ಅತೀ ದೊಡ್ಡ ಪ್ರಜಾಪ್ರಭುತ್ವ ದೇಶವೆನಿಸಿಕೊಂಡ ಭಾರತದಲ್ಲಿ ಚುನಾವಣೆ ಮುಗಿದು ಕೇಂದ್ರದಲ್ಲಿ ಹೊಸ ಸರ್ಕಾರ ರಚಿತವಾಗಿದೆ. ಕೊನೆಗೂ ಬಿಜೆಪಿ ನೇತೃತ್ವದ ಎನ್.ಡಿ.ಎ. ಮೈತ್ರಿಕೂಟ ಅಧಿಕಾರದಿಂದ ಹೊರದೂಡಲ್ಪಟ್ಟಿದೆ. ಕಾಂಗ್ರೆಸ್, ಜನತಾಪಕ್ಷದ ವಿವಿಧ ದಳ ಬಣಗಳಲ್ಲಿ ಮಾಜಿ ಪ್ರಧಾನಿಗಳಿರುವಂತೆ, ಈ ಬಾರಿ ಬಿ.ಜೆ.ಪಿ.ಗೂ ಓರ್ವ ಮಾಜಿ ಪ್ರಧಾನಿ ಸಿಕ್ಕಿದ್ದಾರೆ !

ತಾನು ಅಧಿಕಾರದಲ್ಲಿದ್ದ ಆರು ವರ್ಷಗಳಲ್ಲಿ ವಿದೇಶಿ ಮೂಲದವರು ಪ್ರಧಾನ ಮಂತ್ರಿಯಾಗದಂತೆ ನಿರ್ಬಂಧಿಸುವ ಕಾನೂನು ತರಲಾರದ ಬಿ.ಜೆ.ಪಿ. ಚುನಾವಣಾ ಪ್ರಚಾರಕ್ಕಾಗಿ ಸೋನಿಯಾ ವಿದೇಶಿ ಮೂಲ ಬಳಸಿಕೊಂಡದ್ದೂ, ಅದರಲ್ಲಿ ವಿಫಲವಾದದ್ದೂ ಈಗ ಇತಿಹಾಸ. ದೇಶಭಕ್ತಿಯ ನಾಟಕದಲ್ಲಿ ಕೊನೆಗೂ ಉಮಾ ಭಾರತಿ, ಸುಷ್ಮಾ ಸ್ವರಾಜ್, ಸರ್ವತ್ಯಾಗಿ ಮಠಾಧೀಶರುಗಳನ್ನು ಬಚಾವು ಮಾಡಿದ್ದು ಸೋನಿಯಾರ ನಿರ್ಧಾರ. ಬಿಜೆಪಿಗೆ ತಿರುಗುಬಾಣವಾಗಿದ್ದೂ ಇದೇ ನಿರ್ಧಾರ.

ಆದರೆ ಅಪರೂಪದ ಈ ಘಟನೆಯಿಂದ ಲಾಭವಾಗಿದ್ದು ಯಾರಿಗೆ ? ಬಿಜೆಪಿಗೆ ಸಿಕ್ಕ ನೈತಿಕ ಜಯ ಎಂದು ಸಂಘಪರಿವಾರದವರು ವಾದಿಸಿದರೂ ರಾಜಕೀಯ ಪರಿಭಾಷೆಯಲ್ಲಿ ಅದೊಂದು ಮೊಂಡುವಾದವೆನಿಸುತ್ತದೆ. ಏಕೆಂದರೆ ಬಿಜೆಪಿಗೆ ಅದೊಂದು ಭಾವನಾತ್ಮಕ ವಿಷಯವಾಗಿದ್ದು ಅದು ಕೈತಪ್ಪಿರುವುದು ಬಿಜೆಪಿಗೆ ಆದ ನಷ್ಟ ಎಂದು ಅಲ್ಪಸ್ವಲ್ಪ ರಾಜಕಾರಣ ತಿಳಿದಿರುವ ಯಾರಿಗೂ ಅರ್ಥವಾಗುತ್ತದೆ. ಒಂದು ವೇಳೆ ಜೀವಬೆದರಿಕೆಯಿಂದ ಸೋನಿಯಾ ಗಾಂಧಿ ಈ ನಿರ್ಧಾರಕ್ಕೆ ಬಂದರೆಂದುಕೊಂಡರೂ ಅದು ಸೋನಿಯಾ ಪರ ಅನುಕಂಪ ನಿರ್ಮಾಣಕ್ಕೆ ಕಾರಣವಾಗಿ ಖಳನಾಯಕನ ಜಾಗದಲ್ಲಿ ಬಿಜೆಪಿ ನಿಲ್ಲುವಂತಾಗುತ್ತದೆ.

ಇದೆಲ್ಲಾ ಹೊಸ ಆರಂಭದ ಸ್ಥಿತಿ. ಆದರೆ ಈ ಹೊಸ ಸರ್ಕಾರ ರಚನೆಯಲ್ಲಿ ನಿರ್ಣಾಯಕ ಪಾತ್ರ ವಹಿಸಿದವರೆಂದು ಬಿಂಬಿತವಾಗಿರುವ ಕಮ್ಯುನಿಸ್ಟರ ಸ್ಥಿತಿ ಬಗ್ಗೆ ಸ್ವಲ್ಪ ನೋಡಬೇಕಾಗುತ್ತದೆ. ಒಂದಂತೂ ನಿಜ, ಬಹಳ ವರ್ಷಗಳಿಂದ ಕಮ್ಯುನಿಸ್ಟರು ಹೇಳುತ್ತಿದ್ದ "ಬಿಜೆಪಿ ಹಠಾವೊ ದೇಶ್ ಬಚಾವೊ" ಘೋಷಣೆ ಯಶಸ್ವಿಯಾಗಿದೆ ಎನ್ನಲಾಗುತ್ತಿದೆ. ಸ್ವಲ್ಪಮಟ್ಟಿಗೆ ಅದು ಹೌದೆನ್ನಬಹುದು. ಆದರೆ "ಬಿಜೆಪಿ ಹಠಾವೋ ಆಗಿದೆ, ದೇಶ ಬಚಾವೊ ಆಗಬೇಕಿದೆ" ಎಂದು ನನಗನಿಸುತ್ತಿದೆ.

ಕೇಂದ್ರದಲ್ಲಿ ಕಾಂಗ್ರೆ ಜೊತೆ ಸೇರಿ ನಾಲ್ಕೈದು ಮಂತ್ರಿ ಸ್ಥಾನ ಗಿಟ್ಟಿಸುವುದಕ್ಕಿಂತ ಎಡಪಕ್ಷಗಳ ಐಕ್ಯತೆಗೆ ಆದ್ಯತೆ ಕೊಡುವ ದೃಷ್ಟಿಯಿಂದ ಸರ್ಕಾರದ ಒಳಹೋಗುವುದು ಬೇಡವೆಂದು ಈ ನಾಲ್ಕೂ ಎಡಪಕ್ಷಗಳು ನಿರ್ಧರಿಸಿವೆ. ಇದಕ್ಕೆ ಪಶ್ಚಿಮ ಬಂಗಾಳ, ಕೇರಳ, ತ್ರಿಪುರಗಳಲ್ಲಿ ಎಡಪಕ್ಷಗಳು ಕಷ್ಟಪಟ್ಟು ಉಳಿಸಿಕೊಂಡು ಬಂದಿರುವ ಕಾಂಗ್ರೆ ವಿರೋಧಿ ರಾಜಕೀಯ ಸಮೂಹಶಕ್ತಿಯೂ ಕಾರಣವಿರಬಹುದು. ಜೊತೆಗೆ ತನಗೆ ಸಿಕ್ಕಿರುವ ಸಂಖ್ಯಾಬಲವೂ ಕಾರಣವಾಗಿರಬಹುದು. ಇತ್ತೀಚಿನ ಒಂದೆರಡು ದಶಕಗಳಲ್ಲಿ ಪಡೆದ ಸಂಖ್ಯೆಗಳಿಗಿಂತ ಹೆಚ್ಚು, ಅರ್ಥಾತ್ ೬೫ ಸ್ಥಾನಗಳನ್ನು ಹೊಂದಿರುವುದು ನಿಜವಾದರೂ ಮ್ಯಾಜಿಕ್ ಸಂಖ್ಯೆ ೨೭೨ಕ್ಕೆ ಹೋಲಿಸಿದಾಗ ಅವುಗಳ ಬಳಿ ಕನಿಷ್ಠ ೧೦೦ ಸ್ಥಾನಗಳಿದ್ದಿದ್ದರೆ ತನ್ನ ಪ್ರಭಾವವನ್ನು ಸಚಿವ ಸಂಪುಟದ ಮೇಲೆ ಪರಿಣಾಮಕಾರಿಯಾಗಿ ಚಲಾಯಿಸಲು ಸುಲಭವಾಗುತ್ತಿತ್ತು ಎಂಬುದೂ ಅಷ್ಟೇ ನಿಜ.

ಆದ್ದರಿಂದಲೇ ಈಗ ರಚನೆಯಾಗಿರುವ ಸಂಯುಕ್ತ ಪ್ರಗತಿಪರ ಒಕ್ಕೂಟ (ಯುಪಿಎ)ದ ಎಲ್ಲ ಪಾಲುದಾರ ಪಕ್ಷಗಳಿಗೆ "ಸಾಮಾನ್ಯ ಕನಿಷ್ಠ ಕಾರ್ಯಸೂಚಿ" (ಕಾಮನ್ ಮಿನಿಮಮ್ ಪ್ರೋಗ್ರಾಂ) ಭಗವದ್ಗೀತೆ, ಬೈಬಲ್, ಕುರಾನ್ ಎಲ್ಲವೂ ಆಗಿರಬೇಕಾಗುತ್ತದೆ. ಅದರ ಇತಿಮಿತಿ ಮೀರದಂತೆ ಕಾಂಗ್ರೆ ಕೂಡ ಬದಲಾಗಬೇಕಾಗುತ್ತದೆ. ಎಲ್ಲಕ್ಕೂ ಮುಖ್ಯವಾಗಿ ಈ ನಿಟ್ಟಿನಲ್ಲಿ ದೇಶದ ಪ್ರಗತಿಪರ, ಜಾತ್ಯಾತೀತ, ಸಮಾಜವಾದಿ ಚಿಂತನೆಯ ಎಲ್ಲಾ ಬುದ್ಧಿಜೀವಿಗಳೂ ಸಮಾಜ ಸುಧಾರಕರೂ, ಸಂಘ ಪರಿವಾರದ ವಿರೋಧಿಗಳೂ ಜೊತೆಜೊತೆಗೆ ಆರ್ಥಿಕತಜ್ಞ ಮಾನವತಾವಾದಿಗಳೂ ಕಾಂಗ್ರೆ ಮತ್ತು ಇತರ ಪ್ರಾದೇಶಿಕ ಪಕ್ಷಗಳ ಮೇಲೆ ಒತ್ತಡ ತರಬೇಕಾಗಿದೆ.

*ಚಿಕ್ಕಮಗಳೂರು* ***ಪಿ. ವಿ. ಲೋಕೇಶ್***

**ಬಿ.ಜೆ.ಪಿ.ಗೆ ಎಲ್ಲಿಂದ ಲಾಭ ?**

ವಾಸ್ತವವಾಗಿ ಮತೀಯವಾದಕ್ಕೆ ಪೂರಕವಾದ ಪರಿಸ್ಥಿತಿಗೆ ಬಹಳ ವ್ಯಾಪಕವಾದ ವೇದಿಕೆ ಇದೆ. ಈ ದೇಶದ ಬಹುರೂಪಿ ಸಂಸ್ಕೃತಿಯ ಸ್ಥಿತಿಯೋ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಆರ್ಥಿಕ ಸನ್ನಿವೇಶಗಳೋ ಗೊತ್ತಿಲ್ಲ; ಅಂತೂ ಭಾರತೀಯ ಸಮಾಜ ಆಧುನಿಕತೆಯನ್ನು ಸ್ವೀಕರಿಸುವುದು ಬಹಳ ನಿಧಾನಗತಿಯಲ್ಲಿ. ನಮ್ಮಲ್ಲಿ ಬಹಿರಂಗದ ವ್ಯವಹಾರದಲ್ಲಿ ಅತ್ಯಾಧುನಿಕರಾಗಿ ಕಾಣಿಸುತ್ತಾ ಅಂತರಂಗದಲ್ಲಿ ಸಂಪ್ರದಾಯವಾದಿಗಳೇ ಆಗಿರುವ ಬಹಳ ಮಂದಿಯನ್ನು ಕಾಣಬಹುದು. ಸಾಹಿತಿಗಳೂ ಸೇರಿದಂತೆ ಆಧುನೀಕರಣಕ್ಕೆ ವಿರುದ್ಧ ವಾದ ಮನೋಧರ್ಮವೊಂದು ಭಾರತೀಯ ಸಮಾಜದಲ್ಲಿ ಸದಾ ಜಾಗೃತವಾಗಿದೆ. ದೇಸೀ ಸಂಸ್ಕೃತಿ ಆರೋಗ್ಯಕರ ರೀತಿಯಲ್ಲಿ ಉಳಿಯಬೇಕಾದರೆ ಸಹನೀಯ ಅರ್ಥವ್ಯವಸ್ಥೆ ಅದನ್ನು ಬೆಂಬಲಿಸಬೇಕಾಗುತ್ತದೆ. ಉದಾಹರಣೆಗೆ, ದೊಂಬರ ಕುಣಿತ ಉಳಿಯಬೇಕಾದರೆ ದೊಂಬರು ಜೀವಿಸಲು ಬೇಕಾದಷ್ಟು ಆರ್ಥಿಕ ಪರಿಕರಗಳು ಅವರಿಗಿರಬೇಕು. ಬದುಕಲು ಸಾಧ್ಯವಿಲ್ಲವಾದಾಗ 'ಕುಣಿ' ಅಂದರೆ ಅವರು ಕುಣಿಯಲಾರರು. ಆಗ ದೊಂಬರ ಕುಣಿತದ ವೀಡಿಯೊ ರೆಕಾರ್ಡ್ ಮಾಡಿ ಇಟ್ಟು 'ಹಾಂ, ನಮ್ಮ ಸಂಸ್ಕೃತಿ ಉಳಿಯಿತು' ಅಂತ ಹೆಮ್ಮೆಪಟ್ಟುಕೊಂಡರೆ ಹೇಗೆ ? ನಮ್ಮ ಮಾಧ್ಯಮಗಳು ಮನಮೋಹನರನ್ನು ಅದ್ಭುತ ಆರ್ಥಿಕ ಚಿಂತಕ ಎಂದು ವರ್ಣಿಸುತ್ತಿವೆ. ಆದರೆ ಮನಮೋಹನರ ಭಟ್ಟಂಗಿಗಳಿಗೆ ವಾಜಪೇಯಿ ಸರಕಾರದ ಆರ್ಥಿಕ ಧೋರಣೆಯನ್ನು ಟೀಕಿಸುವ ನೈತಿಕ ಅಧಿಕಾರವಿಲ್ಲ. ದೇಶವನ್ನು ಬಹುರಾಷ್ಟ್ರೀಯ ಕಂಪೆನಿಗಳಿಗೆ ಹರಾಜು ಹಾಕಲು ಕಲಿಸಿಕೊಟ್ಟದ್ದೇ ಮನಮೋಹನರು. ಈಗ ಮಾನವೀಯ ಮುಖದಿಂದ ಆರ್ಥಿಕ ಸುಧಾರಣೆ ಎಂಬ ಹೊಸ ವರಸೆ ಪ್ರಾರಂಭಿಸಿದ್ದಾರೆ. ಹಾಗಿದ್ದರೆ ೧೯೯೧ರಲ್ಲಿ ಇದೇ ಆರ್ಥಿಕ ಸುಧಾರಣೆಯನ್ನು ಜಾರಿಗೊಳಿಸುವಾಗ ಅದರಲ್ಲಿ ಮಾನವೀಯತೆ ಇರಬೇಕೆಂದು ಈ "ಶ್ರೇಷ್ಠ" ಆರ್ಥಿಕ ಚಿಂತಕರಿಗೆ ತಿಳಿದಿರಲಿಲ್ಲವೇ ?

*ಬೆಳ್ತಂಗಡಿ* ***ಅರವಿಂದ ಚೊಕ್ಕಾಡಿ***




ಖ್ಯಾತ ತುಳು - ಕನ್ನಡ ಸಾಹಿತಿ ಶ್ರೀ ಬಿ. ಎ. ಪ್ರಭಾಕರ ರೈ ಅವರ "ಮದಪ್ಪಂದಿ ನೆಂಪು" ತುಳು ಆತ್ಮಕಥೆ ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿಯ ೨೦೦೩ರ ಸಾಲಿನ ಪ್ರಶಸ್ತಿಗೆ ಆಯ್ಕೆಯಾಗಿದೆ. ಇದು ತುಳು ಸಾಹಿತ್ಯದಲ್ಲಿ ಪ್ರಕಟವಾದ ಪ್ರಪ್ರಥಮ ಆತ್ಮಕಥೆ.

# ಚುನಾವಣೆಯ ಹಿಂದೆ–ಮುಂದೆ

**ಬರಗೂರು ರಾಮಚಂದ್ರಪ್ಪ**

**ಚು**ನಾವಣೆ ಮುಗಿದು ಫಲಿತಾಂಶಗಳು ಪ್ರಕಟವಾಗಿ ಸರ್ಕಾರಗಳು – ಅರೆ ಸರ್ಕಾರಗಳು – ಅಸ್ತಿತ್ವಕ್ಕೆ ಬಂದು ಆಡಳಿತ ನಡೆಸಲಾರಂಭಿಸಿವೆ. ಚುನಾವಣೆಯ ಫಲಶ್ರುತಿ ಕುರಿತು ವಿವಿಧ ವಿಶ್ಲೇಷಣೆಗಳು ನಡೆಯುತ್ತಿವೆ. ಬಿ.ಜೆ.ಪಿ.ಯ ಸೋಲಿಗೆ ಅತಿಯಾದ ಆತ್ಮವಿಶ್ವಾಸ ಕಾರಣವೆಂದೂ ಗುಜರಾತ್ ಘಟನೆಗಳು ಕಾರಣವಲ್ಲವೆಂದೂ ಆರಂಭದಲ್ಲಿ ಹೇಳಿದ್ದ ಮಾನ್ಯ ಶ್ರೀ ವಾಜಪೇಯಿಯವರು ಇದೀಗ – (ದಿನಾಂಕ ೧೨-೬-೨೦೦೪ರಂದು) ಬಿ.ಜೆ.ಪಿ. ಸೋಲಿಗೆ ಗುಜರಾತ್ ಘಟನೆಗಳೂ ಒಂದು ಕಾರಣ ಎಂದಿದ್ದಾರೆ. ಅದೇ ಉಸಿರಿನಲ್ಲಿ ಗುಜರಾತ್ ಸರ್ಕಾರವು ಪರಿಸ್ಥಿತಿಯನ್ನು ಸಮರ್ಥವಾಗಿ ನಿಭಾಯಿಸಿದೆಯೆಂದು ಸಮರ್ಥಿಸಿದ್ದಾರೆ. ಈ ವಾಜಪೇಯಿಯವರೇ ಹೀಗೆ. ಆಯಾ ಸಂದರ್ಭಕ್ಕನುಗುಣವಾಗಿ ಪರಸ್ಪರ ವಿರುದ್ಧವಾದ ಹೇಳಿಕೆಗಳನ್ನು ಕೊಡುವುದರಲ್ಲೇ 'ಮುತ್ಸದ್ದಿತನ'ವನ್ನು ಮೆರೆಯುತ್ತಾರೆ. ವಿವಿಧ ವಲಯದ 'ಮೇಧಾವಿ'ಗಳು ವಾಜಪೇಯಿಯವರ ಹೇಳಿಕೆಗಳಲ್ಲಿ ತಮಗೆ ಬೇಕಾದ್ದನ್ನು ಆರಿಸಿಕೊಂಡು ಹೊಗಳುತ್ತಾರೆ. ವಾಜಪೇಯಿಯವರು ಅಲ್ಲಿ ಅವರಿಗೆ ಇಲ್ಲಿ ಇವರಿಗೆ ಸಮ್ಮತವಾಗುತ್ತ ದಿನಗಳನ್ನು ದೂಡುತ್ತಾರೆ. ಸ್ವಲ್ಪ ಹಿಂದಕ್ಕೆ ಹೋಗಿ ಜ್ಞಾಪಿಸಿಕೊಳ್ಳೋಣ. ವಾಜಪೇಯಿಯವರು ವಿದೇಶದಲ್ಲಿರುವ ಹಿಂದೂ ಸಂಘಟನೆಯ ಸಭೆಯೊಂದರಲ್ಲಿ ಭಾಷಣ ಮಾಡುತ್ತ 'ನಾನು ಸ್ವಯಂಸೇವಕ' ಎಂದು ಘೋಷಿಸುತ್ತ ಆರ್.ಎಸ್.ಎಸ್. ಕಾರ್ಯಸೂಚಿಗೆ ತಮ್ಮ ಬದ್ಧತೆಯನ್ನು ಸಾದರಪಡಿಸಿದರು. ಕೆಲ ವಲಯದಿಂದ ವಿರೋಧ ಬಂದಾಗ ಸ್ವಯಂಸೇವಕ ಎಂದರೆ ದೇಶ ಸೇವಕ ಎಂದು ವ್ಯಾಖ್ಯಾನ ಮಾಡಿದರು. ಆದರೆ ಸ್ವದೇಶದ ವಿಶ್ರಾಂತಿಧಾಮವೊಂದರಿಂದ ವೆಬ್‌ಸೈಟೊಂದಕ್ಕೆ ಲೇಖನ ಬರೆದು ರಾಷ್ಟ್ರೀಯ ಸ್ವಯಂಸೇವಕ ಸಂಘದ ನಿಲುವುಗಳನ್ನು ಪ್ರತಿಪಾದಿಸಿದರು. ರಾಮಜನ್ಮಭೂಮಿ ವಿವಾದದಲ್ಲಿ ತಾನು ಹಿಂದೂ ಮೂಲಭೂತವಾದಿಗಳ ರೀತಿಯಲ್ಲಿಲ್ಲ ಎಂಬ ಅಭಿಪ್ರಾಯ ಮೂಡಿಸುತ್ತ ಬಂದು, ಶ್ರೀರಾಮ ದೇವಾಲಯ ಶಿಲಾನ್ಯಾಸ ಸಮಿತಿಯ ಅಧ್ಯಕ್ಷರ ನಿಧನಕ್ಕೆ ಸಂತಾಪ ಸೂಚಿಸುವಾಗ ಸಂಪೂರ್ಣ ಮೂಲಭೂತವಾದಿಯಾಗಿ ಮಾತನಾಡಿದರು. ವಾಜಪೇಯಿಯವರಾಗಲಿ, ಬೇರೆ ಯಾರೇ ಆಗಲಿ ತಮ್ಮದೇ ಆದ ನೀತಿ ನಿಲುವುಗಳನ್ನು ಹೊಂದಲು ಮತ್ತು ಪ್ರತಿಪಾದಿಸಲು ಸ್ವಾತಂತ್ರ್ಯವಿದೆ, ಅದು ಅವರ ಹಕ್ಕು. ಆದರೆ ದಿನಕ್ಕೊಂದು ಮಾತನಾಡುವುದು, ಬಣ್ಣ ಬದಲಾಯಿಸುವುದು ಹಕ್ಕಿನ ಆತ್ಮವಂಚನೆಯಲ್ಲವೆ? ಇದರ ಬದಲು ಎಲ್.ಕೆ. ಅಡ್ವಾನಿಯವರಂತೆ ಸಾಫ್‌ಸೀದಾ ಇದ್ದರಾಗದೆ? ಅಡ್ವಾನಿಯವರ ಅಭಿಪ್ರಾಯ, ನೀತಿ - ನಿಲುವುಗಳನ್ನು ನನ್ನಂಥವರು ಒಪ್ಪದೆ ಇರಬಹುದು. ಆದರೆ ಅವರ ಅಭಿಪ್ರಾಯಗಳಲ್ಲಿ ಅವರು ಸ್ಪಷ್ಟವಾಗಿದ್ದಾರೆ. ಅವರೊಂದಿಗಿನ ತಾತ್ವಿಕ ಸಂಬಂಧವನ್ನು ಗುರುತಿಸಿಕೊಳ್ಳಲು ಯಾರಿಗೂ ಕಷ್ಟವಾಗುವುದಿಲ್ಲ. ವಾಜಪೇಯಿಯವರದು ಹಾಗಲ್ಲ. ಅಡ್ವಾನಿಯವರ ರೀತಿ ಮಾತನಾಡಿದರೆ ಬಿಜೆಪಿಯಲ್ಲಿ ತಮ್ಮದೇ ಸ್ವತಂತ್ರ ಅಸ್ತಿತ್ವ ಇರುವುದಿಲ್ಲ; ಜೊತೆಗೆ ಬಿಜೆಪಿಯೇತರ ವ್ಯಕ್ತಿ ಮತ್ತು ಪಕ್ಷಗಳ ಬೆಂಬಲ ದೊರಕುವುದಿಲ್ಲ. ಆದ್ದರಿಂದ ಅಧಿಕಾರ ಗಳಿಸಲು ಮತ್ತು ಉಳಿಸಲು ದ್ವಂದ್ವಾತ್ಮಕ ನುಡಿಗಳ ಆಡಿಯಾಳಾಗುವುದು ಅನಿವಾರ್ಯವೆಂಬ ಭಾವನೆ ಅಥವಾ ಕಾರ್ಯತಂತ್ರ ಅವರದ್ದಾಗಿರಬಹುದು. ಜೊತೆಗೆ ಸರಿಯಾದ ಸಂದರ್ಭದಲ್ಲಿ ಮೌನ ವಹಿಸಿದರೆ ಈ ದೇಶದಲ್ಲಿ ಬೇಗ 'ಮುತ್ಸದ್ದಿ'ಯಾಗಬಹುದು. ನಿಷ್ಕ್ರಿಯೆಯಿಂದ ನಸುನಗುತ್ತ ನಿಂತರೆ 'ಮರ್ಯಾದಾ ಪುರುಷ'ರಾಗಬಹುದು. ಕಡೆಗೆ ಶ್ರೀರಾಮನೇ ನಾಚಿ ನೀರಾದರೂ ಆಶ್ಚರ್ಯವಿಲ್ಲ. ಇದು ಪುರಾಣಪ್ರಸಿದ್ಧ ಪುಣ್ಯಭೂಮಿಯ ಮನೋಶಾಸನ! ಅಧಿಕಾರ ಕೇಂದ್ರಿತ ರಾಜಕೀಯದ ಅನುಶಾಸನ!

ಇಲ್ಲಿ ಎನ್.ಡಿ.ಎ. ಮಿತ್ರ ಪಕ್ಷಗಳ ಬಗ್ಗೆ ಪ್ರಸ್ತಾಪಿಸದಿದ್ದರೆ ವಾಜಪೇಯಿಯವರಿಗೆ ಅನ್ಯಾಯ ಮಾಡಿದಂತಾಗುತ್ತದೆ! ಶ್ರೀ ಜಾರ್ಜ್ ಫರ್ನಾಂಡಿಸ್ ಅವರು ಎನ್.ಡಿ.ಎ. ಸಂಚಾಲಕರು. ಹೋರಾಟಗಳಿಂದಲೇ ರೂಪುಗೊಂಡ ಸಮಾಜವಾದಿ ನಾಯಕರು. ಜಾರ್ಜ್ ಫರ್ನಾಂಡಿಸ್ ಅವರ ಸರಳತೆ ಮತ್ತು ಸಂಘರ್ಷಮಯ ಜೀವನದ ಬಗ್ಗೆ ನನಗೆ ಗೌರವವಿದ್ದರೂ ಬಿಜೆಪಿಯ ಶಕ್ತಿವರ್ಧನೆಯಲ್ಲಿ ಇವರ ಪಾತ್ರವೂ ಇದೆಯೆಂದು ಹೇಳಲೇಬೇಕಾಗಿದೆ. ತೊಂಬತ್ತರ ದಶಕದವರೆಗೆ ರಾಷ್ಟ್ರರಾಜಕಾರಣದಲ್ಲಿ ಕಾಂಗ್ರೆಸ್ ಪಕ್ಷದ ವಿರೋಧಕ್ಕೆ ಅದರದೇ ಆದ ಸಮರ್ಥನೆಗಳಿದ್ದವು; ಸಕಾರಣಗಳಿದ್ದವು. ಆದರೆ ತೊಂಬತ್ತರ ದಶಕದಲ್ಲಿ ಸಂಘ ಪರಿವಾರ ಪ್ರೇರಿತ ಕೋಮುವಾದವು ಬಲಾಢ್ಯವಾಯಿತು. ಇದೇ ಸಂದರ್ಭವು ಮುಸ್ಲಿಂ ಮೂಲಭೂತವಾದಿಗಳನ್ನೂ ಪ್ರೇರೇಪಿಸಿತು. ಒಟ್ಟಾರೆ ಹಿಂದೂ - ಮುಸ್ಲಿಂ ಮೂಲಭೂತವಾದಗಳು ಮೇಲುಗೈ ಸಾಧಿಸಲು ಮುಖಾಮುಖಿಯಾದವು. ಕಡೆಗೆ ಹಿಂದೂ ಮೂಲಭೂತವಾದಿಗಳು ಅಧಿಕಾರ ಗ್ರಹಣ ಮಾಡುವ ಮಟ್ಟಕ್ಕೆ ಬಂದರು. ಇಂತಹ ಸನ್ನಿವೇಶದಲ್ಲಿ ಜಾರ್ಜ್ ಫರ್ನಾಂಡಿಸ್‌ರಾದಿಯಾಗಿ ಅನೇಕ ಸಮಾಜವಾದಿಗಳಲ್ಲಿ ಅದೇ ಹಳೆಯ ಕಾಂಗ್ರೆಸ್ ವಿರೋಧಿ ನಿಲುವು ಮುಂದುವರೆಯಿತು. ಮೊದಲ ಶತ್ರುವಾಗಬೇಕಿದ್ದ ಬಿಜೆಪಿ ಮಿತ್ರ ಪಕ್ಷವಾಯಿತು. ಕಾಂಗ್ರೆಸ್ ಮೊದಲ ಶತ್ರುವಿನ ಸ್ಥಾನದಲ್ಲೇ ಉಳಿಯಿತು. ಕಾಂಗ್ರೆಸ್ ಮತ್ತು ಕಮ್ಯುನಿಸ್ಟ್ ಪಕ್ಷಗಳ ವಿರೋಧವೇ ಆದಿ ಮತ್ತು ಅಂತಿಮ ಅಸ್ತ್ರವೆಂದು ಭಾವಿಸಿದವರು ತಾವು ಮಾಡುತ್ತಿರುವ ಐತಿಹಾಸಿಕ ತಪ್ಪನ್ನು ಕಂಡುಕೊಳ್ಳಲಿಲ್ಲ. ಬಿ.ಜೆ.ಪಿ. ಜೊತೆ ಸೇರಿ ಅಧಿಕಾರ ಹಂಚಿಕೊಂಡರು. ನಿಜ; ಈ ಮೂಲಕ ಬಿಜೆಪಿಯಲ್ಲಿದ್ದ ಮೂಲಭೂತವಾದಿ ಶಕ್ತಿಗಳು ಮೇಲುಗೈ ಪಡೆಯದಂತೆ ತಡೆಯಲು ಯತ್ನಿಸಿದರು. ಆದರೆ ಅದೇ ಸಂದರ್ಭದಲ್ಲಿ ಕೋಮುವಾದಿಗಳ ಕುತಂತ್ರಗಳು ಬಲವಾಗಲು ಅಯಾಚಿತ ಶಕ್ತಿಯನ್ನು ಒದಗಿಸಿದರು. ಕಡೆಗೆ ೨೦೦೪ರ ಚುನಾವಣೆಯ ಸಂದರ್ಭದಲ್ಲಿ ಬಿಡುಗಡೆ ಮಾಡಿದ ಎನ್.ಡಿ.ಎ. ಪ್ರಣಾಳಿಕೆಯಲ್ಲಿ ರಾಮಜನ್ಮಭೂಮಿಯ ವಿಷಯವನ್ನು ಸೇರಿಸಿ ಬಿಜೆಪಿಗಿಂತ ತಾವೇನು ಕಡಿಮೆ ಎಂದು ವಿಜೃಂಭಿಸಿದರು. ಅಂದರೆ ಅಂತಿಮವಾಗಿ ಎನ್.ಡಿ.ಎ.ಯಲ್ಲಿನ ಬಿಜೆಪಿ ಯೇತರ ಪಕ್ಷಗಳು ಮಾಡಿದ್ದು ಬಿಜೆಪಿಯ ಬಲವರ್ಧನೆ. ಸಮಯಕ್ಕೊಂದು ಸುಳ್ಳಿನಂತೆ ಒದಗಿಬಂದದ್ದು ವಾಜಪೇಯಿ ಆರಾಧನೆ! ಅವರು ಮೂಲಭೂತವಾದಿ ಯಲ್ಲ, ಉದಾರವಾದಿ ಎಂಬ ಹುಸಿ ಸಮರ್ಥನೆ!

ಶ್ರೀ ವಾಜಪೇಯಿಯವರು ಮೂಲಭೂತವಾದೀ ಚಿಂತನೆಗಳಿಂದ ಮುಕ್ತವಾಗಿದ್ದಾರೆಂದು ಪ್ರತಿಪಾದಿಸಲು ಪುರಾವೆಗಳೇನೂ ಸಿಗುವುದಿಲ್ಲ. ಇವರಿಗೂ ಶ್ರೀ ಅಡ್ವಾನಿಯವರಿಗೂ ಇರುವುದು ಮಾತಿನ ವರಸೆಯಲ್ಲಿನ ವ್ಯತ್ಯಾಸ, ಅಷ್ಟೆ. ತುಂಬಾ ದೂರ ಹೋಗುವುದು ಬೇಡ. ೨೦೦೪ರ ಚುನಾವಣೆಯ ಸಂದರ್ಭದಲ್ಲಿ ವಾಜಪೇಯಿ ಯವರು ತಮ್ಮ ಸ್ವಂತ ನಾಲಿಗೆಯಿಂದಲೇ 'ಎನ್.ಡಿ.ಎ. ಮೈತ್ರಿಕೂಟದ ಸಹವಾಸ ಸಾಕಾಗಿದೆ. ಬಿಜೆಪಿಗೆ ಪೂರ್ಣ ಬಹುಮತ ನೀಡಿ' ಎಂದು ಕೇಳಿದರು. ಈ ಕರೆಯಿಂದ ಮಿತ್ರ ಪಕ್ಷಗಳು ಒಳಗೊಳಗೆ ಬೇಸರಪಟ್ಟಾಗ (ಅವು ಹೊರಗೆ ಬೇಸರ ತೋರಿಸುವ ಶಕ್ತಿ ಕಳೆದು ಕೊಂಡಿದ್ದವಲ್ಲ!) ಮತ್ತೊಂದು ಹೇಳಿಕೆ ಕೊಟ್ಟರು. 'ಎನ್.ಡಿ.ಎ. ಮೈತ್ರಿಕೂಟದ ಹೊರಗೆ ಹೊಸ ಮಿತ್ರರನ್ನೂ ನಾವು ಹುಡುಕುತ್ತೇವೆ' ಎಂದು ಹೇಳಿಕೆ ನೀಡುವುದರ ಮೂಲಕ ಇನ್ನೊಂದು ಅತಿಗೆ ಹೋದರು. ಉತ್ತರಪ್ರದೇಶದಲ್ಲಿ ಸಮಾಜವಾದಿ ಪಕ್ಷಕ್ಕೂ ನಮಗೂ ಹೆಚ್ಚೇನೂ ವ್ಯತ್ಯಾಸವಿಲ್ಲವೆಂದು ಹೇಳುತ್ತ ಮುಸ್ಲಿಮರ

ಬಿ.ಜೆ.ಪಿ.ಯ ಸೋಲಿಗೆ ಅತಿಯಾದ ಆತ್ಮವಿಶ್ವಾಸ ಕಾರಣವೆಂದೂ ಗುಜರಾತ್ ಘಟನೆಗಳು ಕಾರಣವಲ್ಲವೆಂದೂ ಆರಂಭದಲ್ಲಿ ಹೇಳಿದ್ದ ಮಾನ್ಯ ಶ್ರೀ ವಾಜಪೇಯಿಯವರು ಇದೀಗ – (ದಿನಾಂಕ 12-6-2004ರಂದು) ಬಿ.ಜೆ.ಪಿ. ಸೋಲಿಗೆ ಗುಜರಾತ್ ಘಟನೆಗಳೂ ಒಂದು ಕಾರಣ ಎಂದಿದ್ದಾರೆ. ಅದೇ ಉಸಿರಿನಲ್ಲಿ ಗುಜರಾತ್ ಸರ್ಕಾರವು ಪರಿಸ್ಥಿತಿಯನ್ನು ಸಮರ್ಥವಾಗಿ ನಿಭಾಯಿಸಿದೆಯೆಂದು ಸಮರ್ಥಿಸಿದ್ದಾರೆ. ಈ ವಾಜಪೇಯಿಯವರೇ ಹೀಗೆ. ಆಯಾ ಸಂದರ್ಭಕ್ಕನುಗುಣವಾಗಿ ಪರಸ್ಪರ ವಿರುದ್ಧವಾದ ಹೇಳಿಕೆಗಳನ್ನು ಕೊಡುವುದರಲ್ಲೇ 'ಮುತ್ಸದ್ದಿತನ'ವನ್ನು ಮೆರೆಯುತ್ತಾರೆ.

**ಚುನಾವಣೆಗೆ ಮುಂಚೆ ವಾಜಪೇಯಿ ಅಲೆಯೆಂಬುದು ನಿಜವಾಗಿಯೂ ಇತ್ತೆ ಎಂಬುದನ್ನು ಪರಿಶೀಲಿಸಬೇಕು. ವಾಜಪೇಯಿಯವರು ಪಾಕಿಸ್ತಾನದ ಜೊತೆ ನಡೆಸಿದ ಶಾಂತಿ ಮಾತುಕತೆಗಳು ಅವರಿಗೆ ರಾಜತಾಂತ್ರಿಕ ಪ್ರಬುದ್ಧತೆಯ ಹೆಸರನ್ನು ತಂದುಕೊಟ್ಟದ್ದನ್ನು ಖಂಡಿತ ಅಲ್ಲಗಳೆಯಲಾಗದು. (ಆದರೇನು ಮಾಡುವುದು, ಅವರಿಗೆ ನೊಬೆಲ್ ಶಾಂತಿ ಪಾರಿತೋಷಕ ಬರಲಿಲ್ಲ!) ಅಂತೆಯೇ ಆಳದಲ್ಲಿ ಮೂಲಭೂತವಾದಿ ಚಿಂತನೆಗಳಿದ್ದರೂ ಬಿಜೆಪಿಯೇತರ ಮಿತ್ರ ಪಕ್ಷಗಳನ್ನು ಸುಧಾರಿಸುವ ಸೌಜನ್ಯ, ಸಂಯಮಗಳು ಇದ್ದವು. (ಇವು ಇರದಿದ್ದರೆ ಅಧಿಕಾರವೇ ಇರುತ್ತಿರಲಿಲ್ಲ ಎಂಬುದು ಬೇರೆ ಮಾತು).**

ಓಟು ಗಳಿಸಲು ತಂತ್ರ ಹೂಡಿದರು. ಇದೆಲ್ಲ ಜಾರ್ಜ್ ಫರ್ನಾಂಡಿಸ್ ಅವರಂಥ ನಾಯಕರಿಗೆ ಮೊದಲೇ ಅರಿವಾಗಬೇಕಿತ್ತು. ಇದರರ್ಥ ಈಗ ಅರಿವಾಗಿದೆಯೆಂದೇನೂ ಅಲ್ಲ, ಒಂದು ವೇಳೆ ಅರಿವಾದರೂ ಅವರೀಗ ಬಿಜೆಪಿ ಬಂಧಿಯಂತೆ ಕಾಣಿಸುತ್ತಿದ್ದಾರೆ.

ಮತ್ತೊಂದು ವಿಷಯವನ್ನು ಇಲ್ಲಿ ಹೇಳಬೇಕು. ಅದ್ವಾನಿಯವರಂಥ ನಾಯಕರು ರಾಮಜನ್ಮಭೂಮಿಯ ವಿಷಯವನ್ನು ಪ್ರಧಾನವಾಗಿ ಪಕ್ಷವೊಂದರ ಪ್ರಣಾಳಿಕೆಯನ್ನಾಗಿಸಿದರು. ಧಾರ್ಮಿಕ ಮೂಲಭೂತವಾದವನ್ನು ಪಕ್ಷವೊಂದರ ಪ್ರಮುಖ ಪ್ರತಿಪಾದನೆಯನ್ನಾಗಿಸಿದರು. ಆದರೆ ವಾಜಪೇಯಿಯವರಂಥ ನಾಯಕರು ರಾಮಜನ್ಮಭೂಮಿಯಾದಿಯಾಗಿ ಧಾರ್ಮಿಕ ಮೂಲಭೂತವಾದವನ್ನು ಪಕ್ಷಾತೀತವಾದ ಒಂದು ಮನೋಧರ್ಮವನ್ನಾಗಿ ಬೆಳೆಸಿದರು. ಸಂಘ ಪರಿವಾರಕ್ಕೆ ಸೇರದೆ ಇರುವವರು ಸಹ ವಾಜಪೇಯಿಯವರ 'ಮೌನ ಮುತ್ಸದ್ದಿತನ'ವನ್ನು ಮೆಚ್ಚುತ್ತ ಮೌನ ಮೂಲಭೂತವಾದಿಗಳಾದರು. ಅದ್ವಾನಿ ಬಳಗದವರು ಕ್ರಿಯಾ ಮೂಲಭೂತವಾದಿಗಳಾದರು. ವಾಜಪೇಯಿ ಬಳಗ ಹಿಂದೂ ಮೂಲಭೂತವಾದವನ್ನು ಮಾನಸಿಕಗೊಳಿಸಿದರೆ ಅದ್ವಾನಿ ಬಳಗ ಸಾಮಾಜಿಕಗೊಳಿಸತೊಡಗಿತು. ಮಾನಸಿಕವಾದದ್ದು ನಿಧಾನ ವಿಷಯವಾಯಿತು; ಸಾಮಾಜಿಕವಾದದ್ದು ಸ್ಪಷ್ಟವಾಗಿ ಕಾಣಿಸಿತು. ಒಂದು ಆಂತರಿಕ; ಇನ್ನೊಂದು ಬಾಹ್ಯ. ಆದರೆ ಆಳದಲ್ಲಿ ಎರಡೂ ಪರಸ್ಪರ ಪೂರಕ; ಸಾಮರಸ್ಯಕ್ಕೆ ಮಾರಕ.

ಆದರೂ ವಾಜಪೇಯಿಯವರ ವ್ಯಕ್ತಿತ್ವ ಬಹುದೊಡ್ಡದಾಗಿ ಪ್ರಚುರಗೊಂಡಿತು. ಬಿಜೆಪಿ ಬಳಗವು ಇದನ್ನು ನಂಬಿತು. ಅನೇಕ ಅಮಾಯಕರು, ಅರೆ - ಬರೆ ಬುದ್ಧಿವಂತರು ಧಾರ್ಮಿಕ ಮೂಲಭೂತವಾದದ ಮುಖವಾಡವನ್ನು ಅರ್ಥಮಾಡಿಕೊಳ್ಳಲಿಲ್ಲ. ಇಂತಹ ಸನ್ನಿವೇಶದಲ್ಲಿ ರಾಜಸ್ತಾನ, ಮಧ್ಯಪ್ರದೇಶ, ಚತ್ತೀಸಘಡದಂತಹ ರಾಜ್ಯಗಳಲ್ಲಿ ವಿಧಾನಸಭೆ ಚುನಾವಣೆಯನ್ನು ಎದುರಿಸಿದ ಬಿಜೆಪಿ ಜಯ ಸಾಧಿಸಿತು. ಈ ಜಯದ ಅಮಲು ಮತ್ತು ವಾಜಪೇಯಿ ಅಲೆಯ ಭ್ರಮೆಗಳು ಒಟ್ಟಿಗೆ ಸೇರಿ ಅವಧಿಗೆ ಮುನ್ನವೇ ಲೋಕಸಭೆಯನ್ನು ವಿಸರ್ಜಿಸಿ ಚುನಾವಣೆ ನಡೆಸುವ ನಿರ್ಧಾರವನ್ನು ಕೈಗೊಳ್ಳಲಾಯಿತು. ಅನಿವಾರ್ಯವಾದ ಯಾವುದೇ ಕಾರಣ ಇಲ್ಲದಿದ್ದರೂ ಮುಕ್ಕಾಲು ವರ್ಷ ಮುಂಚೆಯೇ ಲೋಕಸಭೆಯ ವಿಸರ್ಜನೆ ಮಾಡಿದ್ದು ಪ್ರಜಾಪ್ರಭುತ್ವದ ಒಂದು ಅಣಕವೇ ಸರಿ. ಹಿಂದಿನ ಚುನಾವಣೆಯಲ್ಲಿ ಜನರು ಕೊಟ್ಟ ತೀರ್ಪನ್ನು ಉಲ್ಲಂಘಿಸಿ ಅವಧಿಗೆ ಮುನ್ನ ಚುನಾವಣೆ ನಡೆಸುವ ನಿರ್ಧಾರದ ಹಿಂದೆ ಇದ್ದದ್ದು ಯಾವುದೇ ರಾಷ್ಟ್ರೀಯ ಕಾರಣವಲ್ಲ; ಸ್ವಾರ್ಥ ರಾಜಕಾರಣ. ಇತ್ತ ಆಂಧ್ರದ ಚಂದ್ರಬಾಬು ನಾಯ್ಡು ಅವರು ತಮ್ಮ ಮೇಲೆ ನಕ್ಸಲೀಯರು ನಡೆಸಿದ ನೆಲಬಾಂಬು ಸ್ಫೋಟದಿಂದ ಪಾರಾಗಿ ಅದೇ ಸಹಾನುಭೂತಿಯ ನೆರವಿನಿಂದ ಮತ್ತೆ ಗೆದ್ದು ಬರಲು ಉದ್ದೇಶಿಸಿ ಅವಧಿಗೆ ಮುಂಚೆ ವಿಧಾನಸಭೆಯನ್ನು ವಿಸರ್ಜಿಸಿದರೂ ಚುನಾವಣಾ ಆಯೋಗವು ತನ್ನದೇ ನಿರ್ಧಾರ ಕೈಗೊಂಡು '೨೦೦೪ರ ಮಾರ್ಚ್ ನಂತರ ಮಾತ್ರ ಚುನಾವಣೆ' ಎಂದು ಹೇಳಿಯಾಗಿತ್ತು. ಲೋಕಸಭೆಯ ವಿಸರ್ಜನೆಯ ಹಿನ್ನೆಲೆಯಲ್ಲಿ ಕರ್ನಾಟಕದಲ್ಲೂ ಅವಧಿಗೆ ಮುನ್ನ ಚುನಾವಣೆ ನಡೆಸಲು ಮೀನಾಮೇಷ ಎಣಿಸಿ ನಿರ್ಧರಿಸಲಾಯಿತು. ಲೋಕಸಭೆ ಮತ್ತು ವಿಧಾನಸಭೆಗೆ ಒಟ್ಟಾಗಿ ಚುನಾವಣೆ ನಡೆದರೆ ಕಾಂಗ್ರೆಸ್ಸಿನಿಂದ ಹೆಚ್ಚು ಜನ ಲೋಕಸಭಾ ಅಭ್ಯರ್ಥಿಗಳು ಗೆಲ್ಲುತ್ತಾರೆಂಬ ಒಂದು ಒಳಲೆಕ್ಕಾಚಾರ ಇದ್ದಂತೆ ಕಾಣುತ್ತದೆ. ಎರಡು ಸಾರಿ ಚುನಾವಣೆ ನಡೆಸಿ ದುಂದು ವೆಚ್ಚಕ್ಕೆ ಕಾರಣವಾಗಬಾರದೆಂದು ಅವಧಿಗೆ ಮುಂಚೆಯೇ ಚುನಾವಣೆ ನಡೆಸಲಾಗುತ್ತದೆಯೆಂದು ಎಸ್.ಎಂ. ಕೃಷ್ಣರು ಹೇಳಿದರೂ ಅದೊಂದೇ ಕಾರಣ ಇರಲಿಲ್ಲವೆಂಬುದು ಸ್ಪಷ್ಟ. ಇದೇ ನೀತಿಯನ್ನು ಮಹಾರಾಷ್ಟ್ರದ ಕಾಂಗ್ರೆಸ್ ನೇತೃತ್ವದ ಸರ್ಕಾರ ಅನುಸರಿಸಲಿಲ್ಲವೆಂಬುದನ್ನೂ ಇಲ್ಲಿ ಗಮನಿಸಬೇಕು. ಅಷ್ಟೇ ಅಲ್ಲ, ಅವಧಿಗೆ ಮುಂಚೆ ಚುನಾವಣೆ ನಡೆಸುವ ನಿರ್ಧಾರ ಕೈಗೊಂಡ ಕೇಂದ್ರ, ಆಂಧ್ರ ಮತ್ತು ಕರ್ನಾಟಕದ ಆಡಳಿತ ಪಕ್ಷಗಳು ಬಹುಮತ ವಂಚಿತವಾದದ್ದು ಮತ್ತಷ್ಟು ಗಮನಾರ್ಹ.



ಚುನಾವಣೆಗೆ ಮುಂಚೆ ವಾಜಪೇಯಿ ಅಲೆಯೆಂಬುದು ನಿಜವಾಗಿಯೂ ಇತ್ತೆ ಎಂಬುದನ್ನು ಪರಿಶೀಲಿಸಬೇಕು. ವಾಜಪೇಯಿಯವರು ಪಾಕಿಸ್ತಾನದ ಜೊತೆ ನಡೆಸಿದ ಶಾಂತಿ ಮಾತುಕತೆಗಳು ಅವರಿಗೆ ರಾಜತಾಂತ್ರಿಕ ಪ್ರಬುದ್ಧತೆಯ ಹೆಸರನ್ನು ತಂದುಕೊಟ್ಟದ್ದನ್ನು ಖಂಡಿತ ಅಲ್ಲಗಳೆಯಲಾಗದು. (ಆದರೇನು ಮಾಡುವುದು, ಅವರಿಗೆ ನೊಬೆಲ್ ಶಾಂತಿ ಪಾರಿತೋಷಕ ಬರಲಿಲ್ಲ!) ಅಂತೆಯೇ ಆಳದಲ್ಲಿ ಮೂಲಭೂತವಾದಿ ಚಿಂತನೆಗಳಿದ್ದರೂ ಬಿಜೆಪಿಯೇತರ ಮಿತ್ರ ಪಕ್ಷಗಳನ್ನು ಸುಧಾರಿಸುವ ಸೌಜನ್ಯ, ಸಂಯಮಗಳು ಇದ್ದವು. (ಇವು ಇರದಿದ್ದರೆ ಅಧಿಕಾರವೇ ಇರುತ್ತಿರಲಿಲ್ಲ ಎಂಬುದು ಬೇರೆ ಮಾತು). ವಾಜಪೇಯಿಯವರನ್ನು ಸಹನೆ ಹಾಗೂ ಸಾಧನೆಗಳ ಪ್ರತೀಕವಾಗಿ ಬಿಂಬಿಸುತ್ತ ಬಂದ ಪಕ್ಷ ಪ್ರಚಾರ ಮತ್ತು ಮಾಧ್ಯಮಗಳ ಪ್ರಚಾರದ ಪಾಲು ದೊಡ್ಡದು. ಆದರೆ ೧೯೭೦ರ ಆರಂಭದಲ್ಲಿದ್ದ ಇಂದಿರಾ ಗಾಂಧಿ ಅಲೆಗೆ ಹೋಲಿಸಿದರೆ ಈ ವಾಜಪೇಯಿ ಅಲೆ ಏನೇನೂ ಅಲ್ಲ ಅಥವಾ ಹಾಗೆ ಇರಲೇ ಇಲ್ಲ. ಇಂದಿರಾ ಗಾಂಧಿ ಅಲೆಯು ಮಾಧ್ಯಮಗಳ, ಬುದ್ಧಿವಂತರೆನಿಕೊಂಡವರ ವಿರೋಧವನ್ನು ಎದುರಿಸುತ್ತಲೇ ಆವರಿಸಿಕೊಂಡಿತು. 'ಗರೀಬಿ ಹಟಾವೊ' ಘೋಷಣೆಯೇ ಹೆಬ್ಬಲೆಯಾಯಿತು. ಸರಿಯೊ ತಪ್ಪೊ ಅದು ಬೇರೆ ವಿಷಯ – ಬಡವರಂತೂ ಆತ್ಮವಿಶ್ವಾಸವನ್ನು ಪಡೆದ ಅಲೆಗಳಾಗತೊಡಗಿದರು. ಹೇಳಹೆಸರಿಲ್ಲದ ಅಭ್ಯರ್ಥಿಗಳನ್ನೂ ಗೆಲ್ಲಿಸಿದರು. ಆದರೆ ವಾಜಪೇಯಿ ಅಲೆಯಲ್ಲಿ ಹೇಳಹೆಸರಿಲ್ಲದ ಯಾವ ಅಭ್ಯರ್ಥಿಯೂ ಗೆದ್ದು ಬಂದ ಉದಾಹರಣೆಗಳಿಲ್ಲ. ಇಂಡಿಯಾ ಶೈನಿಂಗ್ ಮತ್ತು ಫೀಲ್ ಗುಡ್ – ಘೋಷಣೆಗಳು 'ಗರೀಬಿ ಹಟಾವೊ' ಘೋಷಣೆಯ ಅಂಚಿಗೂ ಬರಲಿಲ್ಲ.

ಸ್ವತಃ ವಾಜಪೇಯಿಯವರ ಕ್ಷೇತ್ರದಲ್ಲಿ (ಲಕ್ನೊ) ಶೇಕಡ ಮೂವತ್ತೈದರಷ್ಟು ಮಾತ್ರ ಮತದಾನವಾಯಿತು ಎಂಬುದನ್ನು ಗಮನಿಸಬೇಕು. ಮಾಧ್ಯಮಗಳಲ್ಲಿ ಮಹಾನ್ ಮುತ್ಸದ್ದಿಯೆಂಬಂತೆ ಪ್ರಚುರಗೊಂಡ, ಅವರ ಹೆಸರಿನಲ್ಲಿ ಪ್ರಚಂಡ ಅಲೆಯಿದೆಯೆಂದು ಭಾವಿಸಲ್ಪಟ್ಟು, ಮುಖ್ಯವಾಗಿ ಈ ದೇಶದ ಪ್ರಧಾನಿಯಾಗಿ ಸ್ಪರ್ಧಿಸಿದ ಕ್ಷೇತ್ರದಲ್ಲಿ ಕೇವಲ ೩೫% ಮತದಾನವಾಯಿತೆಂದರೆ ಅದು ಎಲ್ಲ ವಿಷಯಕ್ಕೂ ಸಾಂಕೇತಿಕವಲ್ಲವೆ ? ಅಲೆಯಿದ್ದ ಪಕ್ಷದಲ್ಲಿ ಸಾಗರದೋಪಾದಿಯಾಗಿ ಬಂದು ಮತದಾರರು ತಮ್ಮ ಹಕ್ಕನ್ನು ಚಲಾಯಿಸುತ್ತಿರಲಿಲ್ಲವೆ ? ಉಗ್ರಗಾಮಿಗಳ ಉಪಟಳವಿರುವ ಜಮ್ಮು-ಕಾಶ್ಮೀರದ ಲೋಕಸಭಾ ಕ್ಷೇತ್ರವೊಂದರಲ್ಲಿ ೪೬% ಮತದಾನವಾಗಿರುವಾಗ ವಾಜಪೇಯಿಯವರ ಕ್ಷೇತ್ರದಲ್ಲಿ ಇಷ್ಟು ಕಡಿಮೆ ಮತದಾನವೇಕಾಯಿತು ? ಜನಸಾಮಾನ್ಯರ ಆಸಕ್ತಿ ಕುಗ್ಗಿಹೋದದ್ದು ಯಾಕೆ ?

ಇನ್ನು ದೇಶದ ಎಲ್ಲ ರಾಜ್ಯಗಳನ್ನೂ ಸಾವಧಾನದಿಂದ ಅವಲೋಕಿಸಿ : ಜಮ್ಮು - ಕಾಶ್ಮೀರದಲ್ಲಿ ವಾಜಪೇಯಿ ಅಲೆಯಿತ್ತೆ? ಅಸ್ಸಾಂನಲ್ಲಿ ಇತ್ತೆ? ಅಲ್ಲಿ ಎ.ಜಿ.ಪಿ ಮತ್ತು ಕಾಂಗ್ರೆಸ್ ನಡುವೆ ಜಗ್ಗಾಟ. ಒರಿಸ್ಸಾದಲ್ಲಿ ನವೀನ್ ಪಟ್ನಾಯಕ್ ನೇತಾರ;

ವಾಜಪೇಯಿಯವರಲ್ಲ. ಹರಿಯಾಣದಲ್ಲಿ ಕಾಂಗ್ರೆಸ್ ಮತ್ತು ಚೌಟಾಲ. ಪಂಜಾಬ್‌ನಲ್ಲಿ ಕಾಂಗ್ರೆಸ್ ಮತ್ತು ಅಕಾಲಿದಳ. ಬಿಹಾರದಲ್ಲಿ ಲಾಲೂ ಪ್ರಸಾದ್ ಸಾಮ್ರಾಜ್ಯ. ಮಹಾರಾಷ್ಟ್ರದಲ್ಲಿ ಬಿಜೆಪಿಗೆ ಶಿವಸೇನೆಯ ಸಾರಥ್ಯ. ಆಂಧ್ರದಲ್ಲಿ ಚಂದ್ರಬಾಬು ನಾಯ್ಡು, ತಮಿಳುನಾಡಿನಲ್ಲಿ ಜಯಲಲಿತ; ಉತ್ತರಪ್ರದೇಶದಲ್ಲಿ ಮಿಶ್ರ ಸ್ಥಿತಿ – ಮುಲಾಯಂ, ಮಾಯಾದೇವಿಯ ಸಾಮಾಜಿಕ ಜಾಲ; ರಾಜಸ್ಥಾನ, ಮಧ್ಯಪ್ರದೇಶಗಳಲ್ಲಿ ಬಿಜೆಪಿಯದೇ ಸರ್ಕಾರವಾದ್ದರಿಂದ ಅಲೆಯ ಪ್ರಶ್ನೆ ಅಷ್ಟಾಗಿ ಇರಲಿಲ್ಲ. ಗುಜರಾತ್‌ನಲ್ಲಿ ವಾಜಪೇಯಿಯವರಿಗಿಂತ ಮೋದಿಯ ಮೋಡಿಯಲ್ಲಿ ಬಿಜೆಪಿ. – ಇನ್ನು 'ಬಹು ಬುದ್ಧಿವಂತರ' ಕರ್ನಾಟಕದಲ್ಲಿ ವಿವಿಧ ಕಾರಣಗಳಿಗಾಗಿ ಅಷ್ಟಿಷ್ಟು ವಾಜಪೇಯಿ ಒಲವು – ಇವು ನಾನು ಈಗ ಹೇಳುತ್ತಿರುವ ಮಾತುಗಳಲ್ಲ, ಚುನಾವಣೆಯ ನಿರ್ಧಾರವಾದ ದಿನದಿಂದ ನನ್ನ ಸ್ನೇಹವಲಯದಲ್ಲಿ ನಾನು ನಿರಂತರವಾಗಿ ಪ್ರತಿಪಾದಿಸಿಕೊಂಡು ಬರುತ್ತಿದ್ದ ಅಂಶಗಳಿವು.

ಅದೇನೇ ಇರಲಿ, ಅಧಿಕಾರದಲ್ಲಿರುವವರ ಅರಿವಿಗೆ ಅಮಲು ಬಡಿದಾಗ ವಿವೇಕ ಅನಾಥವಾಗುತ್ತದೆಯೆಂಬ ಅಂಶವು ಎಲ್ಲ ಅಧಿಕಾರಸ್ಥ ಪಕ್ಷಗಳು ಮತ್ತು ನಾಯಕರ ವಿಷಯಗಳಲ್ಲಿ ನಿಜವಾಗುತ್ತ ಬಂದಿದೆ. ಪಶ್ಚಿಮ ಬಂಗಾಳ, ತ್ರಿಪುರ, ಕೇರಳಗಳಲ್ಲಿ ಎಡಪಕ್ಷಗಳು ಅಮಲು ಹತ್ತಿಸಿಕೊಳ್ಳದೆ ಇರುವುದರಿಂದ ವಿಭಿನ್ನ ಪರಿಸ್ಥಿತಿಯಿದೆ. ಸದಾ ಭಾವನಾತ್ಮಕ ವಿಷಯಗಳನ್ನು ಕೆದಕಿ, ಕೆರಳಿಸಿ, ಜನರನ್ನು ಉದ್ರೇಕಿಸಿ, ಉದ್ರೇಕವನ್ನೇ ಓಟಾಗಿ ಪರಿವರ್ತಿಸಿಕೊಳ್ಳುವ ಜಾಯಮಾನವುಳ್ಳ ಬಿಜೆಪಿಗೆ ಈ ಸಾರಿ ಅಂತಹ ವಿಶೇಷ ವಿಷಯಗಳಿರಲಿಲ್ಲ. ಒಮ್ಮೆ ರಾಮಜನ್ಮಭೂಮಿ ವಿಷಯದಿಂದ, ಇನ್ನೊಮ್ಮೆ ಕಾರ್ಗಿಲ್ ಯುದ್ಧದ ಹಿನ್ನೆಲೆಯಿಂದ ಗೆದ್ದು ಬಂದ ಬಿಜೆಪಿ ಮೈತ್ರಿಕೂಟವು ಈ ಸಾರಿ ವಾಜಪೇಯಿ ಅಲೆಯನ್ನು ನೆಚ್ಚಿಕೊಂಡಿತು. ಕೇಂದ್ರ ಸರ್ಕಾರದ ಸಾಧನೆಯಿಂದ 'ಭಾರತ ಪ್ರಕಾಶಿಸುತ್ತಿದೆ' ಎಂದು ನಂಬಿಸಲು ಪ್ರಯತ್ನಿಸಿತು. ಇದಿಷ್ಟು ಸಾಲದೆಂದು 'ಸೋನಿಯಾ ಜನ್ಮಭೂಮಿ'ಯ ವಿಷಯವನ್ನು ಮುಂಚೂಣಿಗೆ ತಂದು ಭಾವೋದ್ರೇಕದ ವಾತಾವರಣವನ್ನು ನಿರ್ಮಿಸುವ ಹುನ್ನಾರ ನಡೆಸಿತು. ಒಮ್ಮೆ ರಾಮಜನ್ಮಭೂಮಿ; ಇನ್ನೊಮ್ಮೆ ಸೋನಿಯಾ ಜನ್ಮಭೂಮಿ. ಇದಕ್ಕೆ ವಾಜಪೇಯಿಯವರ ಕುಮ್ಮಕ್ಕು ಇದ್ದೇ ಇತ್ತು. ಇವರ ಆಪ್ತ ಯುವ ನಾಯಕ ಪ್ರಮೋದ್ ಮಹಾಜನ್ ಇನ್ನೂ ಮುಂದೆ ಹೋಗಿ ಭಾರತೀಯ ಗಂಡಿಗೆ ವಿದೇಶಿ ಹೆಣ್ಣಿನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗೂ ನಮ್ಮ ದೇಶದ ಉನ್ನತ ಹುದ್ದೆ ಕೊಡಬಾರದೆಂದು ಪ್ರತಿಪಾದಿಸಿದರು. ಯಾರು ಎಲ್ಲಿ ಹುಟ್ಟಿದ್ದಾರೆ ಎಂಬ ಮಾನದಂಡದಿಂದ ಅಳೆಯುವ ಮನಸ್ಸಿನಲ್ಲಿ ವರ್ಣಾಶ್ರಮ ಧರ್ಮದ ವಾಸನೆಯಿರುತ್ತದೆ ಯೆಂಬುದು ನನ್ನ ತಿಳಿವಳಿಕೆ. ಹಟ್ಟಿಯಲ್ಲಿ ಹುಟ್ಟಿದವರೆಂದು ಬಹುಸಂಖ್ಯಾತ ದುಡಿಮೆಗಾರರನ್ನು ಅಸ್ಪೃಶ್ಯರನ್ನಾಗಿಸಿದ್ದು ಇದೇ ವರ್ಣಾಶ್ರಮ ಧರ್ಮ ಮತ್ತು ಮನೋಧರ್ಮ. ಮುಸ್ಲಿಮರನ್ನು ಪರಕೀಯರೆಂದು ಕರೆದು ಶತ್ರುಸ್ಥಾನದಲ್ಲಿ ನಿಲ್ಲಿಸಿದ್ದು ಇದೇ ವರ್ಣಾಶ್ರಮ ಮೂಲವಾದ ಅಸಹನೆ. ವರ್ಣಾಶ್ರಮವೆಂದರೆ ಜಾತಿವ್ಯವಸ್ಥೆಯ ಸಮರ್ಥನೆ, ಶ್ರೇಣೀಕೃತ ಸಮಾಜದ ಶೋಷಣೆಯ ಪ್ರತಿಪಾದನೆ. ಇದೊಂದು ಒಳ ವಾಸನೆ. ಹಿಂದೂಧರ್ಮವನ್ನು ರಾಜಕೀಯ ಮಂತ್ರವಾಗಿ ಸ್ವೀಕರಿಸಿ ಓಟಿನ ಮಟ್ಟಕ್ಕೆ ಇಳಿಸಿದ ಈ ಮಂದಿಗೆ ಹಿಂದೂ ಕುಟುಂಬ ಪದ್ಧತಿಯಲ್ಲಿ ಸೊಸೆಗಿರುವ ಸ್ಥಾನಮಾನ ಗೊತ್ತಿಲ್ಲದೆ ಹೋದದ್ದು ಒಂದು 'ಧಾರ್ಮಿಕ ವಿಪರ್ಯಾಸ'. ಹಿಂದೂ ನಂಬಿಕೆಗಳಿಗೆ ಬಗೆದ ಅಪಚಾರ. ಜೊತೆಗೆ ವರ್ಣಾಶ್ರಮವೇ ಒಳ ಆಚಾರ. ಆದ್ದರಿಂದಲೇ ಸೋನಿಯಾ ನಮ್ಮ ದೇಶದ ಸೊಸೆಯೆಂಬುದು ಲೆಕ್ಕಕ್ಕೆ ಬರಲಿಲ್ಲ. ಸರ್ವೋಚ್ಚ ನ್ಯಾಯಾಲಯವು ಸೋನಿಯಾ ಈ ದೇಶದ ಪ್ರಜೆ ಎಂದು ತೀರ್ಪು ಕೊಟ್ಟರೂ ಇವರು ಒಪ್ಪಲು ಸಿದ್ಧರಿಲ್ಲ. ಇವರೇ ಏನು, ಕೆಲವು ಸ್ವಾತಂತ್ರ್ಯ ಹೋರಾಟಗಾರರಲ್ಲೂ ಇದೇ ವಾಸನೆ. ಏನಾದರೂ ಆಕೆಗೆ ಉನ್ನತ ಹುದ್ದೆ ಬೇಡ, ಬೇಕಾದರೆ ಪಕ್ಷದ ಹುದ್ದೆ ಇರಲಿ ಎಂಬ ಪ್ರತಿಪಾದನೆ.

ಪ್ರತಿಬಿಂಬ

ಪ್ರೀತಿ ಕನ್ನಡಿ ಮುಂದೆ
ನಾವು ಕಾಣುವ
ಪ್ರತಿಬಿಂಬಗಳೆಲ್ಲ
ಮನದ ಕನ್ನಡಿಯ
ನಿಜ ಬಿಂಬಗಳಲ್ಲ

ಅಂದನೂರು ಶೋಭ
ಬೆಂಗಳೂರು - ೫೬೦ ೦೦೦

ಪ್ರಗತಿಪರರೆನ್ನಿಸಿಕೊಂಡ ಕೆಲವರು ಇದೇ ರೀತಿ ಪಿಸುಗುಟ್ಟಿದ್ದೂ ಉಂಟು. ಸೋನಿಯಾರನ್ನು ವಿಮರ್ಶಿಸಲು, ಟೀಕಿಸಲು ಬೇರೆ ವಿಷಯಗಳಿವೆ. ಆದರೆ ಹುಟ್ಟನ್ನೇ ಮಾನದಂಡ ಮಾಡಿಕೊಂಡ ಮಂದಿಗೆ ಮಾನವಧರ್ಮದ ಬಗ್ಗೆ ಮಾತಾಡುವ ಹಕ್ಕಿಲ್ಲ. ವಿಶ್ವಮಾನವ ಸಂದೇಶದ ಬಗ್ಗೆ ಇಂಥವರು ಯಾರೂ ಉಸಿರೆತ್ತಬಾರದು.

ವಿದೇಶಿ ಪ್ರಣೀತ ಆರ್ಥಿಕ ಉದಾರೀಕರಣವನ್ನು ದೇಶವ್ಯಾಪಿ ಮಾಡಿದವರು ವಿದೇಶಿ ಜನ್ಮಮೂಲ ಹಿಡಿದು ರಾಜಕೀಯ ಮಾಡುವುದು ಅಸಹ್ಯಕರ ವಿಪರ್ಯಾಸ. ತಂತಮ್ಮ ಮಕ್ಕಳು ವಿದೇಶದಲ್ಲಿ ಓದಬೇಕು; ವಿದೇಶಿ ಸಂಪಾದನೆ ಬೇಕು. ವಿದೇಶದಲ್ಲಿದ್ದಾರೆಂಬ ಹುಸಿ ಪ್ರತಿಷ್ಠೆ ಬೇಕು. ಆದರೆ ಅಧಿಕಾರದ ವಿಷಯಕ್ಕೆ ಬಂದಾಗ ತಾಂತ್ರಿಕವಾಗಿ ಮತ್ತು ತಾತ್ವಿಕವಾಗಿ ಭಾರತೀಯರಾದವರ ವಿದೇಶಿ ಮೂಲವನ್ನು ಕೆದಕಬೇಕು – ಇದು ಬಿಜೆಪಿ ಮತ್ತು ಸಂಘಪರಿವಾರದವರು ಮೂಡಿಸಿದ ಮನೋಧರ್ಮ. ಆದರೆ ಚುನಾವಣೆಯ ಫಲಿತಾಂಶ ಬಂದಾಗ ಗೊತ್ತಾಯಿತು – ನಮ್ಮ ದೇಶದ ಸಾಮಾನ್ಯ ಜನಕ್ಕೆ ವಿದೇಶಿ ಜನ್ಮಮೂಲ ಒಂದು ಸಮಸ್ಯೆಯೇ ಅಲ್ಲ. ರಾಮಜನ್ಮಭೂಮಿಯ ವಿಷಯದಲ್ಲಿ ಮೋಸ ಹೋದವರು ಸೋನಿಯಾ ಜನ್ಮಭೂಮಿಯ ವಿಷಯದಲ್ಲಿ ಮೋಸಹೋಗಲು ಸಿದ್ಧರಿರಲಿಲ್ಲ. ಕಾಣದ ದೇವರ ಜನ್ಮಭೂಮಿಯ ವಿಷಯ ಮತ್ತು ಕಾಣುವ ಸೊಸೆಯ ಜನ್ಮಭೂಮಿ ವಿಷಯಗಳನ್ನು ಬಹುಪಾಲು ಮತದಾರರು ಪ್ರತ್ಯೇಕವಾಗಿಯೇ ಪರಿಗಣಿಸಿದ್ದಾರೆ.

ಹಾಗಾದರೆ ಅಧಿಕಾರಾರೂಢ ಪಕ್ಷದಿಂದ ಜನರು ಬಯಸುವುದೇನು ?

ಮತದಾರರು ಈ ಚುನಾವಣೆಯಲ್ಲಿ ಉತ್ತರಿಸಿದ್ದಾರೆ. ಬಹುಸಂಸ್ಕೃತಿ ಮತ್ತು ಬಹುಧರ್ಮಗಳ ಈ ದೇಶದಲ್ಲಿ ಏಕಸಂಸ್ಕೃತಿ ಮತ್ತು ಏಕಧರ್ಮದ ವೈಪರೀತ್ಯಗಳನ್ನು ಬಹುಮತದ ಮೂಲಕ ವಿರೋಧಿಸಿದ್ದಾರೆ. ಒಮ್ಮೊಮ್ಮೆ ಭಾವೋದ್ರೇಕಕ್ಕೆ ಬಲಿಯಾದರೂ ಆನಂತರ ಸಾವರಿಸಿಕೊಂಡು – ಸಮಾನತೆ ಮತ್ತು ಸಾಮರಸ್ಯಗಳಿಗೆ ಬೆಲೆಯಿದೆಯೆಂದು ತೋರಿಸಿದ್ದಾರೆ. ಆರ್ಥಿಕ ಸುಧಾರಣೆಗಳ ಹೆಸರಿನಲ್ಲಿ ತುಂಬಾ ಅಭಿವೃದ್ಧಿಯಾಗಿದೆ ಯೆಂದು ಭಾವಿಸಿ 'ಭಾರತ ಪ್ರಕಾಶಿಸುತ್ತಿದೆ' ಎಂದು ಪ್ರಚಾರ ಮಾಡಿದವರಿಗೆ 'ಬಡವರ ಬದುಕು ಪ್ರಕಾಶಿಸಿದರೆ ಮಾತ್ರ ಭಾರತ ಪ್ರಕಾಶಿಸುತ್ತದೆ' ಎಂದು ಉತ್ತರ ನೀಡಿದ್ದಾರೆ. 'ಕೋಟಿ ಖಜಾನೆಯ ಕೋಟ್ಯಾಧಿಪತಿಗಳು ಲಾಭ ಮಾಡಿ ಅಭಿವೃದ್ಧಿಯ ಅಂಕಿಅಂಶಕ್ಕೆ ಚಾಲನೆಕೊಟ್ಟರೆ ಸಾಲದು, ನಮ್ಮ ದೈನಂದಿನ ಬದುಕಿಗೆ ಬೆಳಕು ತರಬೇಕು' ಎಂಬ ಸಂದೇಶ ಸಾರಿದ್ದಾರೆ. ಕೃಷಿ ವಲಯ , ಕಾರ್ಮಿಕ ವಲಯ ಮತ್ತು ಸಾಮಾಜಿಕ ವಲಯಗಳನ್ನು ಮರೆತ ಸುಧಾರಣೆಗಳು ಪ್ರತಿಗಾಮಿಯೇ ಹೊರತು ಪ್ರಗತಿಗಾಮಿಯಲ್ಲ ಎಂದು ನಮ್ಮ ಸಾಮಾನ್ಯ ಜನರು ಅರ್ಥ ಮಾಡಿಕೊಂಡಿದ್ದಾರೆ. ಈ ಮಾತು ಆಂಧ್ರ ಮತ್ತು ಕರ್ನಾಟಕಗಳಿಗೂ ಅನ್ವಯಿಸುತ್ತದೆ. ಷೇರು ಮಾರುಕಟ್ಟೆಯ ಏರಿಳಿತಗಳೇ ಆರ್ಥಿಕ ಅಭಿವೃದ್ಧಿಯ ಅಳತೆಗೋಲು ಎಂಬಂತೆ ವಿಜೃಂಭಿಸುವುದನ್ನು ನಮ್ಮ ತಜ್ಞರು ಮತ್ತು ಮಾಧ್ಯಮಗಳು ಇನ್ನಾದರೂ ಕೈಬಿಡಬೇಕು. ಅಮೆರಿಕ ಕೃಪಾಪೋಷಿತ ಆರ್ಥಿಕ ಸುಧಾರಣೆಯು ನಮಗೆ ಪರಿಹಾರವಲ್ಲವೆಂಬುದನ್ನು ಬಿಜೆಪಿ, ಕಾಂಗ್ರೆಸ್ ಪಕ್ಷಗಳೆರಡೂ ಮನಗಾಣಬೇಕು. ನಮ್ಮ ದೇಶದ ಸಾಮಾನ್ಯ ಜನತೆ ಮತದಾನದ ಮೂಲಕ ಈ ಸಾಮಾನ್ಯ ಪಾಠವನ್ನು ಹೇಳಿಕೊಟ್ಟಿದ್ದಾರೆ. ಪಾಠ ಕಲಿಯದವರು ಫೇಲಾಗುತ್ತಾರೆ.

ಲೋಕಸಭೆಯ ಚುನಾವಣಾ ಫಲಿತಾಂಶದಲ್ಲಿ ಇಲ್ಲೀವರೆಗೆ ಪ್ರಸ್ತಾಪಿಸಿದ ಅಂಶಗಳು ಕೆಲಸ ಮಾಡಿದ್ದು, ಇದರ ಛಾಯೆ ಆಂಧ್ರ ಮತ್ತು ಕರ್ನಾಟಕದ ವಿಧಾನಸಭೆಯ ಚುನಾವಣಾ ಫಲಿತಾಂಶಗಳಲ್ಲೂ ಕಾಣಿಸುತ್ತದೆ. ಜೊತೆಗೆ ಇತರೆ ಸ್ಥಳೀಯ ಅಂಶಗಳೂ ಕೆಲಸ ಮಾಡಿವೆ.

ಮೂರು ವರ್ಷಗಳ ಹಿಂದಿನ ಮಾತು. ನಾನು ಆಗ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ. ಸ್ವಂತ ಖರ್ಚಿನಲ್ಲಿ ಸಂಸಾರ ಸಮೇತ ಆಂಧ್ರ ಪ್ರದೇಶಕ್ಕೆ

ಹೋಗಿದ್ದೆ. ಹೈದರಾಬಾದ್‌ಗೆ ಹೊಸ ಬಣ್ಣ ಬಂದಿತ್ತು. ಆದರೆ ಅದೇ ಹೈದರಾಬಾದ್‌ನ ಸಾಮಾನ್ಯ ಜನತೆಯ ಮುಖ ಮೊದಲಿನಂತೆ ಬಣ್ಣ ಕಳೆದುಕೊಂಡೇ ಇತ್ತು. ರಿಕ್ಷಾವಾಲಾಗಳು, ಕೂಲಿಕಾರರು – ಹೀಗೆ ಅನೇಕ ವಲಯಗಳ ಜನರೊಂದಿಗೆ ನಾನು ಚಂದ್ರಬಾಬು ನಾಯ್ಡು ಅವರ ಆಡಳಿತ ವೈಖರಿ ಮತ್ತು ಅಭಿವೃದ್ಧಿಯ ಬಗ್ಗೆ ವಿಚಾರಿಸಿದೆ. ಬಹುಪಾಲು ಜನರ ಅಭಿಪ್ರಾಯದಲ್ಲಿ ಸಾಮಾನ್ಯ ಜನರಿಗೆ ಅಭಿವೃದ್ಧಿಯ ಫಲ ಸಿಕ್ಕಿರಲಿಲ್ಲ. ಅವರಲ್ಲಿ ಅತೃಪ್ತಿ ಮನೆ ಮಾಡಿತ್ತು. 'I am trying to redefine the politics of India.' ಟಿ.ವಿ.ಚಾನೆಲ್‌ಗಳಲ್ಲಿ ಹೇಳುತ್ತಿದ್ದ ಮತ್ತು ಅದೇ ರೀತಿ ಹೊಗಳಿಸಿಕೊಳ್ಳುತ್ತಿದ್ದ ಚಂದ್ರಬಾಬು ನಾಯ್ಡು ಅವರ ಆಡಳಿತದಲ್ಲಿ ಸಾಮಾನ್ಯರ ಸಂಕಟ ಅತೃಪ್ತಿಯಾಗಿ ಆವರಿಸಿಕೊಳ್ಳುತ್ತಿತ್ತು. ಈ ಎಲ್ಲ ವಿಷಯಗಳನ್ನು ನಾನು ನಮ್ಮ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರಿಗೆ ಹೇಳಿದೆ. 'ನಿಮ್ಮನ್ನು ಹೈಟೆಕ್ ಮುಖ್ಯಮಂತ್ರಿ ಎನ್ನುತ್ತಾರೆ. ಯಾವುದೇ ತಂತ್ರಜ್ಞಾನ ಜನಸಾಮಾನ್ಯರ ಬದುಕಿಗೆ ಪೂರಕವಾಗುವುದು ಅಗತ್ಯ ಸಾರ್' ಎಂಬ ಮಾತನ್ನು ಪ್ರತಿಪಾದಿಸಿದೆ. ಸ್ವತಃ ಸಂಭಾವಿತರಾದ ಕೃಷ್ಣ ಅವರು, ನನ್ನ ಮಾತುಗಳನ್ನೆಲ್ಲ ಕೇಳಿದರು. 'ನಿಮ್ಮ ನೇರ ಮಾತುಗಳು ನನಗೆ ಬೇಕು' ಎಂದರು. (ಅನಂತರ ಸರ್ಕಾರದ ಮಾಹಿತಿ ತಂತ್ರಜ್ಞಾನ ನೀತಿಯನ್ನು 'ಜನಸಾಮಾನ್ಯರಿಗಾಗಿ ಮಾಹಿತಿ ತಂತ್ರಜ್ಞಾನ' ಎಂದು ಕರೆದರು. ಅದು ಬೇರೆ ವಿಷಯ). ಮತ್ತೊಂದು ಸಾರಿ, ಮಾನ್ಯ ಶ್ರೀ ಕೃಷ್ಣ ಅವರಿಗೆ 'ಕಾಂಗ್ರೆಸ್ ಪಕ್ಷವನ್ನು ಹೆಚ್ಚು ಬೆಳೆಸಿದವರು ಹಿಂದುಳಿದವರು, ದಲಿತರು ಮತ್ತು ಅಲ್ಪಸಂಖ್ಯಾತರು. ಇತ್ತೀಚಿನ ದಿನಗಳಲ್ಲಿ ಕಾಂಗ್ರೆಸ್ ಈ ಜನವರ್ಗಗಳಿಂದ ದೂರ ಸರಿಯುತ್ತಿರುವಂತಿದೆ. ಈ ಬಗ್ಗೆ ಗಂಭೀರ ಚಿಂತನೆ ಅಗತ್ಯ' ಎಂದು ಹೇಳಿದೆ. ಕೃಷ್ಣ ಅವರಿಗೆ ಅಸಾಧ್ಯ ಸಂಯಮ ಮತ್ತು ಸಜ್ಜನಿಕೆ. ನನ್ನ ವಿಮರ್ಶಾತ್ಮಕ ಮಾತುಗಳನ್ನೆಲ್ಲ ಕೇಳಿದರು. ಅವರಿಗೂ ತಮ್ಮ ಹೈಟೆಕ್ ಇಮೇಜಿನಿಂದ ಹೊರಬರಬೇಕೆಂದು ಅನ್ನಿಸಿತ್ತೇನೊ. ಮುಂದಿನ ಬಜೆಟ್‌ಗಳಲ್ಲಿ ಗ್ರಾಮೀಣ ಪ್ರದೇಶಕ್ಕೆ ಆದ್ಯತೆ ನೀಡಿದರು. ಆದರೆ ಒಮ್ಮೆ ಬಂದ ಹೈಟೆಕ್ ಇಮೇಜನ್ನು ತೊಡೆದುಹಾಕುವುದು ಸುಲಭವಾಗಿರಲಿಲ್ಲ. ಐ.ಟಿ. ಮತ್ತು ಬಿ.ಟಿ.ಗಳಿಗೆ ಸಿಕ್ಕಿದ ಆದ್ಯತೆ ಮತ್ತು ಪ್ರಚಾರ ಗ್ರಾಮೀಣ ವಲಯಕ್ಕೆ ಲಭ್ಯವಾಗದೆ, ಮಾಡಿದ ಕೆಲವು ಕೆಲಸಗಳು ಸಾಮಾನ್ಯ ಜನತೆಯ ಅನುಭವಕ್ಕೆ ಬರಲಿಲ್ಲ. ರೈತರ ಆತ್ಮಹತ್ಯೆ, ಆನ್‌ಲೈನ್ ಲಾಟರಿ, ಬರಗಾಲ ನಿರ್ವಹಣೆಯಲ್ಲಿ ಆದ ಲೋಪಗಳು ಜನಸಾಮಾನ್ಯರಲ್ಲಿ ಅತೃಪ್ತಿಯನ್ನು ಹುಟ್ಟುಹಾಕಿದವು. ಕೇಂದ್ರ ಸರ್ಕಾರವು ಬರಗಾಲ ಪರಿಹಾರದ ವಿಷಯದಲ್ಲಿ ಪಕ್ಷಪಾತ ತೋರಿಸಿದ್ದು ನಿಜ. ಆದರೆ ಇರುವ ಸಂಪನ್ಮೂಲಗಳನ್ನು ನಮ್ಮ ಮಂತ್ರಿಗಳು ಮತ್ತು ಅಧಿಕಾರಿಗಳು ಜನರಿಗಾಗಿ ಬಳಸಿದರೆ? ಪರಿಹಾರವನ್ನು ಒದಗಿಸುವಲ್ಲಿ ಯುದ್ಧೋಪಾದಿಯ ಕಾರ್ಯತಂತ್ರ ರೂಪಿಸಿದರೆ? ಹೌದು ಎನ್ನುವುದಾದರೆ ಮೂವತ್ತು ಜನ ಮಂತ್ರಿಗಳು ಸೋಲುತ್ತಿದ್ದರೆ?

ಆರ್ಥಿಕ ಅಭಿವೃದ್ಧಿಯ ಪುನರ್‌ವ್ಯಾಖ್ಯಾನ ಅಗತ್ಯ ಎಂಬುದನ್ನು ಕರ್ನಾಟಕ ಮತ್ತು ಆಂಧ್ರದ ಮತದಾರರೂ ಸೂಚಿಸಿದ್ದಾರೆಂಬುದು ನಿಜವಾದರೂ ಎರಡೂ ರಾಜ್ಯಗಳ ಪರಿಸ್ಥಿತಿ ಬೇರೆಯೇ ಇತ್ತು. ಕೃಷ್ಣ ಅವರ ಸರ್ಕಾರಕ್ಕೆ ಎದುರಾದ ಸಂಕಷ್ಟಗಳು ಚಂದ್ರಬಾಬು ನಾಯ್ಡು ಸರ್ಕಾರಕ್ಕೆ ಇರಲಿಲ್ಲ. ಕರ್ನಾಟಕದಲ್ಲಿ ಕಾವೇರಿ ಜಲ ವಿವಾದ, ಡಾ|| ರಾಜಕುಮಾರ್ ಅವರ ಅಪಹರಣ, ನಾಗಪ್ಪನವರ ಅಪಹರಣ ಮತ್ತು ಹತ್ಯೆ, ಮೂರು ವರ್ಷದ ಬರಗಾಲ ಮತ್ತು ಕೇಂದ್ರದ ಅಸಹಕಾರ ಎಲ್ಲವೂ ಒಟ್ಟಿಗೇ ಎದುರಾಗಿದ್ದವು. ಕೃಷ್ಣ ಅವರು ಇವುಗಳನ್ನು ಸೂಕ್ಷ್ಮವಾಗಿ ನಿಭಾಯಿಸುತ್ತ ಬಂದರು. ಮೇಧಾವಿಯಾಗಿ ಮಿಂಚಿದರು. ಆದರೆ ಸಾಮಾನ್ಯ ಜನರ ಸಂಕಷ್ಟಗಳು ಸಿಟ್ಟಾಗಿ ಒಟ್ಟುಗೂಡುತ್ತಿರುವುದನ್ನು ಅಗತ್ಯ ಪ್ರಮಾಣದಲ್ಲಿ ಗುರುತಿಸಲಾಗಲಿಲ್ಲ. ಗುರುತಿಸುವ ವೇಳೆಗೆ ಕಾಲ ಮಿಂಚಿತ್ತು.

ಕೇಂದ್ರದ ಅಸಹಕಾರ ಕುರಿತು ಒಂದು ಉದಾಹರಣೆಯನ್ನು ಇಲ್ಲಿ ಉಲ್ಲೇಖಿಸಬಯಸುತ್ತೇನೆ. ಕೃಷ್ಣ ಅವರ ಸರ್ಕಾರವು ಕೆರೆಗಳ ಹೂಳೆತ್ತುವ ಕಾರ್ಯಕ್ಕೆ ಬೃಹತ್ ಯೋಜನೆಯನ್ನು ತಯಾರಿಸಿ ವಿಶ್ವಬ್ಯಾಂಕ್‌ನ ನೆರವು ಕೇಳಿತು. ಈ ನೆರವು ನೀಡಲು ವಿಶ್ವಬ್ಯಾಂಕ್ ಸಿದ್ಧವಿತ್ತಾದರೂ ನಿಯಮಾನುಸಾರ ಕೇಂದ್ರ ಸರ್ಕಾರದ ಅನುಮತಿ ಬೇಕು. ಆಗ ವಾಜಪೇಯಿ ನೇತೃತ್ವದ ಸರ್ಕಾರ ಏನು ಮಾಡಿತು ಗೊತ್ತೆ? ತಮಿಳುನಾಡಿನ ಜಯಲಲಿತಾರನ್ನು 'ಕರ್ನಾಟಕದ ಯೋಜನೆಗೆ ನಿಮ್ಮ ಅಭ್ಯಂತರವೇನಾದರೂ ಇದೆಯೆ?' ಎಂದು ಕೇಳಿತು. ಕರ್ನಾಟಕ - ತಮಿಳುನಾಡು ಗಡಿಯಲ್ಲಿ ಅನೇಕ ಕೆರೆಗಳು ಇದ್ದುದರಿಂದ ಹೀಗೆ ಕೇಳಲಾಯಿತು ಎಂಬುದು 'ಮುತ್ಸದ್ದಿ' ವಾಜಪೇಯಿಯವರ ಸರ್ಕಾರದ ಅಂಬೋಣ. ಮಹಾರಾಷ್ಟ್ರ, ಕೇರಳ ಗಡಿ ಪ್ರದೇಶಗಳಲ್ಲೂ ಕರ್ನಾಟಕದ ಕೆರೆಗಳಿವೆ. ಆದರೆ ತಮಿಳುನಾಡಿನ ಅಭಿಪ್ರಾಯ ಪಡೆಯುವುದು ಅವರಿಗೆ ಮುಖ್ಯವಾಗಿತ್ತು. ಗಡಿಪ್ರದೇಶದ ಕೆರೆಗಳ ಹೂಳೆತ್ತಿದರೆ ನಮ್ಮ ರಾಜ್ಯದ ಜಲಸಂಪನ್ಮೂಲಕ್ಕೆ ಧಕ್ಕೆಯಾಗುವುದೆಂದು ತಮಿಳುನಾಡಿನ ಜಯಲಲಿತಾ ಸರ್ಕಾರ ಆಕ್ಷೇಪವೆತ್ತಿತು. ಈ ಆಧಾರದ ಮೇಲೆ ಕೇಂದ್ರ ಸರ್ಕಾರವು ವಿಶ್ವಬ್ಯಾಂಕ್ ಸಾಲಕ್ಕೆ ಪೂರ್ಣಾನುಮತಿ ನೀಡಲಿಲ್ಲ. ಕೃಷ್ಣ ಸರ್ಕಾರದ ಮಹತ್ವದ ಯೋಜನೆಯೊಂದಕ್ಕೆ ಬಾಲಗ್ರಹ ಬಡಿಯಿತು. ಆನಂತರ ಆಯ್ದ ಕೆರೆಗಳ ಹೂಳೆತ್ತುವ ಕಾರ್ಯ ಕೈಗೊಳ್ಳಲಾಯಿತಾದರೂ ಅದೊಂದು ಆಂದೋಲನವಾಗಲಿಲ್ಲ. ಹಳ್ಳಿಗರಿಗೆ ಅಗತ್ಯ ಉದ್ಯೋಗ ದೊರೆಯಲಿಲ್ಲ. ಒಟ್ಟಾರೆ, 'ಗ್ರಾಮೀಣ ಪ್ರದೇಶದ ನಿರ್ಲಕ್ಷ್ಯ' ಚುನಾವಣೆಯ ಒಂದು ವಿಷಯವಾಯಿತು; ಪರಿಣಾಮವನ್ನುಂಟುಮಾಡಿತು.

ಕರ್ನಾಟಕದ ವಿಧಾನಸಭೆ ಚುನಾವಣೆಯ ಫಲಿತಾಂಶಗಳನ್ನು ನೋಡಿದಾಗ ಜಾತಿ ವಿಷಯವೂ ಒಂದು ಮುಖ್ಯಾಂಶವಾಗಿ ಕೆಲಸ ಮಾಡಿರುವುದು ಕಂಡುಬರುತ್ತದೆ. ಯಾವುದೇ ಒಂದು ಜಾತಿಯು ಇಡಿಯಾಗಿ ಒಂದೇ ಪಕ್ಷವನ್ನು ಬೆಂಬಲಿಸುವುದಿಲ್ಲ ವೆಂಬುದು ನಿಜವಾದರೂ ಜಾತಿಯೊಂದರ ಬಹುಪಾಲು ಮತಗಳು ನಿರ್ದಿಷ್ಟ ಪಕ್ಷ ಅಥವಾ ವ್ಯಕ್ತಿಯ ಪರವಾಗಿ ಚಲಾಯಿಸಲ್ಪಡುವ ಸಾಧ್ಯತೆಗಳು ಇದ್ದೇ ಇದೆ. ನಿರ್ದಿಷ್ಟ ಜಾತಿಯ ಮುಂದಾಳತ್ವ ಮತ್ತು ಅದು ಬಿತ್ತುವ ಭಾವನೆಗಳ ಪಾತ್ರ ಇಲ್ಲಿ ಮುಖ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಬಿ.ಜೆ.ಪಿ.ಗೆ ಬಹುಪಾಲು ಲಿಂಗಾಯಿತರು (ಬ್ರಾಹ್ಮಣರ ಸಮೇತ) ಒಲಿದಿದ್ದಾರೆ. ಜಾತ್ಯತೀತ ಜನತಾದಳಕ್ಕೆ ಬಹುಪಾಲು ಒಕ್ಕಲಿಗರು ಬೆಂಬಲಿಸಿದ್ದಾರೆ. ಜೊತೆಗೆ ಸಿದ್ದರಾಮಯ್ಯನವರು ಮುಖ್ಯಮಂತ್ರಿಯಾದಾರೆಂಬ ನಿರೀಕ್ಷೆಯಲ್ಲಿ ಬಹುಪಾಲು ಕುರುಬರ ಒಲವೂ ದಕ್ಕಿದೆ. ಜಾತ್ಯತೀತ ಜನತಾದಳಕ್ಕೆ ಕೆಲವೆಡೆ ಮುಸ್ಲಿಮರು (ಮುಸ್ಲಿಂ ಅಭ್ಯರ್ಥಿಗಳಿದ್ದ ಕಡೆ) ಬೆಂಬಲಿಸಿದರೂ ಅವರ ಹೆಚ್ಚಿನ ಬೆಂಬಲ ಕಾಂಗ್ರೆಸ್ ಪಕ್ಷಕ್ಕೆ ಲಭ್ಯವಾಗಿದೆ. ಜೊತೆಗೆ ಸಾಕಷ್ಟು ಹಿಂದುಳಿದ ವರ್ಗಗಳು ಇನ್ನೂ ಕಾಂಗ್ರೆಸ್‌ನ ಕೈಬಿಟ್ಟಿಲ್ಲ.

ಮತದಾರರು ಈ ಚುನಾವಣೆಯಲ್ಲಿ ಉತ್ತರಿಸಿದ್ದಾರೆ. ಬಹುಸಂಸ್ಕೃತಿ ಮತ್ತು ಬಹುಧರ್ಮಗಳ ಈ ದೇಶದಲ್ಲಿ ಏಕಸಂಸ್ಕೃತಿ ಮತ್ತು ಏಕಧರ್ಮದ ವೈಪರೀತ್ಯಗಳನ್ನು ಬಹುಮತದ ಮೂಲಕ ವಿರೋಧಿಸಿದ್ದಾರೆ. ಒಮ್ಮೊಮ್ಮೆ ಭಾವೋದ್ರೇಕಕ್ಕೆ ಬಲಿಯಾದರೂ ಆನಂತರ ಸಾವರಿಸಿಕೊಂಡು – ಸಮಾನತೆ ಮತ್ತು ಸಾಮರಸ್ಯಗಳಿಗೆ ಬೆಲೆಯಿದೆಯೆಂದು ತೋರಿಸಿದ್ದಾರೆ. ಆರ್ಥಿಕ ಸುಧಾರಣೆಗಳ ಹೆಸರಿನಲ್ಲಿ ತುಂಬಾ ಅಭಿವೃದ್ಧಿಯಾಗಿದೆಯೆಂದು ಭಾವಿಸಿ 'ಭಾರತ ಪ್ರಕಾಶಿಸುತ್ತಿದೆ' ಎಂದು ಪ್ರಚಾರ ಮಾಡಿದವರಿಗೆ 'ಬಡವರ ಬದುಕು ಪ್ರಕಾಶಿಸಿದರೆ ಮಾತ್ರ ಭಾರತ ಪ್ರಕಾಶಿಸುತ್ತದೆ' ಎಂದು ಉತ್ತರ ನೀಡಿದ್ದಾರೆ.

ಈ ಸಾರಿಯ ಚುನಾವಣೆಯಲ್ಲಿ ಕರ್ನಾಟಕ ವಿಧಾನಸಭೆಗೆ ಒಟ್ಟು ೭೧ ಲಿಂಗಾಯಿತ ಶಾಸಕರು ಬಂದಿದ್ದಾರೆ. ಇವರಲ್ಲಿ ೩೩ ಜನ ಬಿಜೆಪಿಯಿಂದ ಗೆದ್ದಿದ್ದಾರೆ. ಕಾಂಗ್ರೆಸ್‌ನಿಂದ ೧೪ ಮತ್ತು ಜಾತ್ಯತೀತ ಜನತಾದಳದಿಂದ ೧೩ ಜನರು ಗೆದ್ದಿದ್ದಾರೆ. ಒಟ್ಟು ೪೭ ಜನ ಒಕ್ಕಲಿಗ ಅಭ್ಯರ್ಥಿಗಳು ಆಯ್ಕೆಯಾಗಿದ್ದು ಇವರಲ್ಲಿ ೨೩ ಜನ ಜಾತ್ಯತೀತ ಜನತಾದಳಕ್ಕೆ ಸೇರಿದವರು. ಕಾಂಗ್ರೆಸ್‌ನಲ್ಲಿ (ಇಬ್ಬರು ರೆಡ್ಡಿಗಳನ್ನು ಸೇರಿಸಿ) ೧೨, ಬಿಜೆಪಿಯಲ್ಲಿ ೮ ಜನ ಒಕ್ಕಲಿಗ ಜಾತಿ ಮೂಲದವರಿದ್ದಾರೆ. ಕುರುಬರನ್ನು ಒಳಗೊಂಡಂತೆ ಹಿಂದುಳಿದ ವರ್ಗಗಳ ಒಟ್ಟು ೩೫ ಅಭ್ಯರ್ಥಿಗಳು ಗೆದ್ದುಬಂದಿದ್ದು ಇವರಲ್ಲಿ ೧೯ ಜನ ಕಾಂಗ್ರೆಸ್ಸಿನವರು; ಜಾತ್ಯತೀತ ಜನತಾದಳದವರು ೭ ಜನ, ಬಿಜೆಪಿಯವರು ೧೨ ಜನ. ಪರಿಶಿಷ್ಟ ಜಾತಿ ಮತ್ತು ವರ್ಗದಿಂದ ಒಟ್ಟು ೩೭ ಜನರು ಗೆದ್ದಿದ್ದು ಕಾಂಗ್ರೆಸ್ಸಿನಲ್ಲಿ ೧೦ ಜನ, ಜಾತ್ಯತೀತ ಜನತಾದಳದಲ್ಲಿ ೧೨ ಜನ, ಬಿಜೆಪಿಯಲ್ಲಿ ೧೫ ಜನ ಇದ್ದಾರೆ. ಗೆದ್ದಿರುವ ಆರು ಜನ ಮುಸ್ಲಿಂ ಶಾಸಕರಲ್ಲಿ ನಾಲ್ವರು ಕಾಂಗ್ರೆಸ್ಸಿನವರು, ಇಬ್ಬರು ಜಾತ್ಯತೀತ

ಜನತಾದಳದವರು. ೭ ಜನ ಬ್ರಾಹ್ಮಣ ಶಾಸಕರಲ್ಲಿ ಮೂವರು ಕಾಂಗ್ರೆಸ್‌ನಲ್ಲಿ ನಾಲ್ವರು ಬಿಜೆಪಿಯಲ್ಲಿದ್ದಾರೆ. ಪಕ್ಷೇತರ ಶಾಸಕರನ್ನು ಹೊರತುಪಡಿಸಿ ಅಥವಾ ಅವರನ್ನು ಒಳಗೊಂಡಂತೆ ಪರಿಶೀಲಿಸಿದರೂ ಕರ್ನಾಟಕ ವಿಧಾನಸಭೆಯ ಒಟ್ಟು ಸ್ವರೂಪದಲ್ಲಿ ಜಾತಿ-ವರ್ಗಗಳ ಧ್ರುವೀಕರಣವು ಎದ್ದು ಕಾಣುತ್ತಿದ್ದು ಬಿಜೆಪಿಯಲ್ಲಿ ಹೆಚ್ಚಾಗಿ ಲಿಂಗಾಯಿತ ಶಾಸಕರು, ಜಾತ್ಯತೀತ ಜನತಾದಳದಲ್ಲಿ ಹೆಚ್ಚಾಗಿ ಒಕ್ಕಲಿಗರು, ಕಾಂಗ್ರೆಸ್ಸಿನಲ್ಲಿ ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತರು ಗಣನೀಯವಾಗಿರುವುದು ಕಾಣಿಸುತ್ತದೆ. ಗೆದ್ದವರು ಕೇವಲ ತಂತಮ್ಮ ಜಾತಿಯಿಂದ ಮಾತ್ರವೇ ಗೆದ್ದಿರುವುದಿಲ್ಲವೆನ್ನುವುದು ನಿಜವಾದರೂ ಗೆಲುವಿನತ್ತ ಸಾಗಿಸುವ ಒತ್ತಡವಾಗಿ ಆಯಾ ಜಾತಿಭಾವನೆ ವರ್ಗಭಾವನೆಗಳು ಕೆಲಸ ಮಾಡಲು ಸಾಧ್ಯ. ಹಾಗೆ ನೋಡಿದರೆ ಶ್ರೀ ದೇವರಾಜ ಅರಸು ಅವರು ಮುಖ್ಯಮಂತ್ರಿಗಳಾಗುವುದಕ್ಕೆ ಮುಂಚೆ ನಮ್ಮ ವಿಧಾನಸಭೆಯಲ್ಲಿ ಲಿಂಗಾಯಿತ ಶಾಸಕರ ಸಂಖ್ಯೆ ಸದಾ ೭೦ಕ್ಕಿಂತ ಜಾಸ್ತಿ ಇರುತ್ತಿತ್ತು. ಎರಡನೇ ಜಾಗದಲ್ಲಿ ಒಕ್ಕಲಿಗ ಶಾಸಕರ ಸಂಖ್ಯೆ ಇರುತ್ತಿದ್ದುದು ಸಾಮಾಜಿಕ ವಾಸ್ತವವಾಗಿತ್ತು. ಈಗ ಮತ್ತೆ ಸ್ಥೂಲವಾಗಿ ಅದೇ ಸ್ವರೂಪಕ್ಕೆ ಮರಳಲಾಗಿದೆ. ಕಾಂಗ್ರೆಸ್ ಪಕ್ಷವು ತನ್ನನ್ನು ನಂಬಿದ ಜನವರ್ಗಗಳನ್ನು ಸಾಕಷ್ಟು ಗಾಢವಾಗಿ ಒಳಗೊಳ್ಳಲಿಲ್ಲವೆಂಬ ಅಂಶವೂ ಇದರಲ್ಲಿ ಅಡಗಿದೆ.

ಹೀಗೆ ಕರ್ನಾಟಕದ ಚುನಾವಣೆಯಲ್ಲಿ ಅನೇಕ ಅಂಶಗಳು ಕೆಲಸ ಮಾಡಿ ಕಾಂಗ್ರೆಸ್ ಏಕಪಕ್ಷೀಯ ಅಧಿಕಾರವನ್ನು ಕಳೆದುಕೊಂಡಿತು. ಆದರೆ ಜಾತ್ಯತೀತ ಜನತಾದಳದ ಜೊತೆ ಮೈತ್ರಿಕೂಟ ರಚಿಸಿಕೊಂಡು 'ಸಮ್ಮಿಶ್ರ ಸರ್ಕಾರ' ಅಸ್ತಿತ್ವಕ್ಕೆ ಬರುವಂತಾಗಿದೆ. ಅತಿ ದೊಡ್ಡ ಪಕ್ಷವಾಗಿ ಗೆದ್ದು ಬಂದ ಬಿಜೆಪಿ ಸಹಜವಾಗಿಯೇ ಇದನ್ನು 'ಅಪವಿತ್ರ ಮೈತ್ರಿಕೂಟ' ಎಂದು ಜರೆದಿದೆ. ಆದರೆ ಇದೊಂದು 'ಅನಿವಾರ್ಯ ಮೈತ್ರಿಕೂಟ'. ಆಂಧ್ರದಲ್ಲಿ ತೆಲುಗು ದೇಶಂಗೆ ಮೈತ್ರಿಕೂಟಕ್ಕೆ ಮುಂದಾಗುವ ಅವಕಾಶವೇ ಇರಲಿಲ್ಲ. ಕಾಂಗ್ರೆಸ್ ಮೈತ್ರಿಕೂಟದ ನಿಚ್ಚಳ ಬಹುಮತದ ಎದುರು ತೆಲುಗು ದೇಶಂ ಪಕ್ಷವು ಕರ್ನಾಟಕದ ಕಾಂಗ್ರೆಸ್‌ಗಿಂತ ಹೆಚ್ಚು ಆಘಾತಕ್ಕೀಡಾಗಿತ್ತು. ಚಂದ್ರಬಾಬು ನಾಯ್ಡು ಅವರಿಗೆ ನಿಜವಾದ ನೆಲಬಾಂಬ್ ಸ್ಫೋಟವಾದದ್ದು ಈ ಚುನಾವಣೆಯ ಫಲಿತಾಂಶದಲ್ಲಿ.

ಕೇಂದ್ರದಲ್ಲಿ ಬಿಜೆಪಿ ಮೈತ್ರಿಕೂಟವು ಸ್ಪಷ್ಟ ಸೋಲುಂಡು ಕಾಂಗ್ರೆಸ್ ಮೈತ್ರಿಕೂಟವು ಅಧಿಕಾರಕ್ಕೆ ಬಂದಿದೆ. ಸೋನಿಯಾ ಗಾಂಧಿಯವರು ಪ್ರಧಾನಿಯಾಗುತ್ತಾರೆಂಬ ತೀರ್ಮಾನವಾದಾಗ ಬಿಜೆಪಿ ಮತ್ತು ಸಂಘ ಪರಿವಾರದ ಕೆಲವರು ಸೋನಿಯಾ ಪ್ರಧಾನಿಯಾಗುವುದನ್ನು ವಿರೋಧಿಸಿದ ವಿಧಾನವು ಅವರೇ ಹೇಳುವ ಭಾರತೀಯ ಸಂಸ್ಕೃತಿಗೆ ಅನುಗುಣವಾಗಿರಲಿಲ್ಲ. ಒಬ್ಬರು ತಲೆ ಬೋಳಿಸಿಕೊಳ್ಳಲು ಮುಂದಾದರೆ ಮತ್ತೊಬ್ಬರು ಮುಖ್ಯಮಂತ್ರಿ ಪದವಿ ಬಿಡುತ್ತೇನೆಂದರು. ತಲೆ ಬೋಳಿಸಿಕೊಳ್ಳುವವರು (ಸುಷ್ಮಾ ಸ್ವರಾಜ್) ರಾಜ್ಯಸಭೆಯಲ್ಲಿ ಸೋನಿಯಾರನ್ನು 'ಪ್ರಧಾನಿ' ಎಂದು ಸಂಬೋಧಿಸಬೇಕಾಗುತ್ತದೆಯೆಂದು ರಾಜ್ಯಸಭೆಯ ಸದಸ್ಯತ್ವವನ್ನು ಬಿಡುವುದಾಗಿ ಘೋಷಿಸಿದರು. ಗೋವಿಂದಾಚಾರ್ಯರು ಸೋನಿಯಾರ ವಿದೇಶಿ ಮೂಲದ ವಿರುದ್ಧ ರಾಷ್ಟ್ರೀಯ ಆಂದೋಲನ ನಡೆಸುವುದಾಗಿ ಸಾರಿದರು. ವಾಜಪೇಯಿ ನೇತೃತ್ವದಲ್ಲಿ ಸಭೆ ಸೇರಿದ ಎನ್.ಡಿ.ಎ.ಗಳು ಸೋನಿಯಾ ಪ್ರಧಾನಿಯಾಗಿ ಪ್ರಮಾಣ ಸ್ವೀಕರಿಸುವ ಸಮಾರಂಭವನ್ನು ಬಹಿಷ್ಕರಿಸುವುದಾಗಿ ಒಂದಲ್ಲ, ಎರಡು ಸಾರಿ ಘೋಷಣೆ ಮಾಡಿದರು. ಹೀಗೆ ಇವರೆಲ್ಲ ತಮ್ಮ ಸ್ವದೇಶಿ ಭಕ್ತಿಯನ್ನು ರೊಚ್ಚಿನಿಂದ ಪ್ರಕಟಿಸಿದರು. ಇವರಿಗೆಲ್ಲ ನನ್ನದೊಂದು ಚಿಕ್ಕ ಪ್ರಶ್ನೆ: ನಾಗಪುರದಲ್ಲಿರುವ ಆರ್.ಎಸ್.ಎಸ್. ಕಚೇರಿಯ ಮೇಲೆ ರಾಷ್ಟ್ರಧ್ವಜವನ್ನು ಹಾರಿಸುವುದಿಲ್ಲವೆಂದು ಹಟಮಾಡಿ ಸುಮಾರು ನಾಲ್ಕುವರೆ ದಶಕದವರೆಗೆ ಅದೇ ಹಟವನ್ನು ಸಾಧಿಸಿದವರ ವಿರುದ್ಧ ಇವರ ಸ್ವದೇಶಿ ಭಕ್ತಿ ಯಾಕೆ ಮೌನವಾಗಿತ್ತು? ಕ್ಷಮಿಸಿ, ಮೌನವಾಗಿರಲಿಲ್ಲ, ರಾಷ್ಟ್ರಧ್ವಜ ಹಾರಿಸುವುದಿಲ್ಲವೆಂದವರನ್ನೇ ಯಾಕೆ ಬೆಂಬಲಿಸುತ್ತ ಬೆಂಬಲ ತೆಗೆದುಕೊಳ್ಳುತ್ತ ಬರಲಾಯಿತು? ಸೋಗಿನ ಸ್ವದೇಶಿ ಭಕ್ತಿಗೆ ಇದಕ್ಕಿಂತ ಉತ್ತಮ ಉದಾಹರಣೆ ಇರಲು ಸಾಧ್ಯವೆ?

ಸೋಗಿನ ಸ್ವದೇಶಿ ಭಕ್ತರು ಹೀಗೆ ಕಿರಚುತ್ತಿದ್ದಾಗ ಸೋನಿಯಾ

**ಜೋತಿಷಿ**

ಪಂಚಾಂಗ ತೆರೆದು
ಮನೆ ಬರೆದು, ಗುಣಿಸಿ
ಲೆಕ್ಕ ಹಾಕಿ ಲಗ್ನ ನಿಶ್ಚೈಸಿದ

ಮನ ಮುರಿದು
ಮನೆ ಬರಿದಾದಾಗ
ಕರ್ಮವೆನ್ನುವ

ಆಂದನೂರು ಶೋಭ
ಬೆಂಗಳೂರು - ೫೬೦ ೦೧೧

ಗಾಂಧಿ ಕಾರ್ಯತಂತ್ರ ಬೇರೆ ದಾರಿ ಹಿಡಿದಿತ್ತು. ಮೊದಲು ಕಾಂಗ್ರೆಸ್, ಆನಂತರ ಮಿತ್ರಪಕ್ಷಗಳಿಂದ ಪ್ರಧಾನಿ ಪಟ್ಟಕ್ಕೆ ಆಯ್ಕೆಯಾದರು. ಎಡ ಪಕ್ಷಗಳಾದಿಯಾಗಿ ಎಸ್.ಪಿ., ಬಿ.ಎಸ್.ಪಿ. ಮುಂತಾದವರ ಬೆಂಬಲ ಪಡೆದರು. ತಾನು ಪ್ರಧಾನಿಯಾಗಬಲ್ಲೆ ಎಂದು ಜಗತ್ತಿಗೆ ಗೊತ್ತಾಗುವವರೆಗೂ ಸುಮ್ಮನಿದ್ದು ಮರುಕ್ಷಣವೇ ಪ್ರಧಾನಿ ಪಟ್ಟವನ್ನು ನಿರಾಕರಿಸಿದರು. ಸದ್ದುಗದ್ದಲವಿಲ್ಲದೆ ಕೋಮುವಾದಿಗಳ ನಿಶ್ಶಸ್ತ್ರೀಕರಣಕ್ಕೆ ಕಾರಣವಾದರು. ವಿದೇಶಿ ಜನ್ಮ ಮೂಲದ ವಿಷಯ ಕೈತಪ್ಪಿದ ಮೇಲೆ ಎನ್.ಡಿ.ಎ.ಗಳು 'ಕಳಂಕಿತ' ಮಂತ್ರಿಗಳನ್ನು ಕೈಬಿಡಬೇಕೆಂಬ ವಿಷಯವನ್ನು ಕೈಗೆತ್ತಿಕೊಂಡಿದೆ. ತಮ್ಮ ಸರ್ಕಾರದಲ್ಲೂ 'ಕಳಂಕಿತ' ಮಂತ್ರಿಗಳಿದ್ದರು ಎಂಬುದನ್ನು ಇವರು ಜಾಣತನದಿಂದ ಮರೆತಿದ್ದಾರೆ. ವಾಜಪೇಯಿಯವರಿಗೆ ಇದನ್ನು ನೆನಪಿಸಿದಾಗ ತಮ್ಮ ಮಂತ್ರಿಮಂಡಲದಲ್ಲಿದ್ದವರ ಮೇಲೆ 'ರಾಜಕೀಯ ಮೊಕದ್ದಮೆಗಳಿದ್ದವು; ಭ್ರಷ್ಟಾಚಾರದ ಮೊಕದ್ದಮೆಗಳಲ್ಲ, ಈಗಿನ ಕಳಂಕಿತ ಮಂತ್ರಿಗಳ ವಿರುದ್ಧ ಹೋರಾಟ ನಿಲ್ಲುವುದಿಲ್ಲ' ಎಂದಿದ್ದಾರೆ. ಇದು ಬಿಜೆಪಿ ಅಥವಾ ಕಾಂಗ್ರೆಸ್ ಮೈತ್ರಿಕೂಟದ ಪ್ರಶ್ನೆಯಲ್ಲ, ಸಂವಿಧಾನಾತ್ಮಕ ರಾಜಕಾರಣದ ಪ್ರಶ್ನೆ. ಸೂಕ್ತ ನಿಲುವಿಗೆ ಬರುವ ಬಗ್ಗೆ ವಿಧಾಯಕ ಚರ್ಚೆಯಾಗಬೇಕು. ಅಧಿಕಾರ ವಂಚಿತರ ಅಸಹನೆಯೇ ಹೋರಾಟವಾಗಬಾರದು.

ಈಗಿನ ಸ್ಥಿತಿಯಲ್ಲಿ ಒಂದು ಸಂತೋಷದ ಸಂಗತಿಯೆಂದರೆ ಕಾಂಗ್ರೆಸ್ ಮೈತ್ರಿಕೂಟದ 'ಸಾಮಾನ್ಯ ಕಾರ್ಯಕ್ರಮ'ವನ್ನು ರೂಪಿಸುವಲ್ಲಿ ಎಡಪಕ್ಷಗಳು ರಚನಾತ್ಮಕ ಪಾತ್ರ ವಹಿಸಿರುವುದು ಮತ್ತು ಎಡಪಕ್ಷಗಳ ಬೆಂಬಲವಿಲ್ಲದೆ ಕಾಂಗ್ರೆಸ್ ಮೈತ್ರಿಕೂಟ ಸರ್ಕಾರ ಮುಂದುವರೆಯಲು ಸಾಧ್ಯವಿಲ್ಲದಿರುವುದು. ಹೀಗಾಗಿ ಆರ್ಥಿಕ ಉದಾರೀಕರಣದ ಮೊದಲ ಮೆದುಳಾದ ಡಾ. ಮನಮೋಹನ್ ಸಿಂಗ್ ಮಾನವೀಯ ಮುಖದ ಬಗ್ಗೆ ಮಾತಾಡುತ್ತಿದ್ದಾರೆ. ಮೆದುಳಿನಿಂದ ಮನಸ್ಸಿಗೆ ಬಂದಿದ್ದಾರೆ. ನಿರ್ಲಜ್ಜ ಖಾಸಗೀಕರಣಕ್ಕೆ ಕಡಿವಾಣ ಹಾಕಲಾಗಿದ್ದು, ಖಾಸಗಿ ಸಂಸ್ಥೆಗಳಲ್ಲಿ ಮೀಸಲಾತಿ ತರುವ ಪ್ರಸ್ತಾಪವನ್ನು ಮಾಡಲಾಗಿದೆ. ರೈತರು, ಕಾರ್ಮಿಕರು, ಹಾಗೂ ಒಟ್ಟಾರೆ ಬಡವರ ಬಗ್ಗೆ ಕಾಳಜಿ ವಹಿಸುವ ಆಶಯವಂತೂ ಪ್ರಕಟಗೊಂಡಿದೆ. ಎಡಪಕ್ಷಗಳು ಸರ್ಕಾರದೊಳಗೆ ಸೇರಬೇಕೆ ಬೇಡವೆ ಎಂಬ ಬಗ್ಗೆ ಭಿನ್ನಾಭಿಪ್ರಾಯವಿರಲು ಸಾಧ್ಯ. ಆದರೆ ಎಡಪಕ್ಷಗಳು ವಿನಾಕಾರಣ ಸರ್ಕಾರದ ಕಾಲೆಳೆಯುವುದಿಲ್ಲ ಎಂಬ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಅಲ್ಲದೆ, ಸರ್ಕಾರದ ನೀತಿ ನಿರೂಪಣೆಯ ನಿಯಂತ್ರಣ ಸಾಧಿಸುತ್ತವೆಯೆಂಬ ಬಗ್ಗೆಯೂ ಭಿನ್ನಾಭಿಪ್ರಾಯವಿಲ್ಲ. ಎಡಪಂಥೀಯರ ಸಕಾರಾತ್ಮಕ ಬೆಂಬಲ ಮತ್ತು ನಿಯಂತ್ರಣಗಳು ಈಗಿನ ಸರ್ಕಾರವನ್ನು ಸರಿದಾರಿಯಲ್ಲಿ ನಡೆಸಲು ಪೂರಕವಾಗುತ್ತವೆಯೆಂಬ ಆಶಾಭಾವನೆಯಿದೆ. ಕಾಂಗ್ರೆಸ್ ಮೈತ್ರಿಕೂಟವು ಎಲ್ಲರ ನಿರೀಕ್ಷೆಗಳನ್ನು ಪೂರೈಸುತ್ತದೆಯೊ ಇಲ್ಲವೊ ಈಗಲೇ ಹೇಳಲಾಗದು. ಹಾಗೆಂದು ನಾವು ಸದಾ 'ವಿರೋಧ ಪಕ್ಷ'ವಾಗಿಯೇ ಕ್ರಿಯಾಶೀಲರಾಗಬೇಕಿಲ್ಲ. ಯಾವುದಕ್ಕೆ ವಿರೋಧ, ಯಾವುದಕ್ಕೆ ಪರ ಎಂಬ ವಿವೇಕವಿದ್ದರೆ ಸಾಕು. ಇಂತಹ ಸನ್ನಿವೇಶದಲ್ಲಿ ವಿಮರ್ಶಾತ್ಮಕ ವಿವೇಕ ಮುಖ್ಯ; ವಿಮರ್ಶೆ ಮತ್ತು ವಿವೇಕಗಳನ್ನೊಳಗೊಂಡ ವಿರೋಧದ ನೆಲೆ ಆಡಳಿತ ಪಕ್ಷಕ್ಕೆ ಆತ್ಮಶೋಧನೆಯ ಒತ್ತಾಸೆಯನ್ನೂ ವಿರೋಧ ಪಕ್ಷಕ್ಕೆ ರಚನಾತ್ಮಕ ಶಕ್ತಿಯನ್ನೂ ತಂದುಕೊಡುತ್ತದೆ. ನಮ್ಮ ಪಾರ್ಲಿಮೆಂಟರಿ ಪ್ರಜಾಪ್ರಭುತ್ವದ ಒಂದು ವಿಷಾದಕರ ವಿಪರ್ಯಾಸವೆಂದರೆ – ಇಲ್ಲಿ ನಿಜವಾದ ಆಡಳಿತ ಪಕ್ಷವಾಗುವುದು ಕಷ್ಟ; ವಿರೋಧಿಯಾಗಿ ವಿಜೃಂಭಿಸುವುದು ಸುಲಭ.

ಒಟ್ಟಿನಲ್ಲಿ ಹೊಸ ಸರ್ಕಾರ ಅಸ್ತಿತ್ವಕ್ಕೆ ಬಂದಿದೆ. ಕೋಮುವಾದಕ್ಕೆ ಕಡಿವಾಣ ಬಿದ್ದಿದೆ. ಎಲ್ಲ ರೀತಿಯ ಧಾರ್ಮಿಕ ಮೂಲಭೂತವಾದಿಗಳು ಇನ್ನಾದರೂ ಬದಲಾಗಲೆಂದು ಹಾರೈಸೋಣ. ಇದೇ ಸಂದರ್ಭದಲ್ಲಿ ಆರ್ಥಿಕ ಸುಧಾರಣೆಯ ನೆಪದಲ್ಲಿ 'ಆರ್ಥಿಕ ಮೂಲಭೂತವಾದಿಗಳು' ಮೇಲುಗೈ ಪಡೆಯದಂತೆ ಎಚ್ಚರ ವಹಿಸೋಣ.

ಬರಗೂರು ರಾಮಚಂದ್ರಪ್ಪ
೨೭೫, ೧೧ನೇ 'ಬಿ' ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ
೨ನೇ ಹಂತ, ಜೆ.ಪಿ.ನಗರ, ಬೆಂಗಳೂರು – ೫೬೦ ೦೭೮

# ಲಖನೋದ ಮುದುಕಿಯರು ಹಾಗೂ ಮಹಾಚುನಾವಣೆ

ಡಾ॥ ರಹಮತ್ ತರೀಕೆರೆ

**ಈ** ಸಲದ ಚುನಾವಣೆಯಲ್ಲಿ ಕಂಡ ಒಂದು ದೃಶ್ಯ ಯಾಕೋ ಏನೋ ಗಾಢವಾಗಿ ಕಾಡುತ್ತಿದೆ. ಅದೆಂದರೆ ವಾಜಪೇಯಿಯವರು ಪಾರ್ಲಿಮೆಂಟ್ ಚುನಾವಣೆಗೆ ಸ್ಪರ್ಧಿಸಿದ್ದ ಲಖನೋದಲ್ಲಿ, ಐವತ್ತು ರೂಪಾಯಿ ಸೀರೆಗಾಗಿ ಬಂದು, ನೂಕುನುಗ್ಗಲಿನಲ್ಲಿ ಪ್ರಾಣತೆತ್ತ ಮುದುಕಿಯರದು. ಚುನಾವಣೆ ಮುಗಿದು, ಫಲಿತಾಂಶವು ಹೊರಬಿದ್ದು, ತಮ್ಮ ಆಡಳಿತದ ಕಾಲದಲ್ಲಿ ಭಾರತ ಕಂಡರಿಯದ ಕೋಮುಹಿಂಸೆಯನ್ನು ಗುಜರಾತಿನಲ್ಲಿ ಸಂಘಟಿಸಿದ್ದ ಸಂಘಪರಿವಾರದ ಸರಕಾರವು ಅಧಿಕಾರ ಕಳೆದುಕೊಂಡಿದೆ; ಒಂದು ಕಾಲಕ್ಕೆ ಜಾಗತೀಕರಣದ ಶಕೆಯನ್ನು ಭಾರತದಲ್ಲಿ ಉದ್ಘಾಟಿಸಿದ ಮನಮೋಹನ ಸಿಂಗರು ಹೊಸ ಸರಕಾರದ ಚುಕ್ಕಾಣಿಯನ್ನು ವಹಿಸಿಕೊಂಡೂ ಆಗಿದೆ. ಚುನಾವಣೆಯ ಎಲ್ಲ ಗಲಭೆಗಳೂ ಆಟಾಟೋಪಗಳೂ ತಣ್ಣಗಾದಂತೆ ಕಾಣುತ್ತಿದೆ. ಆದರೂ ನಮ್ಮ ದೇಶದ ರಾಜಕೀಯ ಚರಿತ್ರೆಯಲ್ಲಿ ದಾಖಲಾಗದೆ ಹೋಗಬಹುದಾದ ಎಷ್ಟೋ ವಿದ್ಯಮಾನಗಳ ಪೈಕಿ ಒಂದಾಗಿರುವ ಲಖನೋದ ಮುದುಕಿಯರ ಸಾವು ಮಾತ್ರ ಹಿಮ್ಮಡಿಯಲ್ಲಿ ನೆಟ್ಟ ಮುಳ್ಳಿನಂತೆ ಕಾಡುತ್ತಿದೆ.

ಕಾಲ್ತುಳಿತದಲ್ಲಿ ಅನೇಕ ಕಡೆ ಜನ ಸಾಯುತ್ತಾರೆ - ಹಜ್ ಯಾತ್ರೆಯಲ್ಲಿ ಸೈತಾನನಿಗೆ ಕಲ್ಲು ಹೊಡೆಯಲು ಹೋಗಿ; ಕುಂಭಮೇಳದಲ್ಲಿ ಸ್ನಾನ ಮಾಡಲು ಹೋಗಿ; ಆದರೆ ಇವರೆಲ್ಲ ಪುಣ್ಯ ಸಂಪಾದನೆಗಾಗಿ ಹೋಗಿ ಸತ್ತವರು. ಪವಿತ್ರ ಕ್ಷೇತ್ರಗಳಲ್ಲಿ ಸಾಯುವುದೂ ಪುಣ್ಯವೆಂದು ತಿಳಿದವರು. ಇವರ ಸಾವು ಮರುಕ ಹುಟ್ಟಿಸುವುದಿಲ್ಲ. ಆದರೆ ಹದಿನಾಲ್ಕು ಮೊಳದ ಸೀರೆಯ ಆಸೆಗಾಗಿ ಹೋಗಿ ಸತ್ತವರು ಮಾತ್ರ ಪರಮ ನಿರ್ಗತಿಕರು. ವಯಸ್ಸಿನಿಂದ ಜೀರ್ಣರಾಗಿಯೂ ಬಡತನದಿಂದ ನಿಶ್ಯಕ್ತರಾಗಿಯೂ ಇದ್ದ ಅವರ ಜೀವಗಳು ಆ ತುಳಿದಾಟದಲ್ಲಿ ಅರೆಕ್ಷಣಕ್ಕೆ ಹೋಗಿರಬೇಕು. ಶವಾಗಾರದಲ್ಲಿಟ್ಟಿದ್ದ ಆ ಮುದುಕಿಯರ ಚಿತ್ರಗಳನ್ನು ಪತ್ರಿಕೆಗಳು ಅಚ್ಚುಹಾಕಿದ್ದವು. ಕಲ್ಲುಹಾಕಿ ಜಜ್ಜಿದ ಡಬ್ಬದಂತೆ ಬೊಚ್ಚುಬಿದ್ದಿರುವ ಬಾಯಿ ''ಆ...'' ಎಂದು ತೆರೆದಿತ್ತು – ಏನೋ ಹೇಳಲು ಹೋಗಿ ಸತ್ತವರಂತೆ. ಸೀರೆ ಹಂಚಲು ಹಾಕಲಾಗಿದ್ದ ಪೆಂಡಾಲಿನ ಮುಖ್ಯ ದೃಶ್ಯದಲ್ಲಿ ಒಂದು ಉಪದೃಶ್ಯವಿತ್ತು. ಅದೆಂದರೆ ನೂಕುನುಗ್ಗಲಿನಲ್ಲಿ ಬಾಕಿಯಾದ ಆ ಹೆಂಗಸರ ಚಪ್ಪಲಿ ರಾಶಿ. ಅವೆಲ್ಲ ಹವಾಯಿ ಚಪ್ಪಲಿಗಳು. ಬಹುಶಃ ಹಿಮ್ಮಡಿ ಸವೆದು ಅರ್ಧಚಂದ್ರನ ಆಕಾರಕ್ಕೆ ಬಂದಿರುವ, ಬಾರುಗಳ ಗುಂಡಿಗಳು ಕಿತ್ತು ಪಿನ್ನು ಹಾಕಿದ ಚಪ್ಪಲಿಗಳು. ನಮ್ಮ ದೇಶದಲ್ಲಿ ಬಡವರು ಸಾಮಾನ್ಯವಾಗಿ ಬರಿಗಾಲಿನಲ್ಲಿ ನಡೆಯುತ್ತಾರೆ. ಒಂದೊಮ್ಮೆ ಹಾಕಿದರೆ ಹವಾಯಿ ಚಪ್ಪಲಿ ಹಾಕುತ್ತಾರೆ. ಹವಾಯಿ ಚಪ್ಪಲಿಗಳೂ ಭಾರತದ ಬಡವರ ಸಂಗಾತಿಗಳು. ಅಂತೂ ಮುದುಕಿಯರ ಹೆಣಗಳೂ ಅವರ ಹವಾಯಿ ಚಪ್ಪಲಿಗಳೂ ಕೂಡಿಕೊಂಡು ಕಳೆದ ಹತ್ತು ವರುಷಗಳ ಕಾಲ ಜಾಗತೀಕರಣಕ್ಕೊಳಗಾಗಿ ಭಾರತ ಮಾಡಿದ ಸಾಧನೆಯನ್ನು ವ್ಯಂಗ್ಯ ಮಾಡುತ್ತಿದ್ದವು. ಭಾರತದ ಅಭಿವೃದ್ಧಿಯ ಬಗ್ಗೆ ನಮ್ಮ ಅಧಿಕಾರಿಗಳೂ, ತಜ್ಞರೂ, ರಾಜಕಾರಣಿಗಳೂ ಮಾಡುವ ವ್ಯಾಖ್ಯಾನಗಳಿಗೆ ಪ್ರತಿಭಾಷ್ಯವನ್ನು ಬರೆಯುತ್ತಿದ್ದವು. ಚುನಾವಣೆಗಳಲ್ಲಿ ಹಿಂದಿನ ರಾತ್ರಿ ದುಡ್ಡು, ಸರಾಯಿ, ಸೀರೆ, (ಈಸಲ ಮೂಗುತಿ!) ಹಂಚುವುದು ಮೊದಲಿಂದಲೂ ನಡೆದುಬಂದಿದೆ. ಈ ಪದಾರ್ಥಗಳಲ್ಲಿ ಕೊನೆಯವು ಹೆಂಗಸರಿಗೆ ಸಂಬಂಧಿಸಿದ ಉಡುಗೆ ತೊಡುಗೆಗಳು. ಹೆಂಗಸರು ಅವನ್ನು ಪಡೆಯಲು ಹೋಗಿ ಪ್ರಾಣ ಕಳಕೊಂಡಿದ್ದು ಮಾತ್ರ ನಮ್ಮ ರಾಜಕೀಯ ಚರಿತ್ರೆಯಲ್ಲಿ ಹೊಸತಾಗಿದೆ.

ನಾನು ನೋಡಲು ಆಸೆಪಟ್ಟಿರುವ ಭಾರತದ ನಗರಗಳಲ್ಲಿ ಲಖನೊ ಒಂದು. ನನ್ನ ಕಲ್ಪನೆಯ ಲಖನೊ ಬೇರೆಯೇ ಇತ್ತು. ನಾನು ಓದಿ ತಿಳಿದುಕೊಂಡಂತೆ ಲಖನೊ ಭಾರತದ ಹಳೇ ನಗರಗಳಲ್ಲಿ ಒಂದು. 'ಪುರಾತನ ಲಖನೊ' ಎಂಬ ಪ್ರಸಿದ್ಧ ಕೃತಿಯೇ ಪ್ರಕಟವಾಗಿದೆ. ಅವಧ ಪ್ರಾಂತ್ಯದ ರಾಜಧಾನಿಯಾಗಿದ್ದ ಲಖನೊ ಭವ್ಯವಾದ ಕಟ್ಟಡಗಳ ಊರು. ನವಾಬ ಮಹಮ್ಮದ್ ಷಾಹನ ಕಾಲದಲ್ಲಿ ಅದು ದೊಡ್ಡ ಸಾಂಸ್ಕೃತಿಕ ಕೇಂದ್ರವಾಗಿ ಬೆಳೆಯಿತು. ಅದು ತನ್ನ ಸಂಗೀತ, ಕಾವ್ಯ, ನೃತ್ಯ, ವಾಸ್ತುಶಿಲ್ಪಗಳಿಗೆ ಖ್ಯಾತಿ ಪಡೆಯುತ್ತ ಹೋಯಿತು.

ಹೆಸರಾಂತ ಹಾಡುಗಾರ್ತಿ ಉಮರಾವ್ ಜಾನ್ ಅಲ್ಲಿಯವಳು. ಇದು ಭಾರತದ ಶಿಯಾ ಮುಸ್ಲಿಮರ ಸ್ಮಾರಕಗಳಾದ ಇಮಾಂಬಾಡ ಇರುವ ಜಾಗ. ಲಖನೊವಿನ ಕೀರ್ತಿಸುವ ಮಹಮದ್ ರಫಿ ಹಾಡಿದ ಒಂದು ಹಾಡಿದೆ. ಇಡೀ 'ಚೌದವೀಂಕ ಚಾಂದ್' ಲಖನೊ ಕುಲೀನ ಮುಸ್ಲಿಮರ ಮೇಲೆ ತೆಗೆದ ಸಿನಿಮಾ. ಲಖನೊದ ಉರ್ದುವಿಗೆ ಕಾವ್ಯಾತ್ಮಕ ಗುಣವಿದೆ ಎಂದು ಹೇಳುತ್ತಾರೆ. ಲಖನೊ ಉರ್ದು ಸಾಹಿತ್ಯದ ಚರಿತ್ರೆಯಲ್ಲಿ ದೊಡ್ಡ ಕೇಂದ್ರ. ಅದರಲ್ಲೂ ಉರ್ದು ಕಾವ್ಯದ ಜನಪ್ರಿಯ ಪ್ರಕಾರವಾದ ಶಾಯರಿಗಳ ಊರು. ಮಧ್ಯಕಾಲೀನ ನವಾಬಿ ಸಂಸ್ಕೃತಿಯ ಭಾಗವಾಗಿದ್ದ ಶೃಂಗಾರ ವಿಲಾಸ ಪ್ರಧಾನವಾದ ಗಜಲುಗಳ ಜಾಗ. ಲಖನೊದ ಜನರೆಲ್ಲ ಕವಿಗಳೆಂದು ಹೇಳುತ್ತಾರೆ. ಹಾಗೆ ಕಂಡರೆ ಲಖನೊದ ಪಾರ್ಲಿಮೆಂಟ್ ಸೀಟಿಗೆ ಸ್ಪರ್ಧಿಸಿದ್ದ ವಾಜಪೇಯಿಯವರೂ ಕವಿಯಾಗಿ ಹೆಸರಾದವರು. ಸತ್ತ ಬಹುತೇಕ ಹೆಂಗಸರು ಅವರ ವಯಸ್ಸಿನವರೆ. ತನ್ನ ರಾಜಕೀಯ ಗೆಲುವಿನ ಭಾಗವಾಗಿ ಸತ್ತ ಈ ಹೆಂಗಸರ ಮೇಲೆ ಕವಿ ಹೃದಯದ ಈ ರಾಜಕಾರಣಿ ಎಷ್ಟು ಮರುಗಿದರೋ ಗೊತ್ತಿಲ್ಲ. ಆದರೆ ''ಸೀರೆ ಹಂಚುವುದು ತಪ್ಪಲ್ಲ'' ಎಂದು ಹೇಳಿಕೆ ಮಾಡಿದರು. ಒಟ್ಟಿನಲ್ಲಿ ನನ್ನ ರಮ್ಯಕಲ್ಪನೆಯ ಲಖನೊದ ಎಲ್ಲ ಸ್ವಪ್ನಗಳನ್ನು ಈ ಮುದುಕಿಯರು ಚೂರುಮಾಡಿದರು. ರಫಿಯ ಹಾಡಿನಲ್ಲಿ ಇಲ್ಲಿಯ ಜನ ಗೆಳೆತನಕ್ಕಾಗಿ ಜೀವ ಬಿಡುವವರು ಎಂಬ ಸಾಲಿದೆ (''ಕಹೋ ತೊ ದೇದೆ ಜಾನ್ ಭಿ ಜೋ ದೋಸ್ತಿಕಾ ಯಖೀನ್''). ಆದರೆ ಈ ಹೆಂಗಸರು ಸೀರೆಯ ತುಣಿಕಿಗಾಗಿ ಪ್ರಾಣಬಿಟ್ಟು ಲಖನೊದ ಕೀರ್ತಿಯನ್ನು ಹಾಳುಮಾಡಿದರು.

ವಾಜಪೇಯಿಯವರು ಲಖನೊದ ಪ್ರತಿನಿಧಿಯಾಗುವುದೇ ಚರಿತ್ರೆಯ ಒಂದು ವ್ಯಂಗ್ಯ. ಯಾಕೆಂದರೆ ೧೮೫೭ರ ಮೊದಲ ಸ್ವಾತಂತ್ರ್ಯ ಸಂಗ್ರಾಮವು ಕಾನ್ಪುರ ಬಿಟ್ಟರೆ ಭುಗಿಲೆದ್ದಿದ್ದು ಲಖನೊದಲ್ಲಿಯೇ. ಜನರು ಇಲ್ಲಿನ ಬ್ರಿಟಿಷ ರೆಸಿಡೆಂಟನನ್ನು ಕೊಂದು, ಅವನ ಅರಮನೆಯನ್ನು ಧ್ವಂಸಮಾಡಿ ದೊಡ್ಡ ಪೆಟ್ಟು ಕೊಟ್ಟರು. ಮಾನ್ಯ ವಾಜಪೇಯಿಯವರಾದರೂ ಬ್ರಿಟಿಷರ ವಿರುದ್ಧ ಹೋರಾಡಿದವರನ್ನು ಹಿಡಿದುಕೊಡಲು

ಕಾಲ್ತುಳಿತದಲ್ಲಿ ಅನೇಕ ಕಡೆ ಜನ ಸಾಯುತ್ತಾರೆ–ಹಜ್ ಯಾತ್ರೆಯಲ್ಲಿ ಸೈತಾನನಿಗೆ ಕಲ್ಲು ಹೊಡೆಯಲು ಹೋಗಿ; ಕುಂಭಮೇಳದಲ್ಲಿ ಸ್ನಾನ ಮಾಡಲು ಹೋಗಿ; ಆದರೆ ಇವರೆಲ್ಲ ಪುಣ್ಯ ಸಂಪಾದನೆಗಾಗಿ ಹೋಗಿ ಸತ್ತವರು. ಪವಿತ್ರ ಕ್ಷೇತ್ರಗಳಲ್ಲಿ ಸಾಯುವುದೂ ಪುಣ್ಯವೆಂದು ತಿಳಿದವರು. ಇವರ ಸಾವು ಮರುಕ ಹುಟ್ಟಿಸುವುದಿಲ್ಲ, ಆದರೆ ಲಖನೋದಲ್ಲಿ ಹದಿನಾಲ್ಕು ಮೊಳದ ಸೀರೆಯ ಆಸೆಗಾಗಿ ಹೋಗಿ ಸತ್ತವರು ಮಾತ್ರ ಪರಮ ನಿರ್ಗತಿಕರು. ವಯಸ್ಸಿನಿಂದ ಜೀರ್ಣರಾಗಿಯೂ ಬಡತನದಿಂದ ನಿಶ್ಯಕ್ತರಾಗಿಯೂ ಇದ್ದ ಅವರ ಜೀವಗಳು ಆ ತುಳಿದಾಟದಲ್ಲಿ ಅರೆಕ್ಷಣಕ್ಕೆ ಹೋಗಿರಬೇಕು.

ಕಟಕಟೆಯಲ್ಲಿ ನಿಂತು ಸಾಕ್ಷಿ ಹೇಳಿದವರು. ಸಂಘಪರಿವಾರದ ಆಲೋಚನಾ ಕ್ರಮದಲ್ಲಿಯೇ ಜನರ ಸ್ವಾತಂತ್ರ್ಯ, ಹಸಿವು, ಬಡತನ ದೊಡ್ಡ ಸಮಸ್ಯೆಗಳಲ್ಲ ಅನಿಸುತ್ತದೆ. ಏನೇ ಇರಲಿ, ೮೦ ವರುಷಗಳ ವಾಜಪೇಯಿ ನಡೆದಾಡಲು ಕಷ್ಟಪಟ್ಟರೂ, ಪ್ರಧಾನಿಯಾದ ಬಳಿಕ ತಿಂದು ಕುಡಿದು ಸುಖಜೀವನ ಮಾಡಿದವರು. ಎಂತಲೇ ಅವರ ಕೆಂಪನೆಯ ಕೆನ್ನೆಯ ಚರ್ಮದಲ್ಲಿ ಈಗಲೂ ಹೊಳಪಿದೆ. ಅದರ ಆಧಾರದಲ್ಲಿ 'ಭಾರತ ಪ್ರಕಾಶಿಸುತ್ತಿದೆ' ಎಂದು ಧೈರ್ಯದಿಂದ ಹೇಳಬಹುದು. ಆದರೆ ಒಲೆಗಿಟ್ಟರೆ ಧಗ್ಗನೆ ಸುಡುವಂತಹ ದಬ್ಬೆಗಳಂತಿದ್ದ ಆ ಮುದುಕಿಯರು ಲಖನೊದ ಜೋಪಡಿ ಪ್ರದೇಶಗಳಿಂದ, ಕೆಲವರು ಪಕ್ಕದ ಹಳ್ಳಿಗಳಿಂದ ಬಂದವರು. ಅದರಲ್ಲಿ ದಲಿತರು, ಮುಸ್ಲಿಮರು ಎಲ್ಲ ಜಾತಿಯ ಬಡವರಿದ್ದರು. ಅವರ ಕೆನ್ನೆಯ ಮಾಂಸಖಂಡವೆಲ್ಲ ಕರಗಿ ಎಲುಬಿನ ಚೂಪು ಕೋನಗಳು ಇಣುಕುತ್ತ, ನಮ್ಮ ಹೈದರಾಬಾದ್ ಕರ್ನಾಟಕದ ರಸ್ತೆಗಳನ್ನು ನೆನಪಿಸುತ್ತಿದ್ದವು. ಅವರಲ್ಲಿ ಪ್ರಕಾಶಿಸುವಂತಹದ್ದು ಏನಾದರೂ ಇದ್ದರೆ, ಅದು ಸೀರೆ ಸಿಕ್ಕೀತು ಎಂಬ ಆಶೆಯೊಂದೇ ಆಗಿತ್ತು.

ಹೈದರಾಬಾದ್ ಕರ್ನಾಟಕದಲ್ಲೂ ಇಂತಹದೇ ಹೆಂಗಸರ ಒಂದು ದೊಡ್ಡ ಸರತಿಯ ಸಾಲನ್ನು ನಾನು ನೋಡಬೇಕಾಗಿ ಬಂದಿತು – ಚುನಾವಣೆಯ ಕೆಲಸಕ್ಕೆಂದು ಹೋದಾಗ. ನನಗೆ ರಾಯಚೂರು ಜಿಲ್ಲೆಯ ಮಾನವಿ ತಾಲ್ಲೂಕಿನ ಕೋಟೆಕಲ್ ಎಂಬ ಹಳ್ಳಿಯ ಮತಗಟ್ಟೆಗೆ ಹಾಕಲಾಗಿತ್ತು. ಅದೊಂದು ವಿಚಿತ್ರ ಊರು. ಈಗಲೂ ೧೫ನೇ ಶತಮಾನದಲ್ಲಿ ಬದುಕಿರುವಂತಿದೆ. ಮುದ್ದೆಗಳಂತಹ ಬಂಡೆಗಳನ್ನು ಮೈತುಂಬ ಹೇರಿಕೊಂಡಿರುವ ಎರಡು ಬೆಟ್ಟಗಳ ಸಂದಿಯಲ್ಲಿ ಊರಿದೆ. ಯಾವತ್ತಾದರೂ ಆ ಬಂಡೆಗಳಿಗೆ ಕೆಳಗಿಳಿಯಬೇಕೆಂದು ಮನಸ್ಸಾದರೆ, ಇಡೀ ಊರು ಪಡ್ಚಾ ಆಗುತ್ತದೆ. ತಾಲೂಕು ಕೇಂದ್ರ ಮಾನವಿ ನಲವತ್ತು ಮೈಲಿ ದೂರದಲ್ಲಿರುವುದರಿಂದ ಪಕ್ಕದ ತಾಲೂಕಿನ ಕೇಂದ್ರವಾದ ಲಿಂಗಸುಗೂರೇ ಹತ್ತಿರದ ಪಟ್ಟಣ. ಊರಿಗೊಂದೇ ಬೀದಿ. ಇರುವ ೨೫೦ ಮನೆಗಳಲ್ಲಿ ೨೪೫ ಬೇಡ ನಾಯಕರ ಮನೆಗಳು, ೧ ಜಂಗಮರ ಮನೆ. ೪ ಕುಂಬಾರರವು. ಊರ ಮೊದಲಿಗೆ ಇರುವ ಜಂಗಮರ ಮನೆಯವರಿಗೆ ದೊಡ್ಡ ಮನೆ ದೊಡ್ಡ ಆಸ್ತಿಯೂ ಇದೆ. ಮಾನವಿಯಲ್ಲಿ ಕಿರಾಣಿ ಅಂಗಡಿಯಿದೆ. ಆಸ್ತಿಯ ಉಸ್ತುವಾರಿಗೆಂದು ಕೆಲವರನ್ನು ಬಿಟ್ಟು ಉಳಿದವರೆಲ್ಲ ಮಾನವಿಯಲ್ಲಿಯೇ ಇರುತ್ತಾರೆ. ದಷ್ಟಪುಷ್ಟವಾಗಿರುವ ಅವರ ಮನೆಯ ಯುವಕರೊಬ್ಬರು ಬೆಳ್ಳಗೆ ಹೊಳೆಯುವ ಬಟ್ಟೆ ಹಾಕಿಕೊಂಡು ಬೈಕಿನಲ್ಲಿ ಬಂದು ಓಟುಮಾಡಿ ಹೋದರು. ವಿಶೇಷ ಎಂದರೆ ಇಡೀ ಊರಲ್ಲಿ ಯಾರಿಗೂ ಪೆಟ್ರೋಲಿನಿಂದ ನಡೆಯುವ ಗಾಡಿಗಳಿಲ್ಲ, ಆದರೆ ನಾಲ್ಕು ಜನರಿಗೆ ಸೈಕಲ್ಲಿದೆ. ಒಬ್ಬರೂ ಪದವೀಧರರಿಲ್ಲ, ಇಬ್ಬರು ಹುಡುಗರು ಎಸ್.ಎಸ್.ಎಲ್.ಸಿ. ಕಟ್ಟಿದ್ದಾರೆ. ಇಬ್ಬರು ಸರಕಾರಿ ನೌಕರರಿದ್ದಾರೆ. ಅವರಲ್ಲಿ ಒಬ್ಬರು ಪ್ರೈಮರಿ ಸ್ಕೂಲ್ ಟೀಚರ್. ಇನ್ನೊಬ್ಬರು ಕೆ.ಎಸ್.ಆರ್.ಟಿ.ಸಿ. ಕಂಡಕ್ಟರ್. ಈ ವಾಲ್ಮೀಕಿ ಬೇಡರಿಗೆ ರಾಜಕೀಯ ಪ್ರಾತಿನಿಧ್ಯವಿಲ್ಲ ಎಂತಿಲ್ಲ. ಬಹಳ ಕಾಲದಿಂದ ರಾಯಚೂರಿನ ಎಂ.ಪಿ. ಆಗಿರುವ ಕಾಂಗ್ರೆಸ್ಸಿನ ವೆಂಕಟೇಶ ನಾಯಕರು ಬೇಡರ ಪೈಕಿಯೇ. (ಈಗಲೂ ಅವರೇ ಗೆದ್ದಿದ್ದಾರೆ) ಕೋಟೆಕಲ್ಲಿನಲ್ಲಿ ಇರುವ ನಾಗರಿಕ ಸೌಲಭ್ಯಗಳೆಂದರೆ, ಜಿಲ್ಲಾ ಮುಖ್ಯರಸ್ತೆಯಿಂದ ಹಳ್ಳಿಯವರೆಗೆ ಜಲ್ಲಿರಸ್ತೆ, ಒಂದು ಪ್ರೈಮರಿ ಶಾಲೆ, ಕುಡಿಯುವ ನೀರಿನ ಟ್ಯಾಂಕು ಹಾಗೂ ವಿದ್ಯುತ್ ದೀಪಗಳು. ಆದರೆ ತುಂಗಭದ್ರಾ ಎಡದಂಡೆ ಕಾಲುವೆಯ ನೀರೂ ಮಾನವಿ ತಾಲೂಕಿನವರೆಗೆ ಬಂದರೂ ಈ ಊರಿಗೆ ಅದು ಬಂದಿಲ್ಲ. ಮನೆಗೆ ಐದರಿಂದ ಹತ್ತೆಕರೆ ಖುಷ್ಕಿಭೂಮಿಯಿದ್ದರೂ ನೀರಾವರಿ ಇಲ್ಲ. ಮೂರು ವರುಷದಿಂದ ಸರಿಯಾಗಿ ಮಳೆಯಿಲ್ಲ. ಹೆಚ್ಚಿನ ಗಂಡಸರು, ಗಟ್ಟಿಮುಟ್ಟಾಗಿರುವ ಹೆಂಗಸರು ಕಾಫಿ ತೋಟಗಳಿಗೋ, ರಸ್ತೆ ಕೆಲಸಕ್ಕೆ ಗೋವಾ, ಮಂಗಳೂರು, ಪುಣೆ, ಮುಂಬಯಿಗಳತ್ತಲೋ ಗುಳೆ ಹೋಗಿ, ಇಡೀ ಊರು ಅರ್ಧಕ್ಕರ್ಧ ಖಾಲಿಯಾಗಿತ್ತು. ಇಡೀ ಊರಿನಲ್ಲಿ ವಿಶೇಷವೆಂದರೆ ಒಂದೇ ಒಂದು ಮುಸ್ಲಿಮರ ಮನೆಯಿರದಿದ್ದರೂ ೧೬ ಕಂಬದ ಮೊಹರಂ ಹಬ್ಬ ಆಚರಿಸುವ ಮಸೀದಿ ಇದೆ. ಇಷ್ಟು, ಊರಿನ ಸ್ಥೂಲಚಿತ್ರ.




ನಮ್ಮ ಪೋಲಿಂಗ್ ತಂಡವು ಊರಹೊರಗಿನ ಶಾಲೆಯಲ್ಲಿ ಮಲಗಲು ವ್ಯವಸ್ಥೆ ಮಾಡಿಕೊಳ್ಳುವಾಗ ಶಾಲೆಯ ಮುಂಭಾಗದ ಬಯಲಲ್ಲಿ ಹಲವಾರು ಜನ ಮಲಗಲು ಕೌದಿ ಚಾಪೆಯ ವ್ಯವಸ್ಥೆ ಮಾಡಿಕೊಳ್ಳುತ್ತಿದ್ದರು. ಬೇಸಿಗೆಯಲ್ಲಿ ಸೆಕೆಗೆ ಮನೆಯ ಹೊರಗೆ ಮಲಗುವುದು ಹೊಸತಲ್ಲ, ಆದರೆ ಊರ ಹೊರಗೆ? ಅದೂ ಬಯಲಲ್ಲಿ! ಯಾಕೆಂದು ತಿಳಿಯಲಿಲ್ಲ. ಸರಿ ರಾತ್ರಿಯಿರಬೇಕು. ನಾಯಿಗಳು ಬೊಗಳತೊಡಗಿದವು. ವ್ಯಾನೊಂದು ಭರ್ರನೆ ಬಂದಂತೆ, ಅಗಸಿಬಾಗಿಲಿನ ಮುಂದೆ ಮಲಗಿದ್ದ ಜನರೆಲ್ಲ ಗಡಿಬಿಡಿಯಲ್ಲಿ ಎದ್ದಂತೆ, ಏನನ್ನೋ ಇಳಿಸಿಕೊಂಡು ಹಂಚಿಕೊಂಡಂತೆ ಆಯಿತು. ಕೊಂಚ ಹೊತ್ತಿನಲ್ಲಿಯೇ ಊರಿನ ಇನ್ನೊಂದು ದಿಕ್ಕಿನಿಂದ ಇನ್ನೊಂದು ಜೀಪು ಬಂದಂತೆ, ಬಂದವರು ಅಲ್ಲಿದ್ದವರಿಗೆ ಹಿಡಿದು ಬೈದಂತೆ, ಬಡಿದಂತೆ, ಬಡಿಸಿಕೊಂಡವರು ಕೂಗಾಡಿದಂತೆ – ಒಟ್ಟಿನಲ್ಲಿ ಏನೆಂದು ತಿಳಿಯದ ಪ್ರಕ್ಷುಬ್ಧ ಪರಿಸ್ಥಿತಿ! ತಣ್ಣಗಿನ ರಾತ್ರಿಯಲ್ಲಿ ಈ ಕೂಗಾಟ ತೀಕ್ಷ್ಣವಾಗಿತ್ತು. ಮಾರನೆಯ ದಿನ ಬೆಳಕು ಹರಿದ ಮೇಲೆ ಗೊತ್ತಾಯಿತು. ಊರ ಹೊರಗೆ ಮಲಗಿದ್ದವರೆಲ್ಲ ಬೇರೆಬೇರೆ ಪಕ್ಷದವರು ರಾತ್ರೋರಾತ್ರಿ ತಂದು ಕೊಡುವ ಸೀರೆ ಸರಾಯಿ ಪಡೆಯಲು ಕಾದವರು ಎಂದು. ಸೀರೆ (ಸರಾಯಿ?) ಹಂಚಲು ಬಂದವರನ್ನು ಇನ್ನೊಂದು ಪಕ್ಷದವರು ಅಟ್ಟಿಸಿಕೊಂಡು ಬಂದರು. ಮಲಗಿದ್ದವರೆಲ್ಲ ದಿಕ್ಕಾಪಾಲಾಗಿ ಓಡಿಹೋದರು. ಕಾದಿದ್ದವರಿಗೆ ಸೀರೆ ಸಿಕ್ಕಿತೋ ಇಲ್ಲವೋ ಗೊತ್ತಾಗಲಿಲ್ಲ.

ಒಂದು ಸಾವಿರದಷ್ಟು ಜನಸಂಖ್ಯೆಯಿರುವ ಕೋಟೆಕಲ್ಲಿನಲ್ಲಿ ೬೫೦ ಓಟುಗಳಿದ್ದವು. ಅದರಲ್ಲಿ ಅರ್ಧಕ್ಕಿಂತ ಹೆಚ್ಚು ಮತದಾರರು ಹೆಂಗಸರು. ಆದರೆ ೩೯ ಜನ ಮಾತ್ರ ಓಟು ಮಾಡಿದರು. ಮಾಡಿದವರಲ್ಲಿ ಹೆಚ್ಚಿನವರು ಹೆಂಗಸರು ಅಥವಾ ಮುದುಕಿಯರು. ಅವರು ಹೊಸ ಸೀರೆಯನ್ನೇನಾದರೂ ಉಟ್ಟಿದ್ದಾರೆಯೇ ಎಂದು ಕುತೂಹಲದಿಂದ ನೋಡಿದೆ. ೩೯ ಮತದಾರರಲ್ಲಿ ಒಳ್ಳೆ ಬಟ್ಟೆ ತೊಟ್ಟು ಬಂದವರು ೨೦-೩೦ ಜನ ಇರಬೇಕು. ಉಳಿದವರೆಲ್ಲರೂ ಊರ ರೀತಿಯಲ್ಲಿ, ಲಖನೊದಲ್ಲಿ ಸೀರೆಗಾಗಿ ಬಂದು ಸತ್ತುಹೋದವರಿಗಿಂತ ಯಾವ ರೀತಿಯಲ್ಲೂ ಬೇರೆಯಿರಲಿಲ್ಲ. ದೂರದ ಲಖನೊ – ಹತ್ತಿರದ ಕೋಟೆಕಲ್ಲು ಒಂದೇ ಎನಿಸಿತು.

ನನಗೆ ಕಾಡಿಸಿದ್ದು ನಮ್ಮ ಮತಗಟ್ಟೆಯ ಎದುರಿನ ಒಂದು ಗುಡಿಸಲು. ಅದು ಚುನಾವಣೆ ನಿಯಮದ ಪ್ರಕಾರ, ಚುನಾವಣಾ ಪ್ರಚಾರ ಮಾಡಲು ನಿಷೇಧಿಸಿದ ಅಳತೆಯೊಳಗೆ ಬರುತ್ತಿತ್ತು. ಆದರೆ ಅದನ್ನು ಅಲ್ಲಿಂದ ಹೊರಗೆ ಕಳಿಸುವುದಾದರೂ ಹೇಗೆ? ಜೌಗು ನೀರಲ್ಲಿ ಬೆಳೆಯುವ ಹಾಪುಹುಲ್ಲಿನಿಂದ ಮಾಡಿದ ಆ ಸಣ್ಣ ಗುಡಿಸಲ ಬಾಗಿಲು ಎಷ್ಟೋ ದಿನದಿಂದ ಮುಚ್ಚಿದಂತಿತ್ತು; 'ಹೊಸಿಲಲ್ಲಿ ಹುಲ್ಲುಹುಟ್ಟಿ, ಮನೆಹೊಳಗೆ ರಜತುಂಬಿ, ಮನೆಯೊಳಗೆ ಮನೆಯೊಡೆಯ ಇದ್ದಾನೋ ಇಲ್ಲವೋ'? ಎಂಬಂತಿತ್ತು. ಮನೆಯವರು ಎಷ್ಟೋ ದಿನವಾಗಿತ್ತು ಗುಳೆ ಹೋಗಿ. ಮಳೆಬೀಳುವ ಸುದ್ದಿಮುಟ್ಟುವ ತನಕ ಅವರು ಮರಳಿ ಬರುವುದಿಲ್ಲ. ಮತದಾನದ ಪವಿತ್ರ ಕೆಲಸಕ್ಕೆ ಬರಬೇಕು ಎಂದು ಆ ಕುಟುಂಬಕ್ಕೆ ನೆನಪೇ ಇದ್ದಂತಿಲ್ಲ. ಆದರೆ ಇಡೀ ದಿನ, ಇಡೀ ಚುನಾವಣೆಯನ್ನು ಧಿಕ್ಕರಿಸುವಂತೆ, ಅಣಕಿಸುವಂತೆ, ಬೂತಿನ ಮುಂದಿದ್ದ ಆ ಬಾಗಿಲು ಬಡಿದ ಜನವಿಹೀನ ಗುಡಿಸಲು, ಮೌನವಾಗಿ ಕಠೋರವಾಗಿ ನಿಂತಿತ್ತು – ಅನಾಥವಾಗಿ ಬಿದ್ದ ಲಖನೊದ ಮುದುಕಿಯರ ಹವಾಯಿ ಚಪ್ಪಲಿಗಳಂತೆ.

ಮತ್ತೊಂದು ಮುದುಕರ ಜೋಡಿ ಈ ಚುನಾವಣೆಯ ಸಂಬಂಧವಾಗಿಯೇ ನನಗೆ ಹೊಸಪೇಟೆಯ ನಮ್ಮ ಬಡಾವಣೆಯಲ್ಲಿ ಪರಿಚಯವಾಯಿತು. ೭೦ ವರುಷದ ಆಸುಪಾಸಿನ ಇವರು ಹೊಸದಾಗಿ ಕಟ್ಟುತ್ತಿರುವ ಮನೆಗಳ ಕಾವಲು ಕೆಲಸ ಮಾಡುತ್ತ, ಗೋಡೆಗಳ ಕ್ಯೂರಿಂಗ್ ಮಾಡುತ್ತ ಶೆಡ್ಡುಗಳಲ್ಲಿ ವಾಸವಾಗಿದ್ದವರು. ಆ ಮನೆ ಮುಗಿದ ಮೇಲೆ ಇನ್ನೊಂದು ಕಟ್ಟುವ ಮನೆಯನ್ನು ಹುಡುಕಿ, ವಾಚ್‌ಮನ್ ಕೆಲಸವನ್ನು ಕೇಳಿ ಪಡೆದು ಮಾಡುತ್ತ ಇದ್ದರು. ಮುದುಕ ಹನುಮಂತಪ್ಪ ಸಂಜೆ ಪಾಕೀಟು ಹಾಕಿಕೊಂಡು ಭಜನೆ ಪದ ಹಾಡುತ್ತಿದ್ದ. ವಿಚಾರಿಸಿದಾಗ ಬಳ್ಳಾರಿ ಜಿಲ್ಲೆಯ ಕರ್ನಾಟಕದ ಗಡಿಯ ಕೊನೆಯ ಹಳ್ಳಿಯಾದ ಜೋಳದರಾಶಿಯವರು ಎಂದು ತಿಳಿಯಿತು. ಜೋಳದರಾಶಿಯವರೆಂದ ಕೂಡಲೆ ಮತ್ತಷ್ಟು ಸ್ನೇಹ ಬೆಳೆಸಿದೆ. ಪ್ರಸಿದ್ಧ ಗಮಕಿಗಳೂ ನಟರೂ ಆಗಿದ್ದ ಜೋಳದ ರಾಶಿಯ ದೊಡ್ಡನಗೌಡರು ಬದುಕಿದ್ದಾಗ, ಅವರ ಸಂದರ್ಶನ

ಮಾಡಲು ಹೋಗಿ ಕೆಲವು ದಿನ ಅವರಲ್ಲಿ ಉಳಿದುಕೊಂಡಿದ್ದೆ. ಹನುಮಂತಪ್ಪ ಯಾವಾಗಲೂ ಬೀಡಿ ಸೇದುತ್ತ, ಕೊಖಕೊಖ ಕೆಮ್ಮುತ್ತ, ಕ್ಯಾಕರಿಸಿ ಕಫ ತುಪ್ಪುತ್ತ ಇದ್ದನು. ಅವನು ದೊಡ್ಡನಗೌಡರ ಅಪ್ಪನ ಮೇಲೆ ಬೇಕಾದಷ್ಟು ಕಥೆಗಳನ್ನು ಹೇಳುತ್ತಿದ್ದನು. ಒಂದು ಕಥೆಯೆಂದರೆ, ದೊಡ್ಡನಗೌಡರ ಅಪ್ಪ ಕಂಬಳಿ ಹಾಸಿಕೊಂಡು ಜಗುಲಿಮೇಲೆ ಕೂತಾಗ,ದಲಿತಕೇರಿಯ ಕೆಲವರು ದೊಣ್ಣೆ ಹಿಡಿದುಕೊಂಡು ಪೇಟ ಕಟ್ಟಿಕೊಂಡು, ರಾಜಸಭೆಯಲ್ಲಿ ದಂಡಧಾರಿಗಳು ನಿಲ್ಲುವಂತೆ, ಗೌಡರ ಹಿಂದೆ ಹೋಗಿ ನಿಲ್ಲುವ ಕೆಲಸವನ್ನು ಖುಷಿಗಾಗಿ ಮಾಡುತ್ತಿದ್ದರಂತೆ. ಅದನ್ನು ಮಾಡಲು ಪೈಪೋಟಿಯಂತೆ. ಅವರಪ್ಪ ಆ ಕೆಲಸ ಮಾಡುವಾಗ ಇವನು ಚಿಕ್ಕವನಂತೆ. ಅದನ್ನು ಹೆಮ್ಮೆಯಿಂದ ಹೇಳಿಕೊಂಡ.

ಮುದುಕನಿಗೊಬ್ಬ ಮೊಮ್ಮಗನಿದ್ದ. ಅವನು ಜೋಳದರಾಶಿಯಲ್ಲಿ ಲಿಂಗಾಯತರ ಹೋಟಲಿನಲ್ಲಿ ಹೊರಗೆ ಕೂರಿಸಿ ಟೀ ಕೊಡುವ ಲಿಂಗಾಯತರ ಹೋಟಲಿನಲ್ಲಿ ಪ್ರತಿಭಟನೆ ಮಾಡಿದವನು. ಈಗ ಎಲ್ಲರಿಗೂ ಪ್ಲಾಸ್ಟಿಕ್ ಲೋಟಗಳಲ್ಲಿ ಟೀ ಬಂದಿದೆಯಂತೆ. ಎಸ್.ಎಸ್.ಎಲ್.ಸಿ. ಫೇಲಾಗಿದ್ದ ಅವನು ಬಳ್ಳಾರಿಯಲ್ಲಿ ದಿನಸಿ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದನು. ತಿಂಗಳಿಗೆ ೧,೫೦೦/- ರೂ. ಸಂಬಳ. ಅವನ ಬಗ್ಗೆ ಮುದುಕನಿಗೆ ಹೆಮ್ಮೆ. ಏನಾದರೂ ನಮ್ಮ ಮನೆತನಕ್ಕೆ ಒಳ್ಳೇದಾದರೆ ಅವನಿಂದಲೆ ಎಂದು ಹೇಳುತ್ತಿದ್ದನು. ದೇವನೂರರ 'ಒಡಲಾಳ'ದ ಸಾಕವ್ವ ಹಾಗೂ ಅವಳ ಮೊಮ್ಮಗ ಶಿವೂನ ನೆನಪಾಯಿತು. ನನ್ನ ಕುತೂಹಲ ಎಂದರೆ, ಇವರು ಓಟುಮಾಡಲು ಹೋಗುತ್ತಾರೆಯೇ ಇಲ್ಲವೇ ಎಂಬುದು. ಕೇಳಿದೆ. ''ಸಾರ್ಜು ಹಾಕೊಂಡು ಹೆಂಗ ಹೋಗೋದು ಧಣಿ? ಯಾರಾನ ಬಂದು ಸಾರ್ಜು ಹಾಕ್ಕೊಂಡು ಕರಕೊಂಡು ಹೋದರೆ ಹೋಗತೀವಿ'' ಎಂದನು. ಅವನಿಗೆ ತಮ್ಮಿಬ್ಬರ ಹೆಸರಲ್ಲಿ ಯಾರಾದರೂ ಓಟಿಗೆ ನೂರು ರೂಪಾಯಿಯಂತೆ ಯಾರಿಂದಲಾದರೂ ದುಡ್ಡು ಇಸಿದುಕೊಂಡಿರಬಹುದು ಎಂದು ಆತಂಕ. ಯಾರಿಗೆ ಓಟು ಹಾಕಬೇಕು, ಯಾರು ಗೆಲ್ಲಬೇಕು ಎನ್ನುವುದಕ್ಕಿಂತ ಮುಖ್ಯವಾದುದು ಬಸ್‌ಚಾರ್ಜಿನ ಸಮಸ್ಯೆ. ನಾನು ''ಅಲ್ಲ ತಾತ, ಯಾರಿಗೆ ಓಟು ಹಾಕುತ್ತೀಯಾ? ದುಡ್ಡು ಕೊಟ್ಟವರಿಗೋ, ನಿನಗೆ ಇಷ್ಟ ಬಂದವರಿಗೋ?'' ಎಂದೆ. ''ಎಲ್ಲಾನ ಉಂಟಪ್ಪ? ರೊಕ್ಕ ಕೊಟ್ಟೋರಿಗೆ ಓಟು ಕೊಡೋದು ಧರ್ಮ'' ಎಂದನು. ''ಇಲ್ಲಿತನಕ ಯಾರಿಗೆ ಓಟು ಕೊಟ್ಟಿದ್ದೀಯಾ?'' ಎಂದೆ. ''ಹಸ್ತಕ್ಕೆ'' ಎಂದನು.

ಕೊನೆಗೂ ಈ ಮುದುಕರು ಪವಿತ್ರ ಮತದಾನ ಮಾಡಲು ತಮ್ಮ ಹಳ್ಳಿಗೆ ಹೋಗಲು ಆಗಲಿಲ್ಲ. ಕಾರಣ, ಅವರನ್ನು ಚಾರ್ಜುಹಾಕಿ ಕರೆದುಕೊಂಡು ಹೋಗಲು ಯಾರೂ ಬರಲಿಲ್ಲ. ಹೊಸಪೇಟೆಗೆ ಮೊದಲ ಮಳೆ ಬಿದ್ದು ಥಂಡಿ ಗಾಳಿ ಬೀಸಲು ಶುರುವಾಯಿತು. ಮುದುಕನ ದಮ್ಮು ಹೆಚ್ಚಾಯಿತು. ಒಂದು ವಾರದ ನಂತರ ನೋಡಿದರೆ, ಅವರ ಶೆಡ್ಡಿನಲ್ಲಿ ಹೊಸ ಮುದುಕ ಬಂದಿದ್ದ. ವಿಚಾರಿಸಲು, ಮುದುಕ ಸತ್ತುಗಿತ್ತಾನೆಂದು ಮುನ್ನೆಚ್ಚರಿಕೆಯಿಂದ ಮನೆಯ ಕಂಟ್ರಾಕ್ಟರನು ಇಬ್ಬರನ್ನು ಬಿಡಿಸಿ, ಇನ್ನೊಬ್ಬನನ್ನು ನೇಮಿಸಿದ್ದ. ವೃದ್ಧ ದಂಪತಿಗಳು ತಮ್ಮ ಬಟ್ಟೆ ಹಾಸಿಗೆ ಪಾತ್ರೆಗಳೆಲ್ಲವನ್ನು ಮೂರು ಸಿಮೆಂಟು ಚೀಲಗಳಲ್ಲಿ ತುಂಬಿಕೊಂಡು ಸೈಕಲ್ಲು ರಿಕ್ಷಾದಲ್ಲಿ ಕುಳಿತು ಊರಿಗೆ ಹೋಗುತ್ತೇವೆಂದು ಹೊರಟು ಹೋದರಂತೆ. ಜೋಳದರಾಶಿ ಮತಗಟ್ಟೆ ಬರುವ ಬಳ್ಳಾರಿ ಅಸೆಂಬ್ಲಿ ಸೀಟಿಗೂ ಎಂಪಿ ಸೀಟಿಗೂ ಈ ಸಲ ಬಿಜೆಪಿ ಬಂದಿದೆ. ಸೋನಿಯಾ ಗಾಂಧಿಯನ್ನು ಗೆಲ್ಲಿಸಿ ಖ್ಯಾತವಾಗಿದ್ದ ಬಳ್ಳಾರಿಯ ೫೫ ವರುಷಗಳ ಚರಿತ್ರೆಯಲ್ಲಿ ಮೊದಲ ಸಲ ಕಾಂಗ್ರೆಸ್ಸು ಸೋತಿದೆ.

ಈ ಮೂರೂ 'ವಡ್ಡಾರಾಧನೆ'ಯ ಕಥೆಗಳು ಈ ಸಲದ ಚುನಾವಣೆಗೆ ಸಂಬಂಧಪಟ್ಟವು. ಇಂಡಿಯಾದ ಮಹಾಚುನಾವಣೆಯೆಂಬ ಸಾಗರದಿಂದ ಈ ಮೂರು ಹನಿಗಳನ್ನು ಇಟ್ಟುಕೊಂಡು ಇಡೀ ಚುನಾವಣಾ ರಾಜಕೀಯವನ್ನು ಮೌಲ್ಯಮಾಪನ ಮಾಡಬಹುದೇ ಎಂಬ ಪ್ರಶ್ನೆ ಬರಬಹುದು. ಇದಕ್ಕೆ ವಿರುದ್ಧವಾದ ನಿದರ್ಶನಗಳೂ ಸಿಕ್ಕಿಯಾವು. ಆದರೆ ಖಂಡಿತವಾಗಿಯೂ ಇಂತಹ ಚಿಕ್ಕಪುಟ್ಟ ಕಥೆಗಳು ಭಾರತದ ಚುನಾವಣಾ ರಾಜಕಾರಣವನ್ನು ತಮ್ಮದೇ ಆದ ರೀತಿಯಲ್ಲಿ ಮೌಲ್ಯಮಾಪನ ಮಾಡಬಲ್ಲವು. ಕೊನೆಯ ಪಕ್ಷ ಇವು ''ನಮ್ಮ ಜನ ಬಡವರು ಅನಕ್ಷರಸ್ಥರು ಆದರೂ ಪ್ರಜ್ಞಾವಂತರು. ತಮ್ಮ ಮತವನ್ನು ಎಲ್ಲ ಪ್ರಲೋಭನೆಗಳ ಆಚೆ ಹೋಗಿ ಚಲಾಯಿಸುತ್ತಾರೆ'' ಎಂಬ ಅರೆಸತ್ಯದ ಸಂಕಥನವನ್ನು ಒಡೆಯುತ್ತವೆ.

ಈ ಮಾತುಗಳನ್ನು ಹೇಳುವಾಗ ನಾವು ನಮ್ಮ ಚುನಾವಣೆಯ ಪರಿಣಾಮಗಳನ್ನು ಸಿನಿಕರಾಗಿಯೇ ನೋಡಬೇಕಿಲ್ಲ. ಈಸಲದ ಚುನಾವಣೆಯು ಕೊನೆಯ ಪಕ್ಷ ದೇಶದ ಮಟ್ಟದಲ್ಲಿ 'ಮಾನವತೆಯ ಮೇಲೆ ಘೋರ ಅಪರಾಧ' ಎಸಗಿದ ಒಂದು ಸರಕಾರವನ್ನು ಕಿತ್ತುಹಾಕಿದೆ. ಆದರೆ ಅದೇ ಪಕ್ಷಕ್ಕೆ ಕರ್ನಾಟಕದಲ್ಲಿ ಹಿಂದೆಂದೂ ಇಲ್ಲದಷ್ಟು ಬಲ ಕೊಟ್ಟಿದೆ. ಬಸವಣ್ಣನ ಅನುಯಾಯಿಗಳಾದ ಕರ್ನಾಟಕದ ಲಿಂಗಾಯುತರು ತಮಗೆ ಕರ್ನಾಟಕದ ರಾಜಕಾರಣದಲ್ಲಿ ಸೂಕ್ತ ಪ್ರಾತಿನಿಧ್ಯವನ್ನು ಅರಸುತ್ತ ಈ ಹೊತ್ತು ಬಿಜೆಪಿಯ ಅಂಗಳದಲ್ಲಿ ನಿಂತುಕೊಂಡು ಈ ಬಲವನ್ನು ಕೊಟ್ಟಿದ್ದಾರೆ. ಅವರ ಸಾಮಾಜಿಕ ರಾಜಕೀಯ ಆಕಾಂಕ್ಷೆಗಳನ್ನು ಬಸವಣ್ಣನ ''ಉಳ್ಳವರು ಶಿವಾಲಯವ ಮಾಡುವರು'' ವಚನವಾಗಲೀ, ಅಥವಾ ತೋಂಟದಾರ್ಯಸ್ವಾಮಿಗಳು, ಶಿವಮೂರ್ತಿ ಶರಣರು ಮುಂತಾದ ಪ್ರಮುಖ ಸ್ವಾಮಿಗಳು ತೆಗೆದುಕೊಂಡ ಕೋಮುವಾದಿ ವಿರೋಧಿ ನಿಲುವಾಗಲೀ ತಡೆದಂತಿಲ್ಲ. ತಮಿಳುನಾಡು, ಕೇರಳ, ಆಂಧ್ರಪ್ರದೇಶಗಳಲ್ಲಿ ಇಂದು ಬಿಜೆಪಿ ನಾಮಾವಶೇಷವಾಗಿದೆ. ಆದರೆ ಪಂಪ, ಬಸವಣ್ಣ, ಕುವೆಂಪು ಹುಟ್ಟಿದ ನಾಡಲ್ಲಿ, ಅದೂ ಕುವೆಂಪು ಜನ್ಮ ಶತಮಾನೋತ್ಸವದ ವರುಷದಲ್ಲಿ ಕರ್ನಾಟಕದಲ್ಲಿ ಬಿಜೆಪಿಯು ಇಷ್ಟೊಂದು ಶಕ್ತಿಯನ್ನು ಪಡೆದುಕೊಂಡಿದೆ.

ಇದಕ್ಕೆ ಕಾರಣಗಳನ್ನು ನಾವು ಕಾಂಗ್ರೆಸ್ಸಿನ ಚುನಾವಣೆಯನ್ನು ಮನಸ್ಸಲ್ಲಿಟ್ಟುಕೊಂಡು ಆಡುವ ರಾಜಕೀಯ ತಂತ್ರಗಾರಿಕೆಯಲ್ಲಿಯೇ ಹುಡುಕಬೇಕು. ಆದರೆ ಈ ತಂತ್ರಗಾರಿಕೆಯೂ ನಡೆಯದೆ, ಬಾಬಾಬುಡನ್‌ಗಿರಿಯಲ್ಲಿ ಆಟವಾಡಿದ ಕಾಂಗ್ರೆಸ್ಸಿನ ಡಿ. ಬಿ. ಚಂದ್ರೇಗೌಡರು ಸೋತರು. ಜನ ಆಳುವ ಎಲ್ಲ ಪಕ್ಷಗಳ ಮೇಲೆ ನಂಬಿಕೆ ಕಳೆದುಕೊಂಡಿದ್ದಾರೆ. ಚುನಾವಣಾಪೂರ್ವ ಸಮೀಕ್ಷೆಯಲ್ಲಿ ಈಟಿವಿಯ ವರದಿಗಾರ ಒಬ್ಬ ಹುಸೇನಬಿ ಎಂಬ ಮುಸ್ಲಿಂ ಮುದುಕಿಯನ್ನು ಮಾತಾಡಿಸುತ್ತಿದ್ದ. ಅವಳು ಹೇಳಿದಳು: ''ಅಬತಕ್ ಹಾತಕೋ ದಾಲೆ. ಕ್ಯಾಭಿ ನಹಿಹುವಾ. ಏಬಾರ್ ರಾಮುಲುಕಾ ದಾಮನ್ ಪಡಕ್ ಲಿಯೇ ಹೈ'' (ಈತನಕ ಹಸ್ತಕ್ಕೆ ಕೊಟ್ಟೆವಿ. ಏನೂ ಆಗಲಿಲ್ಲ. ಈಸಲ ಏನಾದರೂ ಆಗಬಹುದು ಎಂದು ರಾಮುಲು ಸೆರಗನ್ನು ಹಿಡಿದಿದ್ದೇವೆ). ನನಗೆ ಸೋಜಿಗವಾಯಿತು. ಗುಜರಾತಿನಲ್ಲಿ ಏನೇನಾಯಿತು ಎಂಬುದು ಮುದುಕಿಗೆ ಗೊತ್ತಿಲ್ಲವೇ? ಬಿಜೆಪಿಯ 'ದಾಮನ್' ಹಿಡಿಯುವುದು ಎಂದರೆ ಏನರ್ಥ? ''ಏನಾಗಿದೆ, ಏನಾಗಿದೆ ಜನಕ್ಕೆ?''

ಬಿಜೆಪಿಯ ಬಗೆಗಿನ ಪ್ರಗತಿಪರರ ಪ್ರತಿರೋಧವು ಸಹಜವಾಗಿದೆ. ಯಾಕೆಂದರೆ ಅದು ಮನುಷ್ಯರಲ್ಲಿ ವಿದ್ವೇಷ ಹುಟ್ಟಿಸಿ ರಕ್ತಹರಿಸಿ ಗೆಲ್ಲಬೇಕೆಂದು ಬಯಸುವ ನೀಚ ರಾಜಕಾರಣ ಮಾಡುತ್ತದೆ. ಆದರೆ ಎಷ್ಟೋಸಲ ಅದರ ಬಗೆಗಿನ ಪ್ರಗತಿಪರರ ಆತಂಕ ಹಾಗೂ ವಿರೋಧಗಳು ಅದರ ಬದಲಿಗೆ ಇರುವ ಇತರೆ ಪಕ್ಷಗಳನ್ನು ನಿಷ್ಠುರವಾಗಿ ಮೌಲ್ಯಮಾಪನ ಮಾಡಲು ಅಡ್ಡಿಯಾಗಿವೆ ಅನಿಸುತ್ತದೆ. ''ಬಿಜೆಪಿ ಗೆಲ್ಲಿಸಿದಿರಲ್ಲರೀ'' ಎಂದು ವಿಷಾದ ಸೂಚಿಸಿದರೆ, ಜನ ''ಇಲ್ಲಿಂದ ಗೆದ್ದುಹೋದ ಸೋನಿಯಾ ಬಳ್ಳಾರಿಗೆ ಏನು ಮಾಡಿದರು''? ಸರಳವಾಗಿ ಕೇಳುತ್ತಾರೆ. ಆದ್ದರಿಂದ ಸತ್ಯ, ಬಿಜೆಪಿಯ ಸಂಘಪರಿವಾರದ ಚಿಂತನೆಗೆ ಜನ ಒಲಿದಿದ್ದಾರೆ ಎನ್ನುವುದೋ, ಜೋಳದರಾಶಿಯ ಹನುಮಂತಪ್ಪನ ಸಿದ್ಧಾಂತದಂತೆ ರೊಕ್ಕ ಕೊಟ್ಟವರಿಗೆ ಓಟುಕೊಡುವುದು ಧರ್ಮ ಎಂದು ನಂಬಿದ್ದಾರೋ, ಕಳೆದ ೫೦ ವರುಷ ಕಾಂಗ್ರೆಸ್ಸಿಗೆ ಓಟುಹಾಕಿ ಏನೂ ಬದಲಾವಣೆಯಾಗಿಲ್ಲ ಎಂಬ ಹತಾಶೆಯಿಂದ ಆಡಳಿತದಲ್ಲಿದ್ದ ಪಕ್ಷಗಳನ್ನು ತಿರಸ್ಕರಿಸಿದ್ದಾರೆ ಎನ್ನುವುದೋ? ಕೊನೆಯ ಕಾರಣ ನಿಜವಾದರೆ, ಬಾರಿಸುವುದು ಕೊಟ್ಟು ಊದುವುದು ಕೊಂಡಂತೆ. ಕಾಂಗ್ರೆಸ್ಸಿಗೆ ಕೊಟ್ಟ ಶಿಕ್ಷೆಯ ಫಲವಾಗಿ ಬಂದಿರುವ ಬಿಜೆಪಿ ಎಂತಹ ಪರ್ಯಾಯ? ಜನ ಹೇಳುತ್ತಾರೆ ಬಳ್ಳಾರಿಯ ಹಿಂದಿನ ಶಾಸಕ ದಿವಾಕರ ಬಾಬುವಿನಂತೆ ಈಗಿನ ಶಾಸಕ ಕೂಡ ರೌಡಿ ಹಿನ್ನೆಲೆಯವರು ಎಂದು. ಚಿಕ್ಕಮಗಳೂರಿನ ಮುಸ್ಲಿಮರೇ ಸಗೀರ್ ಅಹಮದ್‌ರ ರಾಜಕಾರಣಕ್ಕೆ ರೋಸಿಹೋಗಿದ್ದರು. ಆದರೆ ಅವರ ಕೋಪದ ಲಾಭ ಪಡೆದು ಬದಲಿಯಾಗಿ ಬಂದಿರುವ ವ್ಯಕ್ತಿ ಭಜರಂಗದಳದ ವ್ಯಕ್ತಿ. ಗೆದ್ದಕೂಡಲೆ ಬಾಬಾಬುಡನ್‌ಗಿರಿಯ ಗುಹೆಗೆ ನುಗ್ಗಿ, ಅದರ ವಿಮೋಚನೆ ಮಾಡುತ್ತೇನೆ ಎಂದು ಹೇಳಿದರು. ಒಂದೋ, ಜನಕ್ಕೆ ಆಯ್ಕೆಗಳೇ ಇಲ್ಲದೆ ಅವರೂ ಸಿನಿಕರಾಗಿದ್ದಾರೆಯೋ? ಚುನಾವಣೆಯಲ್ಲಿ ಜನರ ಮನಸ್ಥಿತಿ ಕೆಲಸ ಮಾಡುವ ವಿಧಾನದ ಬಗ್ಗೆ ಯಾವ ಸಮೀಕರಣವೂ ಸರಳೀಕರಣವಾದೀತು ಎಂಬ ಭಯವಾಗುತ್ತದೆ.

ಈ ಮೇಲಿನ ಸಂಗತಿಗಳು ಒಂದನ್ನಂತೂ ಖಚಿತವಾಗಿ ಸೂಚಿಸುತ್ತವೆ. ಅದೆಂದರೆ ಜನರ ಬಡತನ ಅಸಹಾಯಕತೆಗಳು ವಿಚಿತ್ರವಾದ ತೀರ್ಮಾನಗಳಿಗೆ ಕಾರಣವಾಗುತ್ತವೆ. ಅವು ಲಖನೊದಲ್ಲಿ ಆದಂತೆ ತುಂಡು ಸೀರೆಗಾಗಿ ಸಾವಿನತನಕ ಕರೆದೊಯ್ಯುತ್ತಿವೆ. ದುಡ್ಡು ಸುರಿದವರಿಗೆ ಓಟು ಕೊಡುವಂತೆ ಮಾಡಿ ಜನರನ್ನು ಭ್ರಷ್ಟರನ್ನಾಗಿಸಿವೆ. ಬದುಕಲು ಊರನ್ನೇ ಬಿಟ್ಟುಹೋಗಿರುವ ಕೋಟೆಕಲ್ಲಿನ ಗುಡಿಸಲಿನವರ ಹಾಗೆ ಮತದಾನವನ್ನು ಧಿಕ್ಕರಿಸಿವೆ. ಈ ಮಹಾಚುನಾವಣೆಗಳು ಬಡಜನರ ಪಾಲಿಗೆ, ಹಣಕೊಡುವ, ಪ್ರಾಣತೆಗೆಯುವ, ಭ್ರಷ್ಟಗೊಳಿಸುವ ಕೆಲಸ ಇನ್ನೂ ಮಾಡುತ್ತಿರುತ್ತವೆ. ಅವು ಸಣ್ಣಪುಟ್ಟ ಬಿಡುಗಡೆಯ ನಿಟ್ಟುಸಿರನ್ನು ಬಿಡುವಂತೆ ಬದಲಾವಣೆಗಳನ್ನು ಮಾಡುತ್ತವೆ. ಆದರೆ ನಿರಾಳತೆಯನ್ನಂತೂ ಅಲ್ಲ. ನಿರಾಳತೆ ಎನ್ನುವುದು ಇರುವುದಾದರೆ, ತುಂಡುಬಟ್ಟೆ ಪಡೆಯಲು ಹೋಗಿ ಜೀವಕಳೆದುಕೊಳ್ಳುವ ಪರಿಸ್ಥಿತಿ ದೇಶದಲ್ಲಿ ಇರುವುದಿಲ್ಲ.

**ಡಾ|| ರಹಮತ್ ತರೀಕೆರೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

# ಜೋಕೋತ್ಸವ

**ಈ**ಗಂತೂ ಎಲ್ಲೆಲ್ಲೂ ನಗೆಮೇಳಗಳೇ. ವ್ಯವಸ್ಥಿತವಾಗಿ ವಿನೋದ ಸಭೆಗಳನ್ನು ಏರ್ಪಡಿಸುವ ಸಂಘ, ಸಂಸ್ಥೆಗಳೇ ಇವೆಯಲ್ಲ! ಬೆಳ್ಳಂಬೆಳಗ್ಗೆ ಉದ್ಯಾನವನಗಳಲ್ಲಿ ಆರೋಗ್ಯವರ್ಧನೆಗೆ ನಗುವವರ ಹಿಂಡೂ ಬೆಳೆಯತೊಡಗಿದೆ. ಹಾಸ್ಯಗೋಷ್ಠಿಗಳಲ್ಲಿ ಜಮಾಯಿಸುವವರೆಲ್ಲ ವಿನೋದ ಪ್ರವೃತ್ತಿಯವರೇ ಎಂದು ನೀವು ಭಾವಿಸುವುದು ತಪ್ಪಾದೀತು. ಏಕೆಂದರೆ ನಂಬಿ ಇಲ್ಲವೆ ಬಿಡಿ, ಯಾರು ಯಾರನ್ನು ನಗಿಸುತ್ತಾರೆ ನೋಡಿಯೇಬಿಡೋಣ ಎಂಬ ಸವಾಲು ದೃಷ್ಟಿಯಿಂದಲೇ ಆಸನಗಳನ್ನು ಅಲಂಕರಿಸುವ ಪ್ರೇಕ್ಷಕರ ಒಂದು ವರ್ಗವಿದೆ. ''ನಮ್ಮ ಜೋಕು ಅರ್ಥವಾದರೆ ಜನ ನಗ್ತಾರೆ ಸಾರ್, ಜೋರಾಗಿ ನಕ್ರೆ ಅವರಿಗೆ ಜೋಕು ಅರ್ಥವಾಗಿಲ್ಲ ಅಂತ್ಲೇ ಅರ್ಥ...'' ಎಂದು ಖ್ಯಾತ ಹಾಸ್ಯ ಭಾಷಣಕಾರರೊಬ್ಬರು ನನ್ನೊಂದಿಗೆ ಆಗಾಗ ಹೇಳುವುದುಂಟು! ಒಮ್ಮೆ ಪ್ರೌಢಶಾಲೆಯ ಹೆಡ್‌ಮಾಸ್ಟರರೊಬ್ಬರು ನನ್ನನ್ನು ''ಬನ್ನಿ ನಮ್ಮ ಮಕ್ಕಳನ್ನು ಅಷ್ಟು ನಗಿಸಿ, ಅವ್ರಿಗು ಸ್ವಲ್ಪ ಚೇಂಜಿರಲಿ'' ಎಂದು ತಮ್ಮ ಶಾಲೆಗೆ ಆಹ್ವಾನಿಸಿದ್ದರು. ಸರಿ, ಚಟಾಕಿಗಳನ್ನು ಒಂದೊಂದಾಗಿ ಬಿಡತೊಡಗಿದೆ. ಗ್ರಹಚಾರ ಅನ್ನುತ್ತಾರಲ್ಲ ಅದೇ ಇರಬೇಕು. ಯಾವ ಚಟಾಕಿಗೂ ಯಾರೊಬ್ಬರೂ ನಗಲಿಲ್ಲ. ಸ್ವತಃ ಹೆ.ಮಾ. ಬಹುಶಃ ನಗುವುದು ಸಭ್ಯವಲ್ಲವೇನೋ ಎಂದುಕೊಂಡು ತುಟಿ ಬೇರ್ಪಡಿಸಿದರೆ ಕೇಳಿ! ನನ್ನ ಭಾಷಣ ವಿಫಲವಾದಂತೆಯೇ ಎಂದು ಇನ್ನೇನು ನಾನು ಮಂಗಳ ಹಾಡುವವನಿದ್ದೆ. ಕಟ್ಟಕಡೆಯ ಜೋಕು ಒಪ್ಪಿಸುತ್ತಿದ್ದೆ. ನನ್ನ ಕನ್ನಡಕ ಜಾರಿ ಮೇಜಿನ ಮೇಲೆ ಪುಣ್ಯಕ್ಕೆ ಗಾಜು ಒಡೆಯದೆ ಬಿತ್ತು! ಇಡೀ ಸಭೆ ಸೂರು ಹಾರಿ ಹೋಗುವಂತೆ ಜೋರಾಗಿ ನಕ್ಕಿತು !! ಸದ್ಯ ಈಗಲಾದ್ರೂ ನೀವೆಲ್ಲ ನಕ್ರಲ್ಲ ಧನ್ಯವಾದಗಳು ಅಂದೆ. ತಮ್ಮ ಜೋಕಿಗೆ ನಗದಿದ್ದರೆ ನಗೆಪಟುಗಳ ಪಾಲಿಗೆ ಅದಕ್ಕಿಂತ ದೊಡ್ಡ ಪರಾಭವ ಮತ್ತೊಂದಿಲ್ಲ. ಸತತವಾಗಿ ಮೂರು ಸಮರಗಳಲ್ಲಿ ಸೋತವನಿಗೆ ಕೂಡ ಆ ಪೆಚ್ಚುಮೋರೆ ಇರಲಾರದೆಂದೇ ನನ್ನ ಗ್ರಹಿಕೆ. ನಗಲೇಬಾರದೆಂಬ ಹಟ ಹೊತ್ತವರು ಕೇವಲ ವಿನೋದ ವಾಗ್ಮಿಗಳಿಗಷ್ಟೇ ಅಲ್ಲ ದಂತ ವೈದ್ಯರಿಗೂ ಸಮಸ್ಯೆಯಾಗಿ ಕಾಡುತ್ತಾರೆ.

ನಗೆಮೇಳಗಳನ್ನು ಏರ್ಪಡಿಸುವುದು ಸುಲಭ ಎಂದುಕೊಳ್ಳಬೇಡಿ. ಅದು ಯಾವುದೇ ಇತರೆ ಸಮಾರಂಭಗಳ ವ್ಯವಸ್ಥೆಗಿಂತ ತ್ರಾಸ, ಭಿನ್ನ. ಕೆಲವೊಮ್ಮೆ ಅತ್ಯುತ್ಸಾಹಿ ನಗೆಪಟುಗಳು ನಾನು ತಾನೆಂದು ಸಭಿಕರನ್ನು ನಗಿಸುವ ಸಲುವಾಗಿ ವೇದಿಕೆಯನ್ನು ಮುತ್ತಿಗೆ ಹಾಕಬಹುದು. ಒಬ್ಬೊಬ್ಬರಿಗೂ ಇದ್ದುದರಲ್ಲೇ ಸಮಯಾವಕಾಶ ಕಲ್ಪಿಸಿ ಹೇಗೋ ನಿಭಾಯಿಸಬಹುದೆನ್ನಿ. ಚಿತ್ರವಿಚಿತ್ರ ಜೋಕುಮಾರರು (ಜೋಕು ಹೇಳುವವರು!) ಇರುತ್ತಾರೆ. ವೇದಿಕೆಯೇರುತ್ತಲೇ ಕಂಪಿಸಿದವರೊಬ್ಬರು ನಾನು ಭಾಗವಹಿಸಿದ ಹಾಸ್ಯಗೋಷ್ಠಿಯಲ್ಲಿ ಕೀಳರಿಮೆಯಿಂದ ''ನಾನೊಂದು ನಗೆ ಹನಿ ಹೇಳುತ್ತೇನೆ ದಯವಿಟ್ಟು ಯಾರೂ ನಗಬೇಡಿ'' ಅಂದಾಗ ಇಡೀ ಸಭಾಂಗಣ ನಗೆಗಡಲಿನಲ್ಲಿ ಮುಳುಗಿದ್ದು ಕಣ್ಣಿಗೆ ಕಟ್ಟಿದಂತಿದೆ. ಪ್ರೇಕ್ಷಕರ ತಾಳ್ಮೆಯನ್ನು ಪರೀಕ್ಷಿಸುವಂತೆ ಕೆಲವರು ಕಥೆ ಹೇಳುತ್ತಾ ಮೈಕ್ ಮುಂದೆ ನಿಂತುಬಿಡುತ್ತಾರೆ. ಇಂತಹವರನ್ನು ಕಾರ್ಯಕರ್ತರು ಚೀಟಿ ಕೈಗಿತ್ತು ಹಿಂದಕ್ಕೆ ಕರೆಯಿಸಿಕೊಳ್ಳಬೇಕಾಗುತ್ತದೆ. ನಗೆಪಟುವೊಬ್ಬರು ಒಂದು ಜೋಕ್ ಹೇಳುತ್ತಾರೆನ್ನಿ. ಅದಕ್ಕೆ ಚಪ್ಪಾಳೆಯೂ ಜೋರಾಗಿ ಬೀಳುತ್ತದೆಯೆನ್ನೋಣ. ಅಗೋ ನಿಂತರು ನೋಡಿ ಸಭಿಕ ಮಹಾಶಯರೊಬ್ಬರು! ಏನವರ ಅಹವಾಲು ಅನ್ನುತೀರ? ''ಈ ಜೋಕ್ ನನ್ನದು, ಇದು ಕೃತಿಚೌರ್ಯ ಸಲ್ಲದು'' ಎಂದು. ಒಂದು ಸಾಧ್ಯತೆ ಎಂದರೆ ಆ ಇಬ್ಬರೂ ನಗೆಪಟುಗಳು ಒಂದೇ ಮೂಲದಿಂದ ಜೋಕುಗಳನ್ನು ಸಂಗ್ರಹಿಸಿರಬಹುದು. ಸುದೈವವೋ ದುರ್ದೈವವೋ ಜೋಕೋತ್ಸವಗಳನ್ನು ಹಮ್ಮಿಕೊಳ್ಳುವಾಗಲಂತೂ ಪ್ರಾಯೋಜಕರು ಅನಿವಾರ್ಯ. ಸಮಾರಂಭಕ್ಕೆ ಸಭಾಂಗಣ ನೀಡುವವರಿಂದ ಹಿಡಿದು ಲಘುಭೋಜನ, ಆಮಂತ್ರಣ ಪತ್ರಿಕೆಯ ಮುದ್ರಣ, ಅತಿಥಿಗಳನ್ನು





■ ಬಿಂಡಿಗನವಿಲೆ ಭಗವಾನ್

ಕರೆತಂದು ಕಳಿಸಿಕೊಡುವುದು, ಬ್ಯಾನರ್ ಬರೆಸುವುದು.... ಹೀಗೆ ಎಲ್ಲದಕ್ಕೂ ಆ ಘನ ಉದಾರಿಗಳು ಅಗತ್ಯ. ಈಗ ನೀವೇ ಹೇಳಿ ಆ ಪೈಕಿ ಯಾರೇ ಆಗಲಿ ಒಂದು ಜೋಕ್ ಹೇಳುತ್ತೇನೆಂದರೆ ಕಾರ್ಯಕರ್ತರು ನಿರಾಕರಿಸುವ ರಿಸ್ಕ್ ತೆಗೆದುಕೊಳ್ಳಲಾದೀತೆ !?

ನಮ್ಮ ಏರಿಯಾದಲ್ಲಿ ಈಚೆಗೆ ಒಂದು ವಿನೋದ ಸಂಘ ಆರಂಭವಾಗಿದೆ. ವಾಸ್ತವವಾಗಿ ಎರಡು ವರ್ಷಗಳ ಹಿಂದೆಯೆ ಉತ್ಸಾಹಿಗಳೆಲ್ಲ ಸೇರಿ ಅದರ ಸ್ಥಾಪನೆಗೆ ಗಂಭೀರವಾಗಿ ಯತ್ನಿಸಿದ್ದರು. ಯಾವ ಹೆಸರನ್ನು ಅದಕ್ಕಿಡಬೇಕು ಎಂಬ ವಿಷಯದಲ್ಲಿ ಒಮ್ಮತ ಮೂಡದೆ ಪದೇಪದೇ ಅದರ 'ಟೇಕ್-ಆಫ್' ಮುಂದೂಡುವಂತಾಯಿತು. ಕಡೆಗೆ ಹೆಸರಿಗೆ ಜೋತುಬಿದ್ದರೆ ಸಂಘ ಸ್ಥಾಪನೆಯೆ ಅಸಾಧ್ಯವೆಂದಾದಾಗ 'ವಿನೋದ ಸಂಘ' ಎನ್ನುವುದೇ ಸರಿ ಅನ್ನಿಸಿತು. ಸಂಘಕ್ಕೆ ಮೊದಲು ಕೇವಲ ಎರಡು ಡಜನ್ ಸದಸ್ಯರಿದ್ದರು. ಬಂದು ಕುಳಿತು ನಗುವವರೆಲ್ಲರೂ ಸದಸ್ಯರೆ ಎಂದು ಘೋಷಿಸಿ ನಿಗದಿಯಾಗಿದ್ದ ಅಲ್ಪ ಮೊತ್ತದ ಶುಲ್ಕವನ್ನೂ ರದ್ದು ಮಾಡಿದಾಗ ಆ ಸಂಖ್ಯೆ ಹೆಚ್ಚಾಯಿತು. ಸಭೆ ಪ್ರತಿ ತಿಂಗಳ ಮೊದಲ ಭಾನುವಾರ ಸಂಜೆ. ಪ್ರೈಮರಿ ಶಾಲೆಯ ಹೆ.ಮಾ.ರವರನ್ನೇ ನಾವು ಅಧ್ಯಕ್ಷರನ್ನಾಗಿ ಮಾಡಿರುವು ದರಿಂದ ಸದ್ಯಕ್ಕೆ ಆ ಶಾಲೆಯ ಕೊಠಡಿಯೇ ಸಭಾಂಗಣವಾಗಿ ಲಭ್ಯ! ಅವರ ಜೋಕುಗಳಿಗೆ ಎಲ್ಲರೂ ನಗಲೇಬೇಕೆಂದು ಬೇರೆ ಹೇಳಬೇಕಿಲ್ಲ.

ನಮ್ಮ ಆಚೀಚೆ ಬಡಾವಣೆಗಳಲ್ಲೂ ನಗೆ ಕ್ಲಬ್ಬುಗಳಿವೆ. ಒಮ್ಮೆ ನನ್ನನ್ನೊಬ್ಬರು ಬೀದಿಯಲ್ಲಿ ವಿಚಾರಿಸಿದರು. ''ಸಾರ್ ಇಲ್ಲೆಲ್ಲೋ ಭಾನುವಾರದ ಹ್ಯೂಮರ್ ಕ್ಲಬ್ಬಿದೆಯಂತೆ... ಅಷ್ಟೊತ್ತಿನಿಂದ ಹುಡುಕ್ತಿದೀನಿ, ಸಿಗ್ತಿಲ್ಲ.....'' ಆ ಮಹಾಶಯರನ್ನು ಜೋರಾಗಿ ನಗಿಸಲು ಒಳ್ಳೆಯ ಅವಕಾಶ ಇದೇ ಎಂದುಕೊಂಡ ನಾನು ''ಹೀಗೆ ಮುಂದೆ ಒಂದೂವರೆ ಕಿಲೋಮೀಟರ್ ಹೋಗಿ, ಒಂದು ದೊಡ್ಡ ಕಾಂಪ್ಲೆಕ್ಸ್ ಸಿಗುತ್ತೆ, ಅಲ್ಲಿ ಮೂರನೆ ಮಹಡಿಯ ಒಂದು ಕೊಠಡಿಯಲ್ಲಿ ಎಲ್ರೂ ಮುಖ ಗಂಟಿಕ್ಕಿಕೊಂಡು ಕೂತಿರ್ತಾರೆ.... ಅದೇ ಆ ಕ್ಲಬ್ಬು'' ಎಂದು ವಿವರಿಸಿದೆ. ಅಂತೂ ಆಸಾಮಿ ನಕ್ಕರು ಅನ್ನಿ.

ಸಾಮಾನ್ಯವಾಗಿ ನಗೆ ಮೇಳಗಳಲ್ಲಿ ಅದೇನೋ ವೃತ್ತಿ ದ್ವೇಷ ಅನ್ನುತ್ತಾರಲ್ಲ ಹಾಗೆ ಒಬ್ಬ ನಗೆಪಟುವಿನ ಚಟಾಕಿಗೆ ಇನ್ನೊಬ್ಬ ನಗೆಪಟು ಶತಾಯಗತಾಯ ನಕ್ಕರೆ ಕೇಳಿ! ಎಲ್ಲಕ್ಕಿಂತ ವಿಪರ್ಯಾಸವೆಂದರೆ ಕೆಲವು ಹಾಸ್ಯಪಟುಗಳು ಯಾರದೋ ಅನುಭವವನ್ನು ತಮ್ಮದೇ ಎನ್ನುವಂತೆ ಸಾದರಪಡಿಸಿ ಕರತಾಡನ ಗಿಟ್ಟಿಸುವುದು. ಒಟ್ಟಾರೆ ನಗೆಮೇಳ ನಮಗೆ ನಗು ತರಿಸುವುದೋ ಇಲ್ಲವೋ ಎನ್ನುವುದು ಮುಖ್ಯವಲ್ಲ ಅಲ್ಲಿನ ಆಭಾಸಗಳಂತು ನೂರಕ್ಕೆ ನೂರು ರಂಜನೀಯ.

**ಬಂಡಿಗನವಿಲೆ ಭಗವಾನ್**
ಉಪನ್ಯಾಸಕರು, ಕೊಂಗಾಡಿಯಪ್ಪ ಪದವಿ ಪೂರ್ವ ಕಾಲೇಜು,
ದೊಡ್ಡಬಳ್ಳಾಪುರ - ೫೬೧ ೨೦೩



## ಸ್ಮರಣೆಯೊಂದೇ ಸಾಲದೇ ?

ಗೆಳತೀ,
ನೀ ಮೊದಲ ಸಲ
ಲಂಗ ಬಿಟ್ಟು
ಸೀರೆ ಉಟ್ಟು
ತಟ್ಟನೆ ಎದುರಾದಾಗ
ಉಟ್ಟ ಸೀರೆಯ ನೆರಿಗೆ
ತೊಡರಿ ಬೀಳುವುದನ್ನೂ
ಲೆಕ್ಕಿಸದೆ ತಟಕ್ಕನೆ
ಓಟ ಕಿತ್ತಿದ್ದೆ.

ಸೀರೆಯ ಬಣ್ಣ ಕನಕಾಂಬರ
ಮೇಲೆ ಕರಿ, ಬಿಳಿ ಹೂ
ಮರೆತಿಲ್ಲ ನಿನ್ನ
ಓಕುಳಿ ಎರಚಿದಂತಾದ
ಮುಖದ ರಂಗು.

ಹೃದಯ ಸಂಪುಟದಲ್ಲಿ
ಬೆಚ್ಚಗಿದೆ ನಿನ್ನ ಪಟ
ಮಾಸಿಲ್ಲ, ಕುಟ್ಟೆ ಹುಳ
ತಿಂದಿಲ್ಲ ಈಗಲೂ.

ಅಂದಿಗೂ, ಇಂದಿಗೂ
ನಡುವೆ ನಿಂತಿಹುದು
ನಲವತ್ತು ಮತ್ತೈದು
ವರುಷಗಳ ಉದ್ದ.

ಬಾಳ ಬಟ್ಟೆಯಲಿ
ಮತ್ತೆಂದೂ ಎದುರಾಗದಿರು,
ಥುತ್ತೆಂದು ನಿಲ್ಲದಿರು,
ನನ್ನ ಕಟ್ಟಿಸಿದ ಹಲ್ಲು
ಬಣ್ಣ ಹಚ್ಚಿದ ತಲೆ
ಮುಂದಕುಬ್ಬಿದ ಹೊಟ್ಟೆ
ನಿನ್ನೊಳಗಿದ್ದಿರಬಹುದಾದ ನನ್ನ
ಮರೆಸದಿರಲಿ.

ನನ್ನಂತಾಗಿರಬಹುದಾದ ನಿನ್ನ
ತೋರಿಸದಿರಲಿ
ನನ್ನೊಳಗಿನ ನಿನಗೆ
ಚಿರಯೌವನವಿರಲಿ
ಸಾಗಿದ ಕಾಲರಥ
ಗರ್ಭಗುಡಿಯಲಿ ಪೂಜೆ
ದಿನನಿತ್ಯ ಸಲ್ಲುತಿರಲಿ.

**ವಸುಮತಿ ಉಡುಪ**
'ಗೌರಿ', ೪ನೇ ಕ್ರಾಸ್, ಗಾಂಧೀನಗರ
'ಎ' ಬ್ಲಾಕ್ ಶಿವಮೊಗ್ಗ - ೫೭೭ ೨೦೧

# ಕಂಫರ್ಟ್ ಝೋನಿನ ನೈತಿಕ ವ್ಯಸನ

**ಶಿವಸುಂದರ್**

ಚುನಾವಣಾ ಫಲಶ್ರುತಿ''ಯ ಬಗ್ಗೆ ಪ್ರೊ॥ ಜಿ. ಕೆ. ಗೋವಿಂದರಾಯರ ಲೇಖನ ಓದುತ್ತಾ ಹೋದಂತೆ, ಯುರೋಪಿನ ವಸಾಹತುಶಾಹಿ ದೇಶಗಳ ಸಂಭಾವಿತ ನಾಗರಿಕರ ಡಬಲ್ ಸ್ಟಾಂಡರ್ಡ್‌ಗಳ ಬಗ್ಗೆ ಫ್ರಾನ್ಸಿನ ತತ್ವವೇತ್ತ ಜೀನ್ ಪಾಲ್ ಸಾರ್ತ್ರ್ ಬರೆದ ಮಾತೊಂದು ನೆನಪಿಗೆ ಬರತೊಡಗಿತು. ಈ ವಸಾಹತುಶಾಹಿ ದೇಶಗಳ ಕ್ರೌರ್ಯ ವಸಾಹತುಗಳಲ್ಲಿ ಅತಿ ನಗ್ನವಾಗಿ ಬೆತ್ತಲುಗೊಂಡಿದ್ದರೂ, ಯುರೋಪಿನ ನಾಗರಿಕರು ಮಾತ್ರ ಅದಕ್ಕೆ ಬಟ್ಟೆ ತೊಡಿಸಿಯೆ ನೋಡಬಯಸುತ್ತಾರೆ ಎಂದು ಸಾರ್ತ್ರ್ ವಿಷಾದಿಸಿದ್ದರು. ಕಳೆದ ೫೭ ವರ್ಷಗಳಲ್ಲಿ ಈ ದೇಶದಲ್ಲಿ ಸಂಭವಿಸಿರುವುದೆಲ್ಲಾ ''ಕೊಂಚ ಸ್ಥಿಮಿತ ತಪ್ಪಿದ ಅಧಿಕಾರಸ್ಥರು'' ಮಾಡಿಕೊಂಡಿರುವ ದುರ್ಲಾಭ ಮಾತ್ರ ಎಂದು ಬಣ್ಣಿಸುವ ಜಿಕೆಜಿಯವರ ವಿವರಣೆ ವಸಾಹತುಗಳಲ್ಲಿನ ನಾಗರಿಕರ ಬಗ್ಗೆ ಯುರೋಪಿನ ಸಂಭಾವಿತ ನಾಗರಿಕರ ಮನಸ್ಥಿತಿಯಂತಿದೆಯಲ್ಲವೇ ಎಂಬ ಅನುಮಾನ ಬರತೊಡಗಿತು.

ಜಿಕೆಜಿಯವರು ಈ ನಾಡಿನ ಪ್ರಮುಖ ಪ್ರಗತಿಪರ ದನಿ. ಅವರ ಜನಪರ ಕಾಳಜಿಗಳು ಪ್ರಶ್ನಾತೀತ. ಮೇಲಿನ ಲೇಖನದಲ್ಲಿ ಅವರು ಎತ್ತಿರುವ ಪ್ರಶ್ನೆಗಳು ಈ ಪ್ರಶ್ನಾತೀತ ಕಾಳಜಿಯಿಂದಲೇ ಹುಟ್ಟಿವೆ; ಮಾತ್ರವಲ್ಲ, ಅದು ಜಿಕೆಜಿಯವರಂತಹ ಚಿಂತಕರ ಪ್ರಾತಿನಿಧಿಕ ಪ್ರಶ್ನೆಗಳೂ ಆಗಿವೆ. ಅವರ ಪ್ರಜಾತಾಂತ್ರಿಕ ಕಾಳಜಿಗಳ ಬಗ್ಗೆ ಅಪಾರ ಗೌರವವನ್ನಿಟ್ಟುಕೊಂಡೇ, ಈ ''ಲಿಬರಲ್-ಡೆಮಾಕ್ರಸಿ'' ಎಂಬ ಸೈದ್ಧಾಂತಿಕ ಚೌಕಟ್ಟಿನ ವಿಚಾರ-ವಿಶ್ಲೇಷಣೆಗಳಲ್ಲಿರುವ ವೈರುಧ್ಯ-ಹಾಗೂ-ಸಮಸ್ಯೆಗಳ ಚರ್ಚೆ ಆಗಬೇಕಿದೆ. ಕರ್ನಾಟಕದ ಬೌದ್ಧಿಕ ವಲಯದಲ್ಲಿ ರಾಜಕೀಯ ವಾಗ್ವಾದ-ಸಂವಾದಗಳಿಗಿಂತ ಹೆಚ್ಚಾಗಿ ಪೂರ್ವಾಗ್ರಹದಿಂದ ಕೂಡಿದ ತಿರಸ್ಕಾರಗಳೇ ಪ್ರಧಾನವಾಗಿವೆ. ರಾಜಕೀಯ ಪ್ರಶ್ನೆಗಳನ್ನು ನೈತಿಕ ಪ್ರಶ್ನೆಗಳನ್ನಾಗಿ, ಸಾಮಾಜಿಕ ಆರ್ಥಿಕ ಪ್ರಶ್ನೆಗಳನ್ನು ಕಾನೂನಿನ ಪ್ರಶ್ನೆಗಳನ್ನಾಗಿ ಗ್ರಹಿಸಿಕೊಂಡಿರುವ ಗೊಂದಲಗಳೇ ಮುಂದುವರಿಯುತ್ತಿವೆ. ಜಿಕೆಜಿಯವರ ಲೇಖನ ಅದಕ್ಕೆ ಒಂದು ಉದಾಹರಣೆಯಷ್ಟೆ. ಹೀಗಾಗಿ ಜನಪರ ಹೋರಾಟಗಳ ನೆಲೆ-ನಿಲುವು-ಮಾರ್ಗಗಳನ್ನು ಅರ್ಥಮಾಡಿಕೊಂಡು ಗಂಭೀರ ಸಂವಾದ ನಡೆಯಲೆಂಬ ಆಶಯದಿಂದ ಈ ಪ್ರತಿಕ್ರಿಯೆ.

ಈ ಚುನಾವಣೆಗಳಲ್ಲಿ ಬಿಜೆಪಿ ಅಧಿಕಾರ ಕಳೆದುಕೊಂಡು ಕಾಂಗ್ರೆಸ್ ಅಧಿಕಾರ ಪಡೆದದ್ದು ಅನಿರೀಕ್ಷಿತ. ಹೀಗಾಗಿ ಜಾತ್ಯಾತೀತ ಶಕ್ತಿಗಳಿಗೆ ಅದು ಸಂತಸ ಹಾಗೂ ಸಂಭ್ರಮ ಉಂಟುಮಾಡಿರುವುದೂ ಸಹಜವೇ. ಆದರೆ ಬಿಜೆಪಿಯ ಈ ಚುನಾವಣಾ ಪರಾಜಯ ಫ್ಯಾಸಿಸಂನ ಪರಾಜಯವೆಂದು ಅರ್ಥಮಾಡಿಕೊಳ್ಳುವುದರಲ್ಲಿ ನಮ್ಮ ತಿಳುವಳಿಕೆಯ ಪರಾಜಯವಾಗುತ್ತದೆ. ಚುನಾವಣಾ ನಂತರ ಬಂದಿರುವ ಮತದಾನದ ಅಂಕಿಅಂಶಗಳು ಬಿಜೆಪಿ ಮೇಲ್ಜಾತಿಗಳಲ್ಲಿ ತನ್ನ ಬೆಂಬಲವನ್ನು ಸದೃಢೀಕರಿಸಿಕೊಂಡು, ಹಿಂದುಳಿದ ಜಾತಿಗಳಲ್ಲಿ ಬಿರುಕು ತಂದು, ಆದಿವಾಸಿ-ದಲಿತರ ನಡುವೆ ವಿಸ್ತರಿಸುತ್ತಿರುವುದನ್ನೇ ಎತ್ತಿತೋರಿಸುತ್ತಿದೆ. ಕಾಂಗ್ರೆಸ್‌ನ ಮೈತ್ರಿಕೂಟದ ಚುನಾವಣಾ ತಂತ್ರವು ಬಿಜೆಪಿ ವಿರೋಧಿ ಓಟು ಒಡೆಯದಂತೆ ತಡೆದದ್ದರಿಂದಲೇ ಕಾಂಗ್ರೆಸ್‌ನ ಓಟುಗಳು ಸೀಟುಗಳಾದವು. ಬಿಜೆಪಿ ಪಡೆದ ಓಟುಗಳು ಸೀಟುಗಳಾಗಲಿಲ್ಲ. ಫ್ಯಾಸಿಸಂನ ಅಸಲೀ ಶಕ್ತಿಯಿರುವುದು ಜನಮಾನಸದಲ್ಲಿ ಅವರು ಬಿತ್ತುವ ಭಿನ್ನದಲ್ಲಿ, ಹಾಗೂ ಸಂಘ ಪರಿವಾರದ ಇತರ ಶಾಖೆಗಳ ಸಂಘಟನಾ ಶಕ್ತಿಗಳಲ್ಲಿ ಮತ್ತು ಪ್ರಭುತ್ವದ ಕೇಸರೀಕರಣದಲ್ಲಿ. ಬಿಜೆಪಿಯ ಚುನಾವಣಾ ಪರಾಜಯ ಇವ್ಯಾವುದನ್ನೂ ಪರಾಜಯಗೊಳಿಸಿಲ್ಲ. ಅಸಲು ಫ್ಯಾಸಿಸಂನ ಹುನ್ನಾರಗಳೆಲ್ಲಾ ಸಂವಿಧಾನ ಹಾಗೂ ಚುನಾವಣಾ ಪ್ರಜಾತಂತ್ರದ ಚೌಕಟ್ಟಿನಿಂದ ಹೊರಗಿರುವಂಥದ್ದೇ. ಫ್ಯಾಸಿಸಂ ಎಂದರೆ ಕೇವಲ ಬಿಜೆಪಿ, ನಾಯುಡು, ವಾಜಪೇಯಿಗಳು ಮಾತ್ರವಲ್ಲ. ವ್ಯವಸ್ಥೆ, ಸಮಾಜ ಹಾಗೂ ಪ್ರಭುತ್ವದ ನೈಜವಾದ ಹಾಗೂ ಆಮೂಲಾಗ್ರವಾದ ಪ್ರಜಾತಾಂತ್ರೀಕರಣದಿಂದ ಮಾತ್ರ ಫ್ಯಾಸಿಸಂನ ಮೂಲೋತ್ಪಾಟನೆ ಸಾಧ್ಯವಾಗುತ್ತದೆ. ಕೇವಲ ಶಾಸಕಾಂಗದಲ್ಲಿ, ತಾತ್ಕಾಲಿಕವಾಗಿ ಬಿಜೆಪಿಯ ಬದಲು ಯುಪಿಎ ಮೈತ್ರಿಕೂಟ ಅಧಿಕಾರಕ್ಕೆ ಬರುವುದರಿಂದ ಕೋಮುವಾದ ಸೋತಿತೆಂದು ಭಾವಿಸುವುದು ರಾಜಕೀಯ ಮುಗ್ಧತನವೆಂದಷ್ಟೆ ಹೇಳಬಹುದು. ಈ ತಾತ್ಕಾಲಿಕ ಬದಲಾವಣೆಗಳಿಂದಲೇ ''ಮತ್ತೆ ಕನಸು ಕಾಣುವುದು, ಹೊಸ ನಾಳೆಗಳಿಗೆ ಕಾಯುವುದು'' ಭ್ರಮನಿರಸನವನ್ನಷ್ಟೇ ಹುಟ್ಟುಹಾಕುತ್ತದೆ. ಆಗ ಇದೇ ಬೇರಿಲ್ಲದ ನಿರೀಕ್ಷೆಗಳು ಸಿನಿಕತನಕ್ಕೆ, ಹತಾಶೆಗೆ, ನಿಷ್ಕ್ರಿಯತೆಗೆ, ಕೆಲವೊಮ್ಮೆ ವ್ಯವಸ್ಥೆಯನ್ನು ಬೆಂಬಲಿಸಿಬಿಡುವಂತೆಯೂ ಮಾಡುತ್ತದೆ. ಫ್ಯಾಸಿಸಂ ಯುರೋಪನ್ನು ಆವರಿಸುತ್ತಿದ್ದಾಗ ಲಿಬರಲ್ ಡೆಮಾಕ್ರಸಿಯ ಪರಿಸ್ಥಿತಿಯೂ ಈ ಸ್ಥಿತಿಗೇ ಮುಟ್ಟಿತ್ತು. ಅವು ಮತ್ತೆ ಇಲ್ಲಿ ಮರುಕಳಿಸಬಾರದೆಂದರೆ, ನಾವು ''ನೆಲದ ಮೇಲೆ ಕಾಲನ್ನಿಟ್ಟು, ಆಶಯಗಳ ಕಡೆಗೆ ದೂರದೃಷ್ಟಿಯನ್ನಿಟ್ಟುಕೊಂಡು'' ನಡೆಯಬೇಕು.

> ''ಹಿಂಸೆ - ಹಿಂಸೆಯನ್ನೇ ಹುಟ್ಟಿಹಾಕುತ್ತದೆ ಹೊರತು - ಶಾಂತಿ - ನ್ಯಾಯಗಳನ್ನಲ್ಲ'' ಎಂಬ ಘೋಷಣೆಗೆ ಇತಿಹಾಸದ ಯಾವ ಆಧಾರವೂ ಇಲ್ಲ. ಹಿಂಸೆ - ಹಿಂಸಾತ್ಮಕ ಪ್ರತಿಕ್ರಿಯೆಯನ್ನು ಹುಟ್ಟಿಹಾಕುತ್ತದೆ ವಿನಃ ಹಿಂಸೆಯನ್ನಲ್ಲ.

ವಿಶ್ವಸಂಸ್ಥೆಯ ಕಣ್ಣೆದುರಲ್ಲೇ, ಅಮೆರಿಕ ಪ್ರಣೀತ ನವ ಜಾಗತಿಕ ವ್ಯವಸ್ಥೆ ಬಡದೇಶಗಳ ಮೇಲೆ ಮಾಡುತ್ತಿದ್ದ ದಾಳಿಗಳು ಆರ್ಥಿಕ ಆಕ್ರಮಣದ ಹಂತವನ್ನು ದಾಟಿ, ನೇರ ಸೈನಿಕ ಆಕ್ರಮಣ ಹಾಗೂ ಪ್ರತ್ಯಕ್ಷ ವಸಾಹತೀಕರಣದ ಹಂತ ಮುಟ್ಟುತ್ತಿರುವ ಈ ಕಾಲಘಟ್ಟದಲ್ಲಿ, ಭಾರತದ ಸಂವಿಧಾನ-ಸಂಸತ್ತನ್ನು ಆಸರೆಯಾಗಿಟ್ಟುಕೊಂಡೇ ಫ್ಯಾಸಿಸಂ ಶಕ್ತಿಗಳು ಪ್ರಭುತ್ವದ ಮೇಲೆ ಅಧಿಕಾರ ಪಡೆಯಲು ಸಾಧ್ಯ ಎಂದು ಸಾಬೀತಾಗಿರುವ ಈ ಹೊತ್ತಿನಲ್ಲಿ ಇತರ ಪರ್ಯಾಯ ಮಾರ್ಗಗಳನ್ನು ಗಂಭೀರವಾಗಿ ಪರಿಶೀಲಿಸಬೇಕೇ ವಿನಃ ವಿಚಕ್ಷಣೆಯಿಲ್ಲದೆ ತಿರಸ್ಕರಿಸಬಾರದು. ಇದು ಪ್ರಗತಿಪರರೆಲ್ಲರ ''ಸಾಮಾನ್ಯ ಕನಿಷ್ಠ ಜವಾಬ್ದಾರಿ''!

ಪರಿಸ್ಥಿತಿ ಹೀಗಿರುವಾಗ, ಭಾರತದ ಶೋಷಕ ವ್ಯವಸ್ಥೆಗೆ ಹಾಗೂ ಅಮೆರಿಕ, ವಿಶ್ವಬ್ಯಾಂಕ್, ಇತ್ಯಾದಿ ಸ್ವಾಮ್ಯದ ಜಾಗತಿಕ ವ್ಯವಸ್ಥೆಗೆ ಗಂಭೀರ ಸವಾಲು ಹಾಕುತ್ತಿರುವ ಸಶಸ್ತ್ರ ಹೋರಾಟಗಳಂಥ ಪ್ರಮುಖ ಧಾರೆಯನ್ನೇ ಗೋವಿಂದರಾಯರು ಹೋರಾಟ ಮಾರ್ಗಗಳ ಪಟ್ಟಿಯಿಂದಲೇ ಕಿತ್ತೆಸೆಯುತ್ತಾರೆ. ಮಾತ್ರವಲ್ಲ ಕೋಮುವಾದದಷ್ಟೇ ಅಪಾಯಕಾರಿ ಎಂದು ಶತ್ರುಪಟ್ಟಿಗೆ ಸೇರಿಸುತ್ತಾರೆ. ಇದಕ್ಕೆ ಅವರು ನೀಡುವ ಕಾರಣಗಳೂ ಆಶ್ಚರ್ಯ ಹಾಗೂ ಹತಾಶೆ ಹುಟ್ಟಿಸುತ್ತವೆ. ''ಸಶಸ್ತ್ರ ಹೋರಾಟವೆಂದರೆ ರಕ್ತಪಾತ'', ''ಸಶಸ್ತ್ರ ಹೋರಾಟ ಆಕರ್ಷಣೀಯ'', ''ಸಶಸ್ತ್ರ ಹೋರಾಟದಲ್ಲಿ ಆತ್ಮತ್ಯಾಗಕ್ಕಿಂತ ಇತರರನ್ನು ಕೊಲ್ಲುವ ಹುಮ್ಮಸ್ಸೇ ಹೆಚ್ಚು'' ಎಂಬಂತಹ ಸಶಸ್ತ್ರ ಹೋರಾಟದಲ್ಲಿ ಕೆಟ್ಟ ಸಿನಿಮಾ ಅಥವಾ ಅಮೆಚೂರ್ ಪತ್ರಕರ್ತರಿಗಿರಬಹುದಾದ ರೊಮ್ಯಾಂಟಿಕ್ ಹಾಗೂ ಮೇಲ್‌ಸ್ತರದ ತಿಳುವಳಿಕೆಯನ್ನೇ ವ್ಯಕ್ತಪಡಿಸುತ್ತಾರೆ. ಇದನ್ನೇ ನಾನು ಪ್ರಾರಂಭದಲ್ಲಿ, ಜನಪರ ಹೋರಾಟಗಳ ಬಗೆಗೆ ''ಸಂವಾದ-ವಾಗ್ವಾದ-ತಿಳುವಳಿಕೆಗಳಿಲ್ಲದ'' ಪೂರ್ವಾಗ್ರಹಗಳೆಂದು ಕರೆದದ್ದು. ಆಂಧ್ರದ ಚಂದ್ರಬಾಬು ನಾಯ್ಡುವಾಗಲೀ, ಸ್ವಯಂ ಆಡ್ವಾನಿಗೇ ಆಗಲೀ ಸಶಸ್ತ್ರ ಹೋರಾಟಗಳ ಬಗ್ಗೆ ಜಿಕೆಜಿಯವರಿಗಿರುವ ಅಭಿಪ್ರಾಯಗಳಿಲ್ಲ. ನಕ್ಸಲೈಟರನ್ನು ಕೊಂದ ನಾಯ್ಡುವೇ ಅವರೊಡನೆ ಚರ್ಚೆಗೆ ಸಿದ್ಧನಾದಾಗ, ಜಿಕೆಜಿಯವರು ಅವರನ್ನು ಕೋಮುವಾದಿಗಳ ಪಟ್ಟಿಗೆ ಸೇರಿಸುತ್ತಾರೆ. ಇತ್ತೀಚೆಗೆ ಪ್ರಕಟವಾದ ಯುಪಿಎ ಮೈತ್ರಿಕೂಟದ ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ಸಹ ಈ ಸಶಸ್ತ್ರ ಹೋರಾಟಗಳ ಬಗ್ಗೆ ಹೇಳಿರುವುದೇನೆಂದರೆ ''ಇದು ಕೇವಲ ಒಂದು ಕಾನೂನು ಹಾಗೂ ಸುವ್ಯವಸ್ಥೆಯ ಸಮಸ್ಯೆ ಮಾತ್ರವಲ್ಲ, ಬದಲಿಗೆ ಅತ್ಯಂತ ಆಳವಾದ ಸಾಮಾಜಿಕ-ಆರ್ಥಿಕ ಪ್ರಶ್ನೆಯಾಗಿದ್ದು, ಈವರೆಗೆ ಅದನ್ನು ನಿಭಾಯಿಸಿದ್ದ ರೀತಿಗಿಂತ ಭಿನ್ನವಾಗಿ ಹಾಗೂ ಹೆಚ್ಚು ಅರ್ಥಪೂರ್ಣವಾಗಿ ನಿಭಾಯಿಸಲಾಗುವುದು.'' ಸೈದ್ಧಾಂತಿಕ ಪೂರ್ವಾಗ್ರಹಗಳು ತಪ್ಪು ತಿಳುವಳಿಕೆಗೆ ಹೇಗೆ ಕರೆದೊಯ್ಯುತ್ತವೆ ಎಂಬುದಕ್ಕೆ ಜಿಕೆಜಿಯವರದು ವಿಷಾದನೀಯ ಉದಾಹರಣೆ.

ಈ ರೊಮ್ಯಾಂಟಿಕ್ ಹಿಂಸಾವಾದದ ಸಂಕಲ್ಪನೆಯ ಜೊತೆಗೆ ಜಿಕೆಜಿಯವರು ಸಶಸ್ತ್ರ ಹೋರಾಟಗಳ ಬಗ್ಗೆ ರೊಮ್ಯಾಂಟಿಕ್ ಅಹಿಂಸಾವಾದದ ನೆಲೆಯಲ್ಲಿ ಕೆಲವು ತಾತ್ವಿಕ ಆಕ್ಷೇಪಗಳನ್ನು ವ್ಯಕ್ತಪಡಿಸುತ್ತಾರೆ. ಅದರಲ್ಲಿ ''ಹಿಂಸೆ-ಹಿಂಸೆಯನ್ನು ಮಾತ್ರ ಹುಟ್ಟುಹಾಕಬಹುದೇ ವಿನಃ ಶಾಂತಿ ನ್ಯಾಯಗಳನ್ನು ಸ್ಥಾಪಿಸಲು ಸಾಧ್ಯವಿಲ್ಲ'' ಎಂಬುದು ಪ್ರಮುಖವಾದದ್ದು.

ಒಂದು ಆಶಯವಾಗಿ ಅಹಿಂಸೆ-ಶಾಂತಿ-ನ್ಯಾಯಗಳುಳ್ಳ ಸಮಾಜದ ಕನಸು ಕೇವಲ ಜಿಕೆಜಿಯವರದ್ದು ಮಾತ್ರವಲ್ಲ. ಮನುಕುಲದ ಇತಿಹಾಸ ಚಲಿಸಿರುವುದೇ ಶೋಷಿತರ ಈ ಕನಸಿನಿಂದ. ಬರ್ಬರತೆಯಿಂದ ನಾಗರಿಕತೆಯೆಡೆಗಿನ ಮನುಕುಲದ ಮಹಾಪ್ರಸ್ಥಾನ ಹಿಂಸೆ, ಹಾಗೂ ಯುದ್ಧಗಳಿಂದಲೇ ಕೂಡಿದ್ದೇ ಆಗಿದೆ. ಇದಕ್ಕೆ ಕಾರಣ ಶೋಷಿತರು ಹಿಂಸಾಚಾರಿಗಳೆಂದಲ್ಲ. ಆಯಾ ಕಾಲಘಟ್ಟದ ಶೋಷಕರು ಹಾಗೂ ಅವರ ಪ್ರಭುತ್ವ ವ್ಯವಸ್ಥೆ ಹುಟ್ಟಿಹಾಕಿದ ಹಿಂಸೆಯ ವಿರುದ್ಧ ಜನತೆ ಬಂಡೆದ್ದಾಗಲೆಲ್ಲಾ ಭೀಕರ ಹಿಂಸಾಚಾರ ನಡೆಸಿದ್ದು ಕಾನೂನುಬದ್ಧ ಪ್ರಭುತ್ವಗಳೇ ವಿನಃ ಶೋಷಿತ ಜನತೆಯಲ್ಲ. ಆ ಶೋಷಕ ಪ್ರಭುತ್ವದ ದಮನ ಶಕ್ತಿಯನ್ನು ಜನತೆಯ ಶಕ್ತಿ ಮೀರಿದಾಗ, ಮುರಿದಾಗ ಮಾತ್ರ ಇತಿಹಾಸ ಮುಂದೆ ಚಲಿಸಿದೆ. ಆದರ ಬದಲಿಗೆ ಎಷ್ಟೇ ಸದಾಶಯ ಹೊಂದಿದ್ದರೂ, ಶೋಷಕ ಪ್ರಭುತ್ವದ ಶಕ್ತಿಯನ್ನು ಮುರಿಯದೇ ಹೋದಾಗ ಆ ಆಶಯಗಳು ಸುಂದರ ಸ್ವಪ್ನಗಳಾಗಿ ಅಷ್ಟೇ ಉಳಿದುಕೊಂಡಿವೆ. ಇತಿಹಾಸದಲ್ಲಿ ಅದಕ್ಕೆ ಹೇರಳವಾದ ಉದಾಹರಣೆಗಳಿವೆ.

ಗುಲಾಮಗಿರಿಯ ವಿರುದ್ಧ ಗುಲಾಮರು ನಡೆಸಿದ ಬಂಡಾಯ ಹಿಂಸಾತ್ಮಕವಾಗಿಯೇ ಇತ್ತು. ಏಕೆಂದರೆ ಗುಲಾಮಗಿರಿ ಉಳಿಸಿಕೊಳ್ಳಲು ಒಡೆಯರ ಪ್ರಭುತ್ವ ಗುಲಾಮರ ವಿರುದ್ಧ ಯುದ್ಧ ಸಾರಿತ್ತು. ಫ್ರಾನ್ಸಿನ ಊಳಿಗಮಾನ್ಯ ಅರಸೊತ್ತಿಗೆಯ ವಿರುದ್ಧ ರೈತರು ವ್ಯಾಪಾರಿಗಳು ನಡೆಸಿದ ಬಂಡಾಯ ಅತ್ಯಂತ ಹಿಂಸಾತ್ಮಕವಾಗಿತ್ತು. ಏಕೆಂದರೆ ಊಳಿಗಮಾನ್ಯ ದೊರೆಗಳ ಪ್ರಭುತ್ವ ಸೇನಾಬಲದಿಂದ-ದಮನದಿಂದ ಬಂಡಾಯವನ್ನು ಹತ್ತಿಕ್ಕಲು ಪ್ರಯತ್ನಿಸಿತು. ಈ ಅತ್ಯಂತ ಹಿಂಸಾಯುಕ್ತ ಹೋರಾಟದಿಂದಲೇ ಜಿಕೆಜಿಯವರು ಆರಾಧಿಸುತ್ತಿರುವ ಪಾರ್ಲಿಮೆಂಟರಿ ಪ್ರಜಾಪ್ರಭುತ್ವ ಹುಟ್ಟಿಕೊಂಡದ್ದು. ಈ ಪಾರ್ಲಿಮೆಂಟರಿ ಪ್ರಜಾಪ್ರಭುತ್ವದ ಆಸರೆಯಲ್ಲೇ ಫ್ಯಾಸಿಸಂ ಹುಟ್ಟಿಕೊಂಡು ಮನುಕುಲವೇ ಕಂಡರಿಯದಷ್ಟು ಹಿಂಸಾಚಾರವಡಗಿದ್ದ ಮಹಾಯುದ್ಧದಲ್ಲಿ ಪರ್ಯವಸಾನವಾಗಿತ್ತು. ಏಕೆಂದರೆ ಪಾರ್ಲಿಮೆಂಟರಿ ಪ್ರಜಾತಂತ್ರದ ಅಡಿಯಲ್ಲಿದ್ದ ಸೇನೆಯೇ ಫ್ಯಾಸಿಸ್ಟ್‌ರಡಿ ಪ್ರಜಾತಂತ್ರದ ವಿರುದ್ಧ, ವಿಶ್ವದ ವಿರುದ್ಧ, ಘನಘೋರ ಯುದ್ಧ ನಡೆಸಿತು. ಈ ಸಂದರ್ಭಗಳಲ್ಲಿ ಜನತೆಯ ಹಿಂಸಾತ್ಮಕ ಪ್ರತಿಕ್ರಿಯೆಗಳಿಂದಲೇ ಇದ್ದುದರಲ್ಲಿ ಸಹನೀಯ ಶಾಂತಿ-ನ್ಯಾಯ ಪರಿಕಲ್ಪನೆಗಳುಳ್ಳ ಸಮಾಜ ಸೃಷ್ಟಿಯಾಯಿತು.

ಹೀಗಾಗಿ "ಹಿಂಸೆ-ಹಿಂಸೆಯನ್ನೇ ಹುಟ್ಟಿ ಹಾಕುತ್ತದೆ ಹೊರತು-ಶಾಂತಿ-ನ್ಯಾಯಗಳನ್ನಲ್ಲ" ಎಂಬ ಘೋಷಣೆಗೆ ಇತಿಹಾಸದ ಯಾವ ಆಧಾರವೂ ಇಲ್ಲ. ಹಿಂಸೆ-ಹಿಂಸಾತ್ಮಕ ಪ್ರತಿಕ್ರಿಯೆಯನ್ನು ಹುಟ್ಟಿಹಾಕುತ್ತದೆ ವಿನಃ ಹಿಂಸೆಯನ್ನಲ್ಲ. ಆದರೆ ಹಿಂಸೆ-ಅಹಿಂಸೆಯನ್ನು ಹುಟ್ಟಿಹಾಕಬೇಕೆಂದು ಜಿಕೆಜಿ ನಿರೀಕ್ಷಿಸುತ್ತಾರೆ. ಅಸಲು, ಹಿಂಸೆ ಎಂದರೆ ಯಾವುದು? ಬಡತನ ಒಂದು ಹಿಂಸೆ. ಜಾತಿ ಅಪಮಾನ ಹಿಂಸೆ, ವರದಕ್ಷಿಣೆ-ಪುರುಷಾಧಿಪತ್ಯ ಹಿಂಸೆ. ಆದಿವಾಸಿಗಳನ್ನು ಅಡವಿಯಿಂದ ಒಕ್ಕಲೆಬ್ಬಿಸುವುದು ಹಿಂಸೆ. ತಿಂಗಳಿಗೆ ೧೨೦೦ ರೂ. ಸಂಬಳವೂ ಬರದ ಸಾವಿರಾರು ಪೌರ ಕಾರ್ಮಿಕರಿರುವ ಬೆಂಗಳೂರಿನಲ್ಲಿ ಕೆಲವರಿಗೆ ಮಾತ್ರ ಗಂಟೆಗೆ ೧೦,೦೦೦ ರೂ. ಸಂಬಳ ಬರುವುದು ಹಿಂಸೆ. ಈ ಅಸಮಾನತೆಯನ್ನು ವ್ಯವಸ್ಥಿತಗೊಳಿಸಿ - ಮಾನ್ಯಗೊಳಿಸಿ - ಕಾನೂನುಬದ್ಧಗೊಳಿಸುವ ಹಾಗೂ ಅದರ ವಿರುದ್ಧದ ಬಂಡಾಯವನ್ನು ಅಮಾನ್ಯ ಹಾಗೂ ಕಾನೂನುಬಾಹಿರವೆನ್ನುವ ಪ್ರಭುತ್ವ ಅತಿದೊಡ್ಡ ಹಿಂಸೆ. ಆದರೆ ಲಿಬರಲ್ ಡೆಮಾಕ್ರಾಟ್‌ಗಳಿಗೆ ಪ್ರಭುತ್ವವೆನ್ನುವುದು ಅಮೂರ್ತ ಹಾಗೂ ನಿಷ್ಪಕ್ಷಪಾತಿ. ಹಾಗೂ, ಪ್ರಭುತ್ವ ಎಸಗುವ ಅತ್ಯಾಚಾರಗಳು ಕೇವಲ ನೈತಿಕ ಪ್ರಶ್ನೆಯಾಗಿ ಮಾತ್ರ ಕಾಣುತ್ತವೆ. ಅಮೆರಿಕನ್ ಇಂಡಿಯನ್ ಮೂವ್‌ಮೆಂಟ್‌ನ ನಾಯಕ ಪ್ರೊ॥ ವಾರ್ಡ್ ಚರ್ಚಿಲ್ಲರ ಪ್ರಕಾರ, ಪ್ರಭುತ್ವ-ಹಾಗೂ-ವ್ಯವಸ್ಥೆಯ ಜೊತೆ ದಿನನಿತ್ಯದ ಸಂಘರ್ಷದ ಅಗತ್ಯವಿಲ್ಲದ "ಕಂಫರ್ಟ್ ಜೋನ್"ನಲ್ಲಿರುವವರು ಮಾತ್ರ ಪ್ರಭುತ್ವ ವಿರೋಧಿ ಹೋರಾಟಗಳನ್ನು ಕೇವಲ ನೈತಿಕ ಪ್ರಶ್ನೆಯಾಗಿ ಪರಿಗಣಿಸುತ್ತಾರೆ. ಪ್ರಭುತ್ವ ಕ್ರೂರಿ ಎಂದು ಒಪ್ಪುವವರೂ ಸಹ, ಅದರ ಕ್ರೌರ್ಯ ಅದು ಕಾಪಾಡುವ ವರ್ಗ ಹಿತಾಸಕ್ತಿಯಿಂದ ಬರುತ್ತದೆಂದು ಒಪ್ಪುವುದಿಲ್ಲ. ಇರಾಕಿನ ತೈಲದ ಮೇಲಿನ ಒಡೆತನಕ್ಕಾಗಿ ತೈಲ ಕಂಪನಿಗಳು ಇರಾಕ್ ಮೇಲೆ ಯುದ್ಧ ನಡೆಸುತ್ತಿವೆ. ಅಮೆರಿಕ ಸೇನೆ-ಪ್ರಭುತ್ವ ಅವುಗಳ ಆಣತಿ ಪಾಲಿಸುತ್ತಿವೆ; ಅಮೆರಿಕದ ಪಾರ್ಲಿಮೆಂಟ್ ಮುಖಾಂತರ! ಇದು ವಿದೇಶಿ ಆಕ್ರಮಣದ ಸಂದರ್ಭದಲ್ಲಿ ಮಾತ್ರ ಸಂಭವಿಸುತ್ತದೆ ಎಂದು ಕೆಲವರು ಭಾವಿಸುತ್ತಾರೆ. ಆದರೆ, ಸ್ಪೇನಿನಲ್ಲಿ ನಡೆದ ಅಂತರ್‌ಯುದ್ಧ, ಗ್ವಾಟೆಮಾಲ, ಚಿಲಿ, ಇಂಡೋನೇಷಿಯಾ ಇನ್ನಿತ್ಯಾದಿ ದೇಶಗಳಲ್ಲಿ ನಡೆದ ಅಂತರ್‌ಯುದ್ಧಗಳು ಪ್ರಭುತ್ವ ಆಯಾ ದೇಶಗಳ ಶೋಷಕ ವರ್ಗಗಳ ಹಿತವನ್ನಷ್ಟೇ ಕಾಪಾಡಿವೆ ಎಂದು ಕೂಗಿಹೇಳುತ್ತಿವೆ. ಇವುಗಳಲ್ಲಿ ಬಹುಪಾಲು ದೇಶಗಳು ತಥಾಕಥಿತ ಪಾರ್ಲಿಮೆಂಟರಿ ಪ್ರಜಾಪ್ರಭುತ್ವವುಳ್ಳ ದೇಶಗಳೇ !!

ಇನ್ನು ಈ ದೇಶದಲ್ಲೂ ಪ್ರಭುತ್ವ ನಿಷ್ಪಕ್ಷಪಾತಿಯಾಗಿದೆಯೇ? ಪಾರ್ಲಿಮೆಂಟರಿ ಪ್ರಜಾಪ್ರಭುತ್ವ ಚುನಾವಣೆಗಳ ಮೂಲಕ ಪ್ರಭುತ್ವ ಜನತೆಯ ಹಿತಾಸಕ್ತಿ ಕಾಪಾಡುವಂತೆ ಮಾಡಿದೆಯೆ? ಜಿಕೆಜಿಯವರ ಪ್ರಕಾರ "ಇದುವರೆಗೆ ಐಶ್ವರ್ಯ-ಅಧಿಕಾರ ಎಂದರೆ ಏನೆಂದೇ ತಿಳಿಯದಿದ್ದ ಶೇ. ೯೫ ಜನಕ್ಕೆ ಇದ್ದಕ್ಕಿದ್ದಂತೆ ಅಧಿಕಾರ ಸಿಕ್ಕಾಗ ಸ್ವಲ್ಪ ಸ್ತಿಮಿತ ತಪ್ಪಿ ಅಧಿಕಾರದ ದುರ್ಲಾಭ ಪಡೆದರೆ ಅದಕ್ಕೆ ಶಾಕ್ ಆಗಬೇಕಿಲ್ಲ" ಆದರೆ ವಾಸ್ತವವೇನು? ಶೇ. ೯೫ ಜನಕ್ಕೆ ಅಧಿಕಾರ ದಕ್ಕಿದೆಯೇ? ದುರ್ಲಾಭ ಪಡೆಯುತ್ತಿರುವವರು ಇದುವರೆಗೆ ಐಶ್ವರ್ಯ-ಅಧಿಕಾರ ಎಂದರೇನು ತಿಳಿಯದಿದ್ದವರೇ? - ವಾಸ್ತವವಾಗಿ ಸಾವಿರ ವರ್ಷಗಳಿಂದ ಯಾರು ಅಧಿಕಾರ ಐಶ್ವರ್ಯ ಅನುಭವಿಸುತ್ತಿದ್ದಾರೋ ಅವರ ಕೈಯಲ್ಲೇ ಅಧಿಕಾರ-ಐಶ್ವರ್ಯ ಮುಂದುವರೆದಿದೆ. ಅದರರ್ಥ ಒಂದಿಷ್ಟೂ ಬದಲಾವಣೆಯಾಗಿಲ್ಲವೆಂದಲ್ಲ. ಯಾವ ಸಮಾಜಗಳೂ ನಿಂತ ನೀರಾಗಿರುವುದಿಲ್ಲ. ಹಾಗೆ ನೋಡಿದರೆ ಬ್ರಿಟಿಷರ ಆಗಮನದಿಂದಲೂ ಈ ಸಮಾಜದ ಚಲನೆಯಲ್ಲಿ ಕೆಲವು ಮಾರ್ಪಾಡುಗಳು ಆಗಿವೆ. ಆದ್ದರಿಂದ ಬ್ರಿಟಿಷ್ ಆಳ್ವಿಕೆ ಮುಂದುವರಿಯಲಿ ಎಂದು ಸಮಾಜ ಸುಮ್ಮನುಳಿಯಲಿಲ್ಲ. ಸಮಾಜದ-ಜನತೆಯ ಆಶೋತ್ತರಗಳು ಬೆಳೆದಂತೆ ಬ್ರಿಟಿಷ್ ವಸಾಹತುಶಾಹಿಯನ್ನು ಕಿತ್ತೊಗೆಯುವುದು ಅಗತ್ಯವಾಯಿತು. ಅದು ಕೇವಲ ಗಾಂಧಿಯವರ ಅಹಿಂಸಾತ್ಮಕ ಹೋರಟದಿಂದಾಯಿತು ಎಂದು ಯಾರೂ ಹೇಳಲು ಸಾಧ್ಯವಿಲ್ಲ. ವಸಾಹತುಶಾಹಿ ಪ್ರಭುತ್ವ ಈ ಸ್ವಾತಂತ್ರ್ಯ ಹೋರಾಟವನ್ನು ಬಗ್ಗುಬಡಿಯಲು ಯತ್ನಿಸಿದ್ದರಿಂದಲೇ ಗಾಂಧಿ ಮಾರ್ಗವೂ ಸೇರಿದಂತೆ, ಎಲ್ಲ ಬಗೆಯ ಹೋರಾಟಗಳ ಒಟ್ಟು ಪರಿಣಾಮವಾಗಿ ಅಧಿಕಾರ ಹಸ್ತಾಂತರವಾಯಿತು.

೪೭ರ ನಂತರದ್ದು ಸಹ ಬದಲಾವಣೆಗಿಂತ ಹೆಚ್ಚು ಹಿಂದಿನ ವ್ಯವಸ್ಥೆ-ಸಮಾಜದ-ಪ್ರಭುತ್ವದ ಮುಂದುವರಿಕೆಯೇ ಆಗಿದೆಯೆಂಬುದಕ್ಕೆ ಅಂಕಿ-ಅಂಶಗಳ ಅಗತ್ಯವಿಲ್ಲ. ನಮ್ಮ ಕಂಫರ್ಟ್ ಜೋನ್‌ಗಳಿಂದ ಹೊರಬಂದು ಬೆಂಗಳೂರಿನ ಸ್ಲಂಗಳಲ್ಲಿ, ರಾಯಚೂರು-ಬಿಹಾರಗಳಲ್ಲಿ, ಆದಿವಾಸಿಗಳ ಹಾಡಿಗಳಲ್ಲಿ, ಕಂಬಾಲಪಲ್ಲಿ-ನಾಗಲಾಪಲ್ಲಿಗಳಲ್ಲಿ, ಕಾಶ್ಮೀರ ಹಾಗೂ ಈಶಾನ್ಯ ಭಾರತಗಳಲ್ಲಿ ಅಡ್ಡಾಡಿ ಬರಬೇಕಷ್ಟೆ.

ಸಶಸ್ತ್ರ ಹೋರಾಟದ ಅಗತ್ಯವನ್ನು ಪ್ರತಿಪಾದಿಸುವವರು ಕಾದು ನೋಡುವ ತಾಳ್ಮೆಯಿಲ್ಲದೆ, ಹಿಂಸಾನಂದಿಗಳಾಗಿ ಹಿಂಸಾಚಾರ ಬಯಸುತ್ತಾರೆ, ಎಂದು ಜಿಕೆಜಿ ಭಾವಿಸುತ್ತಾರೆ. ಆದರೆ ಇದು ಕಾಲದ ವಿಷಯವಲ್ಲ. ೪೭ರ ನಂತರದ ಪ್ರಭುತ್ವ ಮತ್ತೆ ಈ ದೇಶದ ಭೂಮಾಲಿಕರ, ಶ್ರೀಮಂತರ, ಉದ್ಯಮಪತಿಗಳ ಹಾಗೂ ಸಾಮ್ರಾಜ್ಯಶಾಹಿಗಳ ದಲ್ಲಾಳಿಯಷ್ಟೇ ಆಗಿದೆ. ಈ ದೇಶದ ಜನತೆಯ ಹಿತಾಸಕ್ತಿ ಉಳಿಸಬೇಕೆಂದರೆ ಈ ದಲ್ಲಾಳಿ ಪ್ರಭುತ್ವದಡಿಯಲ್ಲಿರುವ ಕಾನೂನು-ಸೇನೆಗಳಿಂದ ಸಾಧ್ಯವಿಲ್ಲ. ಈ ವ್ಯವಸ್ಥೆ ಆಮೂಲಾಗ್ರವಾಗಿ ಬದಲಾಗದೆ, ವ್ಯವಸ್ಥೆಯ ಆರ್ಥಿಕ-ಸಾಮಾಜಿಕ ಸಂರಚನೆಗಳು ಬದಲಾಗದೆ, ಸಾಮ್ರಾಜ್ಯಶಾಹಿಗಳ ಪ್ರತ್ಯಕ್ಷ-ಪರೋಕ್ಷ-ನಿಯಂತ್ರಣಗಳಿಂದ ವಿಮೋಚನೆಗೊಳ್ಳದೆ, ಬದಲಾವಣೆ ಸಾಧ್ಯವಿಲ್ಲ. ಆ ಬದಲಾವಣೆ ಬರದಂತೆ ಪ್ರಭುತ್ವ ತನ್ನ ಸೇನೆ-ಪೊಲೀಸುಗಳ ಮೂಲಕ ತಡೆಯುತ್ತದೆ. ಈ ಪ್ರಭುತ್ವ ದಮನದ ವಿರುದ್ಧ ಜನತೆಯ ವಿಮೋಚನೆಗೆ ಎಲ್ಲಾ ಬಗೆಯ ಹೋರಾಟಗಳೊಂದಿಗೆ ಪ್ರಜಾಸೇನೆ ಹಾಗೂ ಸಶಸ್ತ್ರ ಹೋರಾಟಗಳೂ ಅತ್ಯಗತ್ಯ ಎಂದು ಪ್ರತಿಪಾದಿಸಲಾಗುತ್ತದೆ.

ಸಶಸ್ತ್ರ ಹೋರಾಟವೆಂದರೆ ರಕ್ತಪಾತ, ಕೋಮುವಾದದಷ್ಟೇ ಅಪಾಯಕಾರಿ ಎನ್ನುವ ನಿಲುವು ಹೋರಾಟಗಳನ್ನು ಮತ್ತಷ್ಟು ಬಲಹೀನಗೊಳಿಸುತ್ತದೆ. "ಪ್ರಭುತ್ವಕ್ಕೆ ಸರಕಾರವೇ ಶಸ್ತ್ರಾಸ್ತ್ರ ಸರಬರಾಜು ಮಾಡುತ್ತದೆ" ಅದು ಕಾನೂನು ಬದ್ಧ. ಆದರೆ ಜನ ಶಾಸ್ತ್ರ ಇಟ್ಟುಕೊಳ್ಳುವುದು ಕಾನೂನುಬಾಹಿರ. ಆಗ ಜನರ ಅನುಕಂಪ ಸರಕಾರದ ಕಡೆ ಇರುತ್ತದೆಂದು ಹೇಳುತ್ತಾರೆ. ಪ್ರಭುತ್ವವೇ ಶೋಷಿತ ಜನತೆಯ ವಿರುದ್ಧವಾಗಿ ನಿಂತಾಗ, ಪ್ರಭುತ್ವಕ್ಕೆ ಸರಬರಾಜಾಗುವ ಶಸ್ತ್ರಾಸ್ತ್ರ, ಶೋಷಕ ವರ್ಗಗಳನ್ನು ನಿಶ್ಶಸ್ತ್ರೀಕರಿಸಿದಂತಾಗುವುದಿಲ್ಲವೇ? ಜಿಕೆಜಿಯವರ ವಾದ ಶೋಷಕರನ್ನು ಸಶಸ್ತ್ರೀಕರಿಸಿ ಶೋಷಿತರನ್ನು ನಿಶ್ಶಸ್ತ್ರೀಕರಿಸಿ-ಅಂತಿಮವಾಗಿ ಶೋಷಣೆಯನ್ನು ನಿರಾತಂಕಗೊಳಿಸುವ ವಾದವಾಗುವುದಿಲ್ಲವೇ? ಹೀಗಾಗಿ ನಿಜವಾದ ಜನತೆಯ ಪ್ರಭುತ್ವ ಬರಬೇಕಾದಲ್ಲಿ – ಇನ್ನೊಂದು ಸ್ವಾತಂತ್ರ್ಯ ಹೋರಾಟದ ಅಗತ್ಯವಿದೆ. ಪ್ರಭುತ್ವದೊಂದಿಗಿನ ಮುಖಾಮುಖಿ ಅನಿವಾರ್ಯವಾಗುತ್ತದೆ. ಸಶಸ್ತ್ರ ಹೋರಾಟವೂ ಒಂದು ಮಾರ್ಗವಾಗಿ ಅತ್ಯಗತ್ಯವಾಗುತ್ತದೆ.

ಅಂತಿಮವಾಗಿ, ಸಶಸ್ತ್ರ ಹೋರಾಟಗಳಿಗೆ ಗುಪ್ತ ಬೆಂಬಲ ನೀಡುವವರ ಬಗ್ಗೆ ಜಿಕೆಜಿ ನೀಡುವ ಎಚ್ಚರದ ಬಗ್ಗೆ: ಸಶಸ್ತ್ರ ಹೋರಾಟ, ಪ್ರಜಾತಾಂತ್ರಿಕ ಹೋರಾಟ ಎರಡೂ ಲೋಕಗಳ ಅತ್ಯುತ್ತಮ ಲಾಭ ಪಡೆಯುವುದು ನಾಗರಿಕ ಋಜುತ್ವವೆಂದು ಜಿಕೆಜಿ ಹೇಳುತ್ತಾರೆ. ನಿಜವಾದ ಜನತೆಯ ಪ್ರಜಾತಂತ್ರ ಸ್ಥಾಪಿಸಲು ಎರಡೂ ಹೋರಾಟಗಳು ಅಗತ್ಯ.

**ಶಿವಸುಂದರ್**

ನಂ. ೭೬, 'ಸೃಜನ', ೩ನೇ ಘಟ್ಟ, ವಿನಾಯಕ ಲೇಔಟ್, ವಿಜಯನಗರ, ಬೆಂಗಳೂರು - ೪೦

# ಭಾರತದ ವಿದೇಶಾಂಗ ನೀತಿಯ ಮುಂದಿರುವ ಸವಾಲುಗಳು




ಚುನಾವಣೆಗಳಾದ ಮೇಲೆ ಅಸ್ತಿತ್ವಕ್ಕೆ ಬಂದಿರುವ ಕಾಂಗ್ರೆಸ್ ನೇತೃತ್ವದ ಸಂಯುಕ್ತ ಪ್ರಗತಿಪರ ಒಕ್ಕೂಟ (ಯುಪಿಎ) ಅಂಗೀಕರಿಸಿರುವ ಸಾಮಾನ್ಯ ಕನಿಷ್ಠ ಕಾರ್ಯಕ್ರಮ ದೇಶದ ಎಲ್ಲ ಜನತೆಯ ಗಮನ ಸೆಳೆದಿದೆ. ಅದು ವ್ಯಾಪಕ ಚರ್ಚೆಗೆ ಗ್ರಾಸವಾಗಿದೆ. ಮುಂದಿನ ಐದು ವರ್ಷಗಳಲ್ಲಿ ಸರಕಾರ ಈ ಕನಿಷ್ಠ ಕಾರ್ಯಕ್ರಮಕ್ಕೆ ಬದ್ಧವಾಗಿದ್ದು, ಅದನ್ನು ಅನುಷ್ಠಾನಕ್ಕೆ ತರಬೇಕಾಗಿದೆ. ಸರಕಾರ ಈ ದಿಶೆಯಲ್ಲಿ ಇರಿಸುವ ಪ್ರತಿಯೊಂದು ಹೆಜ್ಜೆಯನ್ನು ಸಾರ್ವಜನಿಕರು ಆಸಕ್ತಿಯಿಂದ ಎಚ್ಚರದಿಂದ ಗಮನಿಸುತ್ತಾರೆ. ಕಳೆದ ಆರು ವರ್ಷಗಳಲ್ಲಿ ಎನ್‌ಡಿಎ ನೇತೃತ್ವದ ಸರಕಾರ ಆರ್ಥಿಕ, ಸಾಮಾಜಿಕ, ಶಿಕ್ಷಣ ಹಾಗೂ ಅಂತಾರಾಷ್ಟ್ರೀಯ ಕ್ಷೇತ್ರಗಳಲ್ಲಿ ಅನುಸರಿಸಿದ ನೀತಿಗಳ ಹಾನಿಕರ ಪರಿಣಾಮಗಳು ನಮ್ಮ ಕಣ್ಣಮುಂದೆ ಇವೆ. ಆ ನೀತಿಗಳನ್ನು ಜನತೆ ತಿರಸ್ಕರಿಸಿದ್ದಾರೆ ಎನ್ನುವುದಕ್ಕೆ ಚುನಾವಣಾ ಫಲಿತಾಂಶಗಳೇ ಸಾಕ್ಷಿ. ಹಿಂದಿನ ಸರಕಾರದ ಅಕ್ರಮಗಳನ್ನು ಸರಿಪಡಿಸಿ ಸರಕಾರ ಹೊಸಹಾದಿಯಲ್ಲಿ ಕ್ರಮಿಸಬೇಕಾಗಿದೆ.

ವಿದೇಶಾಂಗ ನೀತಿಯ ಮಟ್ಟಿಗೆ ಅಂತಾರಾಷ್ಟ್ರೀಯ ವಲಯದಲ್ಲಿ ಕಳೆದುಕೊಂಡಿರುವ ಭಾರತದ ಗೌರವ ಘನತೆಗಳನ್ನು ಪುನರುತ್ಥಾಪನೆ ಮಾಡುವುದು ಹೊಸ ಸರಕಾರದ ಮುಂದಿರುವ ದೊಡ್ಡ ಸವಾಲು. ಕನಿಷ್ಠ ಕಾರ್ಯಕ್ರಮದಲ್ಲಿ ಹಿಂದಿನ ಪರಂಪರೆಗಳನ್ನು ಗಮನದಲ್ಲಿರಿಸಿಕೊಂಡು ಯುಪಿಎ ಸರಕಾರ ಸ್ವತಂತ್ರ ವಿದೇಶೀ ನೀತಿಯನ್ನು ಅನುಸರಿಸುತ್ತದೆ; ಜಾಗತಿಕ ಸಂಬಂಧಗಳಲ್ಲಿ ಬಹುಮುಖಿ ಸಂಬಂಧವನ್ನು ಬೆಳೆಸುವುದೂ ಏಕಮುಖೀ ಸಂಬಂಧವನ್ನು ವಿರೋಧಿಸುವುದೂ ಮುಖ್ಯವಾದ ಅಂಶಗಳಾಗಿರುತ್ತವೆ ಎಂದು ಹೇಳಲಾಗಿದೆ. ಇದು ಅತ್ಯಂತ ಜರೂರಾಗಿ ಆಗಬೇಕಾದ್ದು ಏಕೆಂದರೆ, ಎನ್‌ಡಿಎ ಸರಕಾರ ಭಾರತದ ವಿದೇಶೀ ನೀತಿಯನ್ನು ಅಮೆರಿಕದ ಪರ ವಾಲಿಸಿ, ಅದರ ಆಜ್ಞಾಪನೆಗಳನ್ನು ಶಿರಸಾವಹಿಸಿ ಪಾಲಿಸುವ ಮಟ್ಟಕ್ಕೆ ಇಳಿಸಿತ್ತು. ಸ್ವಾತಂತ್ರ್ಯಾನಂತರದ ವರ್ಷಗಳಲ್ಲಿ ಭಾರತ ಪಾಲಿಸಿಕೊಂಡು ಬಂದಿದ್ದ ಅಲಿಪ್ತ ನೀತಿಯನ್ನು ಸಂಪೂರ್ಣವಾಗಿ ಮೂಲೆಗೊತ್ತಿ ಅದು ಭಾರತದ ಸಾರ್ವಭೌಮತ್ವಕ್ಕೆ ಕಳಂಕ ತರುವ ಮಾರ್ಗ ಹಿಡಿಯಿತು. ಪಶ್ಚಿಮ ಏಶಿಯಾದ ದೇಶಗಳೊಂದಿಗೆ ದಶಕಗಳ ಕಾಲದಿಂದ ಬೆಳೆಸಿಕೊಂಡು ಬಂದಿದ್ದ ಮೈತ್ರಿ ಸಂಬಂಧಗಳನ್ನು ಶಿಥಿಲಗೊಳಿಸಿ ಇಸ್ರೇಲಿನೊಂದಿಗೆ ವಾಜಪೇಯಿ – ಅದ್ವಾನಿ ಕಂಪೆನಿ ಬೆಳೆಸಿದ ಆತ್ಮೀಯತೆ ಅದಕ್ಕೆ ಒಂದು ಉದಾಹರಣೆ. ಭಯೋತ್ಪಾದನೆ ವಿರುದ್ಧ ಹೋರಾಟದ ನೆಪದಲ್ಲಿ ಇಸ್ರೇಲಿನ ಕುಖ್ಯಾತ ಗೂಢಚರ್ಯೆ ಸಂಸ್ಥೆ ಮೊಸ್ಸಾದ್‌ನೊಂದಿಗೆ ನಂಟು ಬೆಳೆಸಿದ್ದು ಭಾರತದಂಥ ಮಹಾನ್ ದೇಶಕ್ಕೆ ಗೌರವ ತರುವಂಥದ್ದಾಗಿರಲಿಲ್ಲ. ಈಗ ಅದನ್ನು ಸರಿಪಡಿಸಿ ಪಶ್ಚಿಮ ಏಶಿಯದ ದೇಶಗಳೊಂದಿಗೆ ಸಂಬಂಧಗಳನ್ನು ಪುನರ್ ದೃಢಪಡಿಸಿ, ಪ್ಯಾಲಸ್ತೈನ್ ಜನತೆಯ ಸ್ವತಂತ್ರರಾಜ್ಯ ಸ್ಥಾಪನೆಯ ಹೋರಾಟಕ್ಕೆ ಎಂದಿನಂತೆ ಪೂರ್ಣ ಬೆಂಬಲ ನೀಡುವುದು ಜರೂರಾಗಿ ಆಗಬೇಕಾದ ಕಾರ್ಯ. ಇರಾಕಿನ ಮೇಲೆ ಅಮೆರಿಕದ ದುರಾಕ್ರಮಣ, ಅದು ಅಲ್ಲಿ ನಡೆಸಿರುವ ದೌರ್ಜನ್ಯಗಳ ವಿಚಾರದಲ್ಲಿ ಹೊಸ ಸರಕಾರ ಸ್ಪಷ್ಟವಾದ ನಿಲುವು ತಳೆದು, ಆಕ್ರಮಣಕಾರಿ ಸೇನೆಗಳು ಅಲ್ಲಿಂದ ಕಾಲ್ತೆಗೆಯುವಂತೆ ಎಲ್ಲ ರೀತಿಯಲ್ಲೂ ಒತ್ತಾಯ ತರಬೇಕಾಗಿದೆ. ವಿಶ್ವಸಂಸ್ಥೆಯನ್ನು ತನ್ನ ತೆಕ್ಕೆಯಲ್ಲಿರಿಸಿ ಕೊಂಡಿರುವ ಅಮೆರಿಕ ಇಕ್ಕಟ್ಟಿನಿಂದ ಪಾರಾಗಲು ತನಗೆ ಅನುಕೂಲವಾಗುವಂಥ ನಿರ್ಣಯವನ್ನು ಭದ್ರತಾ ಮಂಡಲಿ ಅಂಗೀಕರಿಸುವಂತೆ ಮಾಡುವುದರಲ್ಲಿ ಸಫಲಗೊಂಡಿದೆ. ಇರಾಕಿನಲ್ಲಿ ಕೈಗೊಂಬೆ ಸರಕಾರ ಸ್ಥಾಪಿಸಿ, ಅದರ ಹೆಸರಿನಲ್ಲಿ, ವಿಶ್ವಸಂಸ್ಥೆಯ ಹೆಸರಿನಲ್ಲಿ ಅದು ಭಾರತವನ್ನು ಒಳಗೊಂಡಂತೆ ಇತರ ದೇಶಗಳ ಸೈನ್ಯಗಳನ್ನು ಕರೆತರುವ ಹಂಚಿಕೆ ಹೂಡಿದೆ. ಇದಕ್ಕಾಗಿ ಅದು ನಾನಾ ಬಗೆಯ ಒತ್ತಡಗಳನ್ನೂ ತಂದು ಆಮಿಷಗಳನ್ನು ಒಡ್ಡುವುದರಲ್ಲಿ ಸಂದೇಹವಿಲ್ಲ. ಈ ವಿಷಯದಲ್ಲಿ ಅಮೆರಿಕಾಗೆ ಭೇಟಿ ನೀಡಿದ್ದ ವಿದೇಶಾಂಗ ಸಚಿವ ನಟವರ್ ಸಿಂಗ್ ಅಮೆರಿಕದ ವಿದೇಶಾಂಗ ಕಾರ್ಯದರ್ಶಿ ಕಾಲಿನ್ ಪೊವೆಲ್‌ರ ಸಮ್ಮುಖದಲ್ಲಿ ನೀಡಿದ ಹೇಳಿಕೆ, ಅನಂತರ ನೀಡಿದ ಸ್ಪಷ್ಟೀಕರಣ ಸಾಕಷ್ಟು ಗೊಂದಲ ಉಂಟುಮಾಡಿತು. ಇಂಥ ಅಪಾಂತರಗಳು ಗೌರವ ತರುವಂಥವಲ್ಲ, ಹಾಗಾಗದಂತೆ ನೋಡಿಕೊಳ್ಳಬೇಕು.

ಅಮೆರಿಕದೊಂದಿಗೆ ಸಂಬಂಧಗಳಲ್ಲಿ ಭಾರತ ತನ್ನ ಸ್ವತಂತ್ರ ನೀತಿಯನ್ನು ದೃಢಪಡಿಸಬೇಕಾಗಿದೆ. ಪ್ರಪಂಚದ ಅತ್ಯಂತ ಶ್ರೀಮಂತ ಹಾಗೂ ಪ್ರಬಲರಾಷ್ಟ್ರ ಎನಿಸಿಕೊಂಡಿರುವ ಅಮೆರಿಕ ಇತರ ದೇಶಗಳೊಂದಿಗಿನ ಸಂಬಂಧಗಳಲ್ಲಿ ದೊಡ್ಡಣ್ಣನಂತೆ ವರ್ತಿಸುವುದರಲ್ಲಿ, ತನ್ನ ಹಿತಾಸಕ್ತಿಗಳಿಗೆ ಅನುಕೂಲವಾಗಿರುವಂತೆ ಅವುಗಳನ್ನು ಒಲಿಸಿ ಕೊಳ್ಳುವುದರಲ್ಲಿ ಚೆನ್ನಾಗಿ ಪಳಗಿದೆ. ಇರಾಕಿನ ದುರಾಕ್ರಮಣವನ್ನು ಸಮರ್ಥಿಸಿಕೊಂಡು, ತನ್ನ ಹಂಚಿಕೆಗಳಿಗೆ ಬೆಂಬಲ ಪಡೆದುಕೊಳ್ಳಲು ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ಸದಸ್ಯ ರಾಷ್ಟ್ರಗಳನ್ನು ಒಲಿಸಿಕೊಂಡಿರುವುದು ಇತ್ತೀಚಿನ ನಿದರ್ಶನ. ಆದ್ದರಿಂದ ಅಮೆರಿಕ ತರುವ ಒತ್ತಾಯಗಳನ್ನು, ಒಡ್ಡುವ ಆಮಿಷಗಳನ್ನು ವಿರೋಧಿಸುವುದು, ಭಾರತದ ಸ್ವಾತಂತ್ರ್ಯ ಸಾರ್ವಭೌಮತ್ವಗಳನ್ನು ಎತ್ತಿಹಿಡಿಯುವುದು ಬಹುಮುಖ್ಯ ಕಾರ್ಯ. ಎನ್‌ಡಿಎ ಸರಕಾರದ ಆಡಳಿತೆಯಲ್ಲಿ ಭಾರತದಲ್ಲಿರುವ ಅಮೆರಿಕದ ಏಜಂಟರು ಅಕ್ರಮವಾಗಿ ಭಾರತೀಯರನ್ನು ಇರಾಕಿಗೆ ಕೂಲಿ ಸಿಪಾಯಿಗಳಾಗಿ ಕಳಿಸಿಕೊಟ್ಟ ಪ್ರಕರಣ ತಲೆತಗ್ಗಿಸುವಂಥದ್ದು. ಅಂಥ ಕೂಲಿ ಸಿಪಾಯಿಗಳನ್ನು ಹಿಂದಕ್ಕೆ ತರಲು, ಮುಂದೆ ಅಂಥ ಪ್ರಕರಣಗಳು ನಡೆಯದಂತೆ ತಡೆಯಲು ಕನಿಷ್ಠ ಕಾರ್ಯಕ್ರಮ ನೀಡಿರುವ ಆಶ್ವಾಸನೆ ಸ್ವಾಗತಾರ್ಹ. ಈ ಪ್ರಕರಣದಲ್ಲಿ ಶಾಮೀಲಾಗಿರುವವರ ಮೇಲೆ ಸೂಕ್ತಕ್ರಮ ಕೈಗೊಳ್ಳಬೇಕಾಗಿದೆ. ಅಮೆರಿಕದ ಜೊತೆ ಸಮಾನ ಸಂಬಂಧಗಳನ್ನು ಸ್ಥಾಪಿಸುವುದರ ಜೊತೆಗೆ, ರಷ್ಯಾ ಚೀಣಾಗಳೊಂದಿಗೆ ಪರಂಪರಾಗತ ಮೈತ್ರಿಯನ್ನು ದೃಢಪಡಿಸಿ, ವಿಸ್ತರಿಸಬೇಕಾಗಿದೆ.

ನೆರೆಯ ರಾಷ್ಟ್ರಗಳ ಜೊತೆ ಸಂಬಂಧಗಳನ್ನು, ಮುಖ್ಯವಾಗಿ ಪಾಕಿಸ್ತಾನದೊಂದಿಗೆ ಮೈತ್ರಿ ಸಂಬಂಧಗಳನ್ನು ಸುಧಾರಿಸುವುದಕ್ಕೆ ಆದ್ಯತೆ ನೀಡಬೇಕಾಗಿದೆ. ಪಾಕಿಸ್ತಾನದೊಂದಿಗೆ ಕಾಶ್ಮೀರವನ್ನೂ ಒಳಗೊಂಡಂತೆ ಎಲ್ಲ ವಿವಾದಗಳನ್ನೂ ಬಗೆಹರಿಸಲು, ದ್ವಿಪಕ್ಷೀಯ ಮಾತುಕತೆಗಳನ್ನು ಮುಂದುವರಿಸಲು, ಹಾಗೂ ಅದನ್ನು ಫಲಪ್ರದವಾಗಿಸುವುದಕ್ಕೆ ಕೈಗೊಳ್ಳುವ ಎಲ್ಲ ಕ್ರಮಗಳಿಗೂ ಜನತೆಯ ಬೆಂಬಲವಿರುತ್ತದೆ. ಇದು ಯಶಸ್ವಿಯಾಗ ಬೇಕೆಂಬುದೇ ಎಲ್ಲರ ಅಪೇಕ್ಷೆ. ದಕ್ಷಿಣ ಏಶಿಯಾದ ಪ್ರಾದೇಶಿಕ ಸಹಕಾರ ಸಂಸ್ಥೆಯನ್ನು ಬಲಗೊಳಿಸಿ, ವಿಸ್ತರಿಸುವುದಕ್ಕೆ ಆದ್ಯತೆ ನೀಡಲಿರುವುದು ಸ್ವಾಗತಾರ್ಹ. ಇದರೊಂದಿಗೆ, ಅಲಿಪ್ತ ಚಳುವಳಿಯನ್ನು ಪುನರುಜ್ಜೀವನಗೊಳಿಸಲು ಹೊಸ ಸರಕಾರ ಸೂಕ್ತಕ್ರಮಗಳನ್ನು ಕೈಗೊಳ್ಳುವುದು ಅತ್ಯಗತ್ಯವಾಗಿದೆ. ಇಂದಿನ ಪರಿಸ್ಥಿತಿಯಲ್ಲಿ ಅಲಿಪ್ತ ಚಳುವಳಿಯ ರಾಷ್ಟ್ರಗಳನ್ನು ಮತ್ತೆ ಒಗ್ಗೂಡಿಸಿ ಭಾರತ ಅದರಲ್ಲಿ ಪ್ರಮುಖ ಪಾತ್ರ ವಹಿಸುವುದು ಬಹುಮುಖ್ಯ ಕಾರ್ಯ. ಜಾಗತೀಕರಣದ ಸವಾಲುಗಳನ್ನು ಎದುರಿಸಲು, ಬಡರಾಷ್ಟ್ರಗಳ ನಡುವೆ ಸಹಕಾರವನ್ನು ಬಲಪಡಿಸಲು ಇದು ಜರೂರಾಗಿ ಆಗಬೇಕಾದ್ದು. ವಿಶ್ವವಾಣಿಜ್ಯ ಸಂಸ್ಥೆಯ ಒತ್ತಡಗಳನ್ನು ಎದುರಿಸಿ ಭಾರತದ ಕೃಷಿ ಮತ್ತು ಉದ್ಯಮಗಳನ್ನು ಕಾಪಾಡಲು ಸರಕಾರ ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕಾಗಿದೆ. ಮುಖ್ಯವಾಗಿ ೨೦ ದೇಶಗಳ ತಂಡವನ್ನು ಬಲಗೊಳಿಸಿ, ಅದನ್ನು ಇನ್ನಷ್ಟು ಕ್ರಿಯಾಶೀಲವಾಗಿಸಲು ಯುಪಿಎ ಸರಕಾರ ಸಕ್ರಿಯ ಪಾತ್ರ ವಹಿಸಬೇಕಾಗಿದೆ. ಶ್ರೀಮಂತ ರಾಷ್ಟ್ರಗಳ ಎಂಟರ ಗುಂಪು ಈಗಾಗಲೇ ಒಂದು ತಂಡದ ದೇಶಗಳಲ್ಲಿ ಒಡಕು ತರಲು ಸನ್ನಾಹ ನಡೆಸಿದೆ. ಭಾರತ ಮತ್ತು ಚೀಣಾಗಳನ್ನು ಎಂಟರ ತಂಡಕ್ಕೆ ಸೇರಿಸಿಕೊಳ್ಳಬೇಕೆಂಬ ಸೂಚನೆ ಬರುತ್ತಿರುವುದರಲ್ಲಿ ಇದನ್ನು ಕಾಣಬಹುದಾಗಿದೆ. ಇಂಥ ಪ್ರಯತ್ನಗಳ ಬಗ್ಗೆ ಎಚ್ಚರ ವಹಿಸಬೇಕಾಗಿದೆ.

ಕನಿಷ್ಠ ಕಾರ್ಯಕ್ರಮದಲ್ಲಿ ಸೂಚಿಸಿರುವ ನೀತಿಗಳನ್ನು ಯುಪಿಎ ಸರಕಾರ ನಿಷ್ಠೆಯಿಂದ ಕಾರ್ಯಗತಮಾಡಿದಲ್ಲಿ ಭಾರತ ಅಂತಾರಾಷ್ಟ್ರೀಯ ವಲಯದಲ್ಲಿ ಗೌರವದ ಸ್ಥಾನ ಪಡೆದುಕೊಳ್ಳುವುದರಲ್ಲಿ ಸಂಶಯವಿಲ್ಲ. ಈ ಕಾರ್ಯಕ್ರಮದ ಅನುಷ್ಠಾನಕ್ಕೆ ಹೊರಗಿನಿಂದ ಯುಪಿಎ ಸರಕಾರಕ್ಕೆ ಬೆಂಬಲ ನೀಡಿರುವ ಎಡಪಕ್ಷಗಳ ತಂಡದ ಕಟ್ಟೆಚ್ಚರ ಬಹುಮುಖ್ಯ. ಯಾವುದೇ ಬಗೆಯ ಹೊಯ್ದಾಟಗಳಿಲ್ಲದಂತೆ ನೋಡಿಕೊಳ್ಳಲು ಈ ಪಕ್ಷಗಳೇ ಶ್ರೀರಕ್ಷೆ.

---

ಸೀಯಾರ್ಕೆ, 'ಚೌಬೀನ', ೮೪೯, ಬನಶಂಕರಿ ೩ನೇ ಹಂತ. ಕತ್ರಿಗುಪ್ಪೆ, ಬೆಂಗಳೂರು-೫೬೦ ೦೮೫

ನನ್ನದೊಂದು ಲೋಡು ಕಲ್ಲು
ನನ್ನದೆರಡು ಲೋಡು ಜಲ್ಲಿ
ನನ್ನದು ಮೂರು ಲೋಡು ಹೊಯಿಗೆ

ಹೀಗೆ ಸಭೆಯಲ್ಲಿದ್ದ ಮೂರು ಮಂದಿ ಪ್ರಮುಖರು ತಮ್ಮ ಕೊಡುಗೆಗಳನ್ನು ಹೇಳಿದಾಗ ಮಸೀದಿ ಕಾರ್ಯದರ್ಶಿ ಸಲಾಂ ಅದನ್ನು ಪುಸ್ತಕದಲ್ಲಿ ದಾಖಲಿಸಿಕೊಳ್ಳುತ್ತಾ ಇತರರ ಮುಖ ನೋಡಿದರು. ನೀವು ಕಾರ್ಯದರ್ಶಿಯಲ್ವಾ, ನಿಮ್ಮ ಕೊಡುಗೆಯನ್ನೂ ಬರೆಯಿರಿ ಎಂದು ಅಲ್ಲಿದ್ದ ಇತರರು ಹೇಳಿದಾಗ ಉಪಾಯವಿಲ್ಲದೆ ಕಾರ್ಯದರ್ಶಿ ಸಾವಿರದೊಂದು ಅಂತ ಇತರರಿಗೆ ಕಾಣುವ ಹಾಗೆ ಬರೆದರಲ್ಲದೆ ಅದನ್ನು ಹೇಳಿಯೂ ಬಿಟ್ಟರು. ಹಾಗೇ ಅಲ್ಲಿದ್ದ ಮತ್ತಿತರರು ಒಬ್ಬರ ಮುಖವನ್ನು ಮತ್ತೊಬ್ಬರು ನೋಡುತ್ತಾ ಕಲ್ಲು, ಜಲ್ಲಿ, ಹಣ ಇತ್ಯಾದಿಯನ್ನು ಬರೆಯಿಸಿಕೊಂಡರು. ಕೆಲವರು ಹಿಂಜರಿದಾಗ, ಮತ್ತೆ ಕೆಲವರು ಹುರಿದುಂಬಿಸಿದರು.

ಈಗ ನನ್ನ ಕೈಯಲ್ಲಿಲ್ಲ, ಹಾಗಾಗಿ ಬರೆಸುವುದಿಲ್ಲ ಅಂತ ಒಬ್ಬ ಹೇಳಿದರೆ, ಛೇ, ಹಾಗೆ ಹೇಳಿದರೆ, ಆಗುತ್ತದಾ ? ಎಂದು ಮತ್ತೊಬ್ಬರು ಹೇಳಿ ಬರೆಸುವಂತೆ ಒತ್ತಾಯಿಸಿದರು. ಹೀಗೆ ಅಲ್ಲಿದ್ದ ಅನೇಕ ಮಂದಿ ತಮ್ಮ ಕೈಲಾದಷ್ಟು ಹಣವನ್ನೋ, ಸಾಮಗ್ರಿಗಳನ್ನೋ ಬರೆಸಿಕೊಳ್ಳುತ್ತಿದ್ದರು. ಬಹುತೇಕ ಮಂದಿಯಲ್ಲಿ ಒಂದು ರೀತಿಯ ಉತ್ಸಾಹ, ಉಮೇದು ಇತ್ತು. ತನ್ನ ಮದುವೆಯ ಸಂದರ್ಭ ಒಂದೆರೆಡು ಬಾರಿ ಬಂದು, ನಂತರ ಮಸೀದಿಯ ಮೆಟ್ಟಲು ಎಷ್ಟು ಉಂಟು ಅಂತಲೂ ತಿಳಿದುಕೊಳ್ಳದ ಮಜೀದ್ ಕೂಡಾ ಮಸೀದಿ ನವೀಕರಣದ ಕುರಿತು ಆಸಕ್ತಿ ವಹಿಸಿದ್ದು ಅನೇಕ ಮಂದಿಗೆ ಆಶ್ಚರ್ಯವನ್ನುಂಟುಮಾಡಿತ್ತು.

''ನಿಮ್ಮದು ಎಷ್ಟು ಅಂತ ಹೇಳಲೇ ಇಲ್ಲ'' ಎಂದು ಬಶೀರ್‌ರನ್ನು ಉದ್ದೇಶಿಸಿ ಮಜೀದ್ ಹೇಳಿದಾಗ, ''ಅಲ್ಲ ನಿಮಗೆಲ್ಲ ಏನಾಗಿದೆ ? ನಮಾಜ್ ಮಾಡಲು ಈ ಮಸೀದಿ ಸಾಕಾಗಿತ್ತು. ಮತ್ತೆ ಇದನ್ಯಾಕೆ ನವೀಕರಣ ಮಾಡುವುದು ? ಮಸೀದಿ ನವೀಕರಣಕ್ಕೆ ಅಷ್ಟೊಂದು ಲಕ್ಷ ರೂಪಾಯಿ ಖರ್ಚು ಮಾಡುವ ಬದಲು ಅದನ್ನು ನಮ್ಮೂರಿನ ಬಡ ಮಕ್ಕಳ ಶಿಕ್ಷಣ, ಆರೋಗ್ಯ, ವಸತಿ ಇತ್ಯಾದಿಯ ಬಗ್ಗೆ ಗಮನ ಹರಿಸಿದರೆ ಎಷ್ಟು ಒಳ್ಳೆಯದಿತ್ತು'' – ಎಂದು ಹೇಳಿದಾಗ ಅನೇಕ ಮಂದಿಗೆ ಕೋಪ ಬಂದುದು ಸುಳ್ಳಲ್ಲ. ಆದರೆ ದೊಡ್ಡ ಮನೆತನದ ಮತ್ತು ಸಾಕಷ್ಟು ವಿದ್ಯಾಭ್ಯಾಸವುಳ್ಳ ಬಶೀರ್‌ಗೆ ಊರಲ್ಲಿ ಒಂದಷ್ಟು ಗೌರವ ಇದ್ದುದರಿಂದ ಒಂದು ಕ್ಷಣ ಆ ಮಾತಿಗೆ ಉತ್ತರಿಸಲಾಗದೆ ಸುಮ್ಮನಾಗಿದ್ದರು.

''ಬಶೀರಾಕ, ನೀವು ಈ ರೀತಿ ಹೇಳುವುದಾ ? ನಿಮ್ಮ ಮನೆ ಹಳತಾದರೆ ಅದನ್ನು ಸುಮ್ಮನೆ ಬಿಡ್ತೀರಾ ? ನೋಡಿ, ಈ ಮಸೀದಿ ರಸ್ತೆಯ ಪಕ್ಕದಲ್ಲೇ ಇದೆ. ಈ ರಸ್ತೆಯಾಗಿ ಎಷ್ಟೋ ಮಂದಿ ಹಾದು ಹೋಗುತ್ತಾರೆ. ಅವರ ಕಣ್ಣಿಗೆ ಇಂಥ ಒಂದು ಹಳತು ಮಸೀದಿ ಕಂಡರೆ ಅವರು ನಮ್ಮೂರಿನವರನ್ನು ಕಂಜೂಸ್ ಜನ ಅಂತ ಭಾವಿಸಲಿಕ್ಕಿಲ್ಲವಾ ? ಈ ಮಸೀದಿ ಚಂದ ಮಾಡುವುದು ನಮ್ಮ ಪ್ರತಿಷ್ಠೆಯ ಪ್ರಶ್ನೆ'' ಎಂದು ಮಜೀದ್ ಮುಖಕ್ಕೆ ಹೊಡೆದ ಹಾಗೇ ಹೇಳಿದಾಗ ಬಹುತೇಕ ಮಂದಿ ಹೌಹಾರಿದ್ದರು. ಕೆಲವರು ಮಜೀದ್... ಎಂದು ಕಣ್ಣಟ್ಟಿಗೆ ದೀರ್ಘ ಸ್ವರದಲ್ಲಿ ಕೂಗಿ ಹಾಗೆಲ್ಲ ಅವರಲ್ಲಿ ಮಾತನಾಡುವುದಾ ಎಂದು ಕೇಳಿದ ಹಾಗೆ ನಟಿಸಿ, ಒಂದರ್ಥದಲ್ಲಿ ತರಾಟೆಗೆ



ತೆಗೆದುಕೊಂಡಂತೆ ಪರೋಕ್ಷವಾಗಿ ಸೂಚಿಸಿಬಿಟ್ಟರು.

''ಹಾಗಲ್ಲ ಮಜೀದ, ಮೂವತ್ತು ವರ್ಷದ ಹಿಂದೆ ಈ ಮಸೀದಿ ಕಟ್ಟುವಾಗ, ಅದಾದ ಮೇಲೆ ಏನೆಲ್ಲ ಆಯಿತು ಅಂತ ನನಗೆ ಗೊತ್ತು. ಮಸೀದಿ ಕಟ್ಟುವಾಗ ಅನ್ಯೋನ್ಯತೆಯಿಂದ ಇದ್ದ ಜನ ನಂತರ ಮಸೀದಿಯ ಅಧಿಕಾರಕ್ಕಾಗಿ ಕಚ್ಚಾಡಿದರು, ಹೊಡೆದಾಡಿಕೊಂಡರು. ಆಸ್ಪತ್ರೆಗೂ ಸೇರಿದರು. ಪೊಲೀಸ್ ಠಾಣೆಯ ಮೆಟ್ಟಲೂ ಹತ್ತಿದರು. ಜಮಾತ್‌ನಲ್ಲಿ ಎರಡು ಪಾರ್ಟಿ ಆಯಿತು. ಕೆಲವು ಮನೆಯ ಅಣ್ಣ ತಮ್ಮಂದಿರು, ತಂದೆ ಮಕ್ಕಳೂ ಜಗಳ ಮಾಡಿಕೊಂಡರು. ಈಗ ಈ ಮಸೀದಿಯನ್ನು ಚಂದ ಮಾಡಿದ ಮೇಲೆ ಅಧಿಕಾರದ ಮೇಲೆ ಆಸೆ ಇರುವವರು ಮತ್ತೆ ಏನಾದರೊಂದು ನೆಪ ಹುಡುಕಿ ಜಗಳ ಮಾಡಿಯೇ ಮಾಡುತ್ತಾರೆ'' ಎಂದು ಹೇಳಿದರಲ್ಲದೆ, ''ಸದ್ಯಕ್ಕೆ ನಮಾಜ್ ಮಾಡಲು ಈ ಮಸೀದಿ ಸಾಕು'' ಎಂದರು.

ಆ ಮಾತಿಗೆ ಒಬ್ಬ ಹೌದೌದು ಎನ್ನುತ್ತಾ, ''ಬಶೀರಾಕ ಹೇಳಿದ ಹಾಗೆ ಮಸೀದಿ ಚಂದ ಮಾಡುವ ಬದಲು ಊರಿನ ಬಡ ಮಕ್ಕಳ ಶಿಕ್ಷಣ, ಆರೋಗ್ಯದ ಬಗ್ಗೆ ಗಮನ ಕೊಡೋಣ'' ಎಂದ. ''ಅದನ್ನು ನೀನು ಮಾಡು, ಬೇಡ ಅಂದವರಾರು ?'' ಎಂದು ಮಜೀದ ತಿರುಗೇಟು ನೀಡಿ ಗೊಳ್ಳನೆ ನಕ್ಕ.

ಆವಾಗ ನಡುವೆ ಬಾಯಿ ಹಾಕಿದ ಮತ್ತೊಬ್ಬ, ''ನೀನು ಹಾಗೆ ನಕ್ಕು ತಮಾಷೆ ಮಾಡಬೇಡ, ಬಶೀರಾಕ ಹೇಳಿದುದರಲ್ಲಿ ಯಾವುದೇ ತಪ್ಪಿಲ್ಲ. ಒಂದು ಮಸೀದಿ ಕಟ್ಟುವುದಕ್ಕಿಂತ ಒಂದು ಹೆಣ್ಣಿನ ಮದುವೆ ಮಾಡಿಕೊಟ್ಟರೆ ತುಂಬ ಪುಣ್ಯ ಉಂಟು'' ಎಂದು ಹೇಳಿದ.

''ಇಲ್ಲ, ಇಲ್ಲ, ಅದು ನಿನ್ನ ತಪ್ಪು ಕಲ್ಪನೆ. ಮಸೀದಿ ಕಟ್ಟುವುದಕ್ಕಿಂತ ಒಂದು ಹೆಣ್ಣಿನ ಮದುವೆ ಮಾಡಿಕೊಟ್ಟರೆ ಪುಣ್ಯ ಉಂಟು ಅಂತ ವರದಕ್ಷಿಣೆಗಾಗಿ ಆಸೆ ಇಟ್ಟುಕೊಂಡವರು ಹೇಳಿ ನಂಬಿಸಿಕೊಂಡು ಬಂದ ಮಾತು. ಅದರ ಮರ್ಮ ಅರಿಯದ ಅನೇಕ ಮಂದಿ ಆ ಮಾತನ್ನೇ ನಂಬಿದ್ದಾರೆ'' ಎಂದು ಬಶೀರಾಕ ಹೇಳಿದಾಗ ಕೆಲವು ಮಂದಿಗೆ ಒಗಟಾಗಿ ಕಂಡರು. ಅಂತೂ ಮಸೀದಿಯ ಅಧ್ಯಕ್ಷರು ಬಶೀರಾಕರನ್ನು ಸಮಾಧಾನಪಡಿಸುತ್ತಾ, ನೀವು ಈ ಮಸೀದಿಯ ಪುನರ್ನಿರ್ಮಾಣದ ಬಗ್ಗೆ ಹಿಂಜರಿಯಬಾರದು ಎಂದು ಹೇಳುತ್ತಾ ಅವರಿಂದ ನೂರು ಗೋಣಿ ಸಿಮೆಂಟ್ ಬರೆಯಿಸಿಕೊಂಡರು. ಹೀಗೆ ಅರ್ಧ ಗಂಟೆಯೊಳಗೆ ಮಸೀದಿ ಪುನರ್ನಿರ್ಮಾಣದ ಕುರಿತು ಒಂದು ರೂಪುರೇಷೆ ಹಾಕಲಾಯಿತಲ್ಲದೆ, ಮುಂದಿನ ವಾರದಿಂದ ಹೊರಗಡೆ ದೇಣಿಗೆ ಸಂಗ್ರಹಿಸಲು ಹೋಗುವುದೆಂದು ನಿರ್ಧರಿಸಿ ಎಲ್ಲರೂ ತಮ್ಮ ಮನೆಯ ಹಾದಿ ಹಿಡಿದರು.

ಅಂದು ರಾತ್ರಿ ಸುಮಾರು ೧೧ ಗಂಟೆಯಾಗಿರಬಹುದು. ಆಗತಾನೇ ನಿದ್ದೆಗೆ ಕಣ್ಣೊಡ್ಡಿದ್ದ ಮಸೀದಿಯ ಉಸ್ತಾದರಿಗೆ ಯಾರೋ ಬಾಗಿಲು ಬಡಿದ ಶಬ್ದವಾಯಿತು. ಒಮ್ಮೆಲೆ ಎಚ್ಚರಗೊಂಡ ಅವರು ಒಂದು ಕ್ಷಣ ಸಾವರಿಸಿ, ಯಾರು ಎಂದು ಕೇಳುತ್ತಾ ಬಾಗಿಲು ತೆಗೆದರು. ಆವಾಗ ಎದುರಾದದ್ದು ಒಬ್ಬ ಭಿಕ್ಷುಕ. ಮಸೀದಿಯ ಉಸ್ತಾದರ ಪಿತ್ತ ನೆತ್ತಿಗೇರಿತ್ತು. ಆದರೂ ತಮ್ಮ ಹುದ್ದೆಯ ಜವಾಬ್ದಾರಿಯನ್ನು ಅರಿತು ಏನು ಎಂದು ಕೇಳಿದರು.

ಆತ ಸಲಾಂ ಹೇಳುತ್ತಾ, ''ನಾನು ರಹೀಮ್ ಅಂತ. ಕೇರಳದಿಂದ ಬಂದಿದ್ದೇನೆ. ಮೊದಲು ನಾನು ರಾಮ್ ಆಗಿದ್ದೆ. ರಹೀಮ್ ಆಗಿ ಮೂರು ವರ್ಷವಾಯಿತು. ನನಗೆ ಕೆಲವು ದಿನ ಇಲ್ಲಿ ಆಶ್ರಯ ಕೊಡಬಹುದಾ ?'' ಎಂದು ಆತ ಕೇಳಿದ.

''ಓಹೋ ನೀನು, ಪುದಿಯೆ ಇಸ್ಲಾಮ್ (ನವ ಮುಸ್ಲಿಂ). ಬಾ... ಬಾ... ಒಳಗೆ ಬಾ. ನಿನ್ನಂಥವರಿಗೆ ಆಶ್ರಯ ಕೊಡದಿದ್ದರೆ ಮತ್ತಿನ್ಯಾರಿಗೆ ಕೊಡುವುದು'' ಎಂದು ಉಸ್ತಾದರು ಹೇಳಿದಾಗ ಆತ ಮುಖ ಅರಳಿಸಿ ಒಳಗೆ ಕಾಲಿಟ್ಟ. ಅದೇ ಮಸೀದಿಯ ಅಂಗಳದಲ್ಲಿ ನಿದ್ದೆಗೆ ಕಣ್ಣೊಡ್ಡಿದ್ದ ಅನೇಕ ಭಿಕ್ಷುಕರ ನರಳಿಕೆ ಉಸ್ತಾದರ ಕಿವಿಗೆ ಕೇಳಿಸಿತು.

''ಊಟ ಮಾಡಿದೆಯಾ ?'' ಎಂದು ಉಸ್ತಾದರು ಕೇಳಿದಾಗ, ಆತ ''ಇಲ್ಲ'' ಎಂದ. ಕೇರಳದವನಾದ ಕಾರಣ ಆತನಿಗೆ ಭಾಷೆಯ ತೊಡಕು ಆಗಲಿಲ್ಲ. ಉಸ್ತಾದರು ತಾನು ಊಟ ಮಾಡಿದ ನಂತರ ಉಳಿದುದನ್ನು ಬುತ್ತಿಯಲ್ಲೇ ಇಟ್ಟಿದ್ದರು. ಅದನ್ನು ತೆಗೆದು ಭಿಕ್ಷುಕನಿಗೆ ಕೊಟ್ಟರು. ಹಾಗೇ ಆತ ಉಣ್ಣುವುದನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದರು.

''ರಹೀಮ್, ಇಸ್ಲಾಮ್ ಧರ್ಮದತ್ತ ಯಾಕೆ ಆಕರ್ಷಿತನಾದೆ'' ಎಂದು ಉಸ್ತಾದ್ ಕೇಳಿದ ತಕ್ಷಣ, ''ಬಡವ ಬಲ್ಲಿದ ಎಂಬ ಭೇದ ಕಲ್ಪಿಸದ ಧರ್ಮ ಒಂದಿದ್ದರೆ ಅದು ಇಸ್ಲಾಮ್ ಮಾತ್ರ. ಹಾಗಾಗಿ ನಾನು ಮುಸ್ಲಿಮನಾದೆ'' ಎಂದು ಆತ ಹೇಳಿದ.

''ನಿನ್ನ ಮಾತು ಕೇಳಿ ನನಗೆ ತುಂಬಾ ಖುಷಿಯಾಯಿತು. ನಿನಗೆ ನಿಜಕ್ಕೂ ಸ್ವರ್ಗ ಕಾದಿರಿಸಲಾಗಿದೆ. ಈ ರಾತ್ರಿ ಇಲ್ಲೇ ಉಳಕೊಳ್ಳು. ನಾಳೆ ಬೆಳಿಗ್ಗೆ ಮಸೀದಿಯ ಅಧ್ಯಕ್ಷರಲ್ಲಿ ಮಾತನಾಡಿ ನಿನಗೆ ಇಲ್ಲೇ ಖಾಯಂ ನೆಲೆ ಕಲ್ಪಿಸುವ ಹಾಗೆ ಮಾಡುತ್ತೇನೆ'' ಎಂದು ಹೇಳಿ ಆತನಿಗೆ ಮಲಗಲೊಂದು ಜಾಗ ತೋರಿಸಿದರು.

ಮರುದಿನ ಮುಂಜಾನೆ ನಮಾಜ್ ಮಾಡಲೆಂದು ಮಸೀದಿ ಅಧ್ಯಕ್ಷರನ್ನು ಕಂಡು ಮಾತನಾಡಿದ ಉಸ್ತಾದರು ನವ ಮುಸ್ಲಿಮನ ಬಗ್ಗೆ ತಿಳಿಸುತ್ತಾ ಆತನಿಗೆ ನೆಲ ಕಲ್ಪಿಸುವುದು ನಮ್ಮ ಕರ್ತವ್ಯ ಎಂದು ಹೇಳಿಕೊಂಡರು. ಉಸ್ತಾದರ ಯಾವುದೇ ಮಾತನ್ನು ತಿರಸ್ಕರಿಸದ ಮಸೀದಿ ಅಧ್ಯಕ್ಷರು ಭಿಕ್ಷುಕನನ್ನು ಕಂಡು ಮಾತನಾಡಿದರು.

''ನಾನು ಮೊದಲು ರಾಮ ಆಗಿದ್ದೆ. ನನ್ನ ತಂದೆ ತಾಯಿ ಕೋಮುಗಲಭೆಯಲ್ಲಿ ಸಾವಿಗೀಡಾಗಿದ್ದರು. ಹಾಗಾಗಿ ನಾನು ಅನಾಥನಾದೆ. ನಮ್ಮವರಲ್ಲಿ ಸಹಾಯ ಯಾಚಿಸಿದಾಗ ಅವರೆಲ್ಲಾ ಹಿಂದೆ ಮುಂದೆ ನೋಡಿದರು. ಅಂತಿಮವಾಗಿ ನನಗೆ ಸಹಕರಿಸಿದ್ದು ಒಂದು ಮುಸ್ಲಿಂ ಕುಟುಂಬ. ಅವರ ನಯ ಮಾತು, ನಾನು ಹಿಂದು ಅಂತ ಗೊತ್ತಿದ್ದೂ ಗೌರವ ಕೊಟ್ಟು ಮಾನವೀಯತೆ ಮೆರೆದದ್ದು ನನಗೆ ತುಂಬಾ ಹಿಡಿಸಿತ್ತು. ಹಾಗೇ ಪೊನ್ನಾಣಿಗೆ ಹೋಗಿ ನಾನು ರಹೀಂ ಆದೆ'' ಎಂದ.

ಆ ದಿನದ ಬೆಳಕು ಹರಿಯುವ ಮುನ್ನವೇ ಆತ ಮಸೀದಿಯೊಳಗೆ ನಿಂತು ಒಂದು ಸುಳ್ಳು ಹೇಳಿ ಎಲ್ಲರಿಂದಲೂ ಅನುಕಂಪ ಗಿಟ್ಟಿಸಿದ. ವಿಷಯ ಅಲ್ಲಿದ್ದವರ ಸಹಿತ ಎಲ್ಲರಿಗೂ ಗೊತ್ತಾಯಿತು. ಊರಿನ ಮುಸ್ಲಿಮರಿಗೆ ಆತ ಚರ್ಚೆಯ ಕೇಂದ್ರಬಿಂದುವಾದ. ಎಲ್ಲರೂ ಆತನ ನಿರ್ಧಾರಕ್ಕೆ ತಲೆತೂಗಿದರು. ಮುಸ್ಲಿಮನಾಗಿ ಹುಟ್ಟದ ಅನೇಕ ಯುವಕರು ಪ್ರೀತಿ ಪ್ರೇಮದ ಹೆಸರಲ್ಲಿ ಹೆಣ್ಮಕ್ಕಳಿಗಾಗಿ ಮತಾಂತರವಾಗುತ್ತಾರೆ. ಆದರೆ ಯಾವ ಅಪೇಕ್ಷೆಯೂ ಇಲ್ಲದೆ ಮುಸ್ಲಿಮನಾದ ಈತ ಇನ್ಮುಂದೆ ಊರೂರು ಅಲೆದು ಭಿಕ್ಷೆ ಬೇಡಬಾರದು. ಅವನಿಗೆ ಇದೇ ಊರಲ್ಲಿ ಒಂದು ನೆಲೆ ಕಲ್ಪಿಸಿಕೊಡಬೇಕು. ಹೆಚ್ಚೆಂದರೆ ವರ್ಷ ಮೂವತ್ತು ಆಗಬಹುದು. ಇನ್ನೂ ಮದುವೆಯಾದ ಹಾಗಿಲ್ಲ ಎಂದು ಮಸೀದಿಯ ಉಸ್ತಾದರು ಅವರಿವರಲ್ಲಿ ಹೇಳಿದಾಗ ಬಹುತೇಕ ಮಂದಿಯ ರೋಮ ಎದ್ದು ನಿಲ್ಲತೊಡಗಿತು. ಹೀಗೆ ಎಲ್ಲರೂ ಅವನನ್ನು ಆದರಿಸತೊಡಗಿದರು. ಕೆಲವರು ಊಟ ತಿಂಡಿಯನ್ನು ಆಗಾಗ ಕೊಡತೊಡಗಿದರು. ಅಷ್ಟೇ ಅಲ್ಲ, ಮಸೀದಿಯ ಒಂದು ಕೋಣೆಯಲ್ಲಿ ಆತನಿಗೆ ಮಲಗುವಂತೆ ಸೂಚನೆಯನ್ನೂ ನೀಡಿದರು.

ಹೊಸತಾಗಿ ಬಂದ ಭಿಕ್ಷುಕನೂ ಆಗಿರುವ ನವ ಮುಸ್ಲಿಮನಿಗೆ ಸಿಗುವ ವಿಶೇಷ ಆತಿಥ್ಯ ಅಲ್ಲಿನ ಇತರ ಭಿಕ್ಷುಕರಿಗೆ ಅಸಮಾಧಾನ ಹುಟ್ಟಿಸಿತು. ಎಲ್ಲರೂ ಆತನಿಗೆ ಹಣ ಕೊಡುತ್ತಿದ್ದ ಕಾರಣ ತಮಗೆ ಸಿಗುತ್ತಿದ್ದ ಪಾಲನ್ನು ಕಸಿಯಲು ಬಂದ ನವ ಮುಸ್ಲಿಮನ ಬಗ್ಗೆ ಅವರು ಹಲ್ಲು ಮಸೆಯತೊಡಗಿದರು. ಅವರಿಗೆ ಕ್ಷಣ ಕ್ಷಣವೂ ಇರಿಸುಮುರಿಸು ಉಂಟಾಗತೊಡಗಿತು.

''ಅವ ಯಾರೋ ಏನೋ ? ಊರಿನ ಕಳ್ಳನಾದರೂ ಆಗಬಹುದು. ಪರ ಊರಿನ ಸುಬಗ ಅಲ್ಲ. ಯಾತಕ್ಕಾಗಿ ಈ ವೇಷ ಹಾಕಿದ್ದಾನೋ ನನಗೆ ಗೊತ್ತಿಲ್ಲ. ನವ ಮುಸ್ಲಿಮನಾದರೆ ಏನಂತೆ, ಇಷ್ಟೊಂದು ಆತಿಥ್ಯ ಮಾಡಬೇಕಾ ? ಸರಿಯಾಗಿ ವಿಚಾರಿಸದೆ ಆಧರಿಸುತ್ತೀರಲ್ಲಾ, ನಿಮಗೆ ಹುಚ್ಚು'' ಎಂದು ಬಶೀರಾಕ ಹೇಳಿದ್ದು ಉಸ್ತಾದರ ಕಿವಿಗೆ ಬಿದ್ದಿತ್ತು. ಅವರು ಅಂದು ಮಧ್ಯಾಹ್ನವೇ ನಮಾಜ್ ಮಾಡಲು ಬಂದ ಬಶೀರಾಕನಲ್ಲಿ, ''ಇಸ್ಲಾಮ್ ಧರ್ಮದ ಮೇಲೆ ವಿಶ್ವಾಸವಿಟ್ಟು ಬಂದ ರಹೀಮನನ್ನು ನಾನು ಗೌರವಿಸಲೇಬೇಕು. ಅವನಿಗೆ ಸ್ವರ್ಗ ಕಟ್ಟಿಟ್ಟ ಬುತ್ತಿ. ಅಂಥವರನ್ನು ನಾವು ಗೌರವಿಸಿದರೆ ನಾವು ಮಾಡಿದ ಪಾಪಕ್ಕೂ ಕ್ಷಮೆ ಇದೆ'' ಎಂದು ಹೇಳಿ ಬಶಿರಾಕನನ್ನು ಸುಮ್ಮನಾಗಿಸಿದರು.

'ಅಲ್ಲ, ಉಸ್ತಾದ್, ಇದೇ ಮಸೀದಿಯ ಬಳಿ ಎಷ್ಟು ಭಿಕ್ಷುಕರು ಭಿಕ್ಷೆ ಬೇಡಿ ಜೀವನ ಸಾಗಿಸುತ್ತಿದ್ದಾರೆ. ಅವರು ನಿಜಕ್ಕೂ ಮುಸ್ಲಿಮರು. ನವಮುಸ್ಲಿಮನ ವೇಷ ಹಾಕಿ ಬಂದವರಲ್ಲ. ಅಂಥ ಭಿಕ್ಷುಕರಿಗೆ ಸಹಾಯ ಮಾಡದೆ ನವ ಮುಸ್ಲಿಂ ಎಂಬ ಒಂದೇ ಒಂದು ಕಾರಣಕ್ಕೆ ಈ ರೀತಿ ಮಾಡುತ್ತಿರುವುದು ಸರಿಯಾ' ಎಂದು ಬಶೀರಾಕ ಕೇಳಬೇಕೆನಿಸಿದರೂ ಸುಮ್ಮನಾದರು.

ಎಲ್ಲೂ ಸಿಗದ ವಿಶೇಷ ಆತಿಥ್ಯ ಇಲ್ಲಿ ಸಿಗುತ್ತಿರುವುದರಿಂದ ಪುಳಕಿತನಾದ ಆತ ಮಸೀದಿಯಲ್ಲಿ ಮಣಿಮಾಲೆ ಹಿಡಿದು ಎಣಿಸುವ ಮೂಲಕ ತಸ್ಬೀಹ ಹೇಳುತ್ತಾ, ಕಂಡ ಕಂಡವರಿಗೆ ಬಾಯಿ ತುಂಬಾ ಸಲಾಂ ಹೇಳಿ ಮುಗುಳ್ನಗುತ್ತಿದ್ದ. ಹಾಗೇ ನಕ್ಕಾಗ ಅವರು ಕೈಲಾದಷ್ಟು ಹಣವನ್ನು ಆತನ ಕೈಗಿಡುತ್ತಿದ್ದರು. ತನ್ನ ನಟನೆಯಲ್ಲಿ ಒಂದಷ್ಟು ಸಂಶಯವನ್ನೂ ಆತ ಉಳಿಸಲಿಲ್ಲ.

''ರಾಮ್ ಇದ್ದವ ರಹೀಮ್ ಆದ. ಮುಂದೆ ಆತ ಮಿಶನರಿಗಳ ಆಮಿಷಕ್ಕೆ ಬಲಿ ಬಿದ್ದು ರೇಮಂಡ್ ಆದಾನು. ಮೊನ್ನೆ ನಾನು ಕೇಳಿದಾಗ ಮದುವೆ ಆಗಿಲ್ಲ ಅಂತ ಹೇಳಿದ್ದಾನೆ. ಹಾಗಾಗಿ ಇದೇ ಊರಿನ ಒಬ್ಬಳನ್ನು ಮದುವೆ ಮಾಡಿಸಿ ಆಶ್ರಯ ಯೋಜನೆಯಡಿ ಒಂದು ಮನೆ ಸಿಗುವ ಹಾಗೆ ಮಾಡಿದರೆ ಹೇಗೆ ?'' ಎಂದು ಉಸ್ತಾದರು, ಅಧ್ಯಕ್ಷರಲ್ಲಿ ಕೇಳಿದರು.

ಆ ಮಾತಿಗೆ ತಲೆತೂಗಿದ ಅಧ್ಯಕ್ಷರು ಆ ದಿನವೇ ಊರಿನ ಅಲಿಮಮ್ಮ ಎಂಬ ಬಡ ಹುಡುಗಿಯ ತಾಯಿಯನ್ನು ಕಂಡು ನವ ಮುಸ್ಲಿಮನಾದ ರಹೀಮ್‌ನಿಗೆ ಆಕೆಯ ಮಗಳ ಮದುವೆ ಮಾಡಿಕೊಡುವ ಬಗ್ಗೆ ಪ್ರಸ್ತಾಪಿಸಿದ್ದರು. ವರನಿಗಾಗಿ ಹುಡುಕಾಡಿ ಸೋತು ಸುಣ್ಣವಾಗಿದ್ದ ಆಕೆ ಮಸೀದಿ ಅಧ್ಯಕ್ಷರ ಮಾತು ನಂಬಿ ಹ್ಞೂಂಗುಟ್ಟಿದರು.

ಹಾಗೇ ಮದುವೆಯ ತರಾತುರಿಯೂ ನಡೆಯಿತು. ಗ್ರಾಮ ಪಂಚಾಯತ್ ಅಧ್ಯಕ್ಷರಲ್ಲಿ ಮಾತನಾಡಿ ಆಶ್ರಯ ಯೋಜನೆಯಡಿ ಒಂದು ಮನೆ ಸಿಗುವ ಹಾಗೆ ನಾನು ಮಾಡುತ್ತೇನೆ. ಈಗ ಅವರಲ್ಲಿ ಸ್ವಲ್ಪ ಚಿನ್ನ ಉಂಟಂತೆ. ಕಾಸಿಯವರ ವ್ಯವಸ್ಥೆ ನಾವು ಮಾಡಬೇಕಾಗಿದೆ'' ಎಂದು ಅಧ್ಯಕ್ಷರು ಹೇಳಿ ಮತ್ತೆ ದೇಣಿಗೆ ಸಂಗ್ರಹಕ್ಕೆ ಮುಂದಾದರು. ಎಲ್ಲರೂ ಪುಣ್ಯಕಾರ್ಯ ಎಂದು ಬಗೆದು ತಮಗೆ ಸಾಧ್ಯವಿದ್ದಷ್ಟು ಹಣವನ್ನು ಒಟ್ಟುಗೂಡಿಸಿದರು. ಹಾಗೆ ಆ ರಾತ್ರಿಯೇ ಅಲಿಮಮ್ಮ ನವಮುಸ್ಲಿಮನಾದ ರಹೀಮನ ಹೆಂಡತಿಯಾದಳು.

ಕೆಲವು ದಿನ ಉರುಳಿತು. ರಹೀಮ್ ಹೆಂಡತಿಯ ಮನೆಯಲ್ಲೇ ಉಳಕೊಳ್ಳುತ್ತಿದ್ದ. ಮದುವೆಯಾದ ನಂತರ ಅವ ಮಸೀದಿಗೆ ಹೋಗುತ್ತಿದ್ದನಾದರೂ ಭಿಕ್ಷಾಟನೆಗೆ ಕೂರಲಿಲ್ಲ. ಆದರೂ ಕೆಲವರು ಆಗಾಗ ಸ್ವಲ್ಪ ಹಣ ಕೊಡುತ್ತಿದ್ದರು. ಮದುವೆಯ ಸಂದರ್ಭದಲ್ಲಿ ಹಣ ಸಿಕ್ಕಿದ್ದರಿಂದ ಆತನಿಗೆ ಹಣದ ಕೊರತೆ ಇರಲಿಲ್ಲ. ಆದರೆ ಸುಮ್ಮನೆ ಕೂರಲು ಬೋರಾಗುತ್ತಿತ್ತು.

ರಹೀಮ ಒಬ್ಬ ನಯ ವಂಚಕ. ಕೇರಳ ಮೂಲದ ಆತ ಹುಟ್ಟಿನಲ್ಲೇ ಒಬ್ಬ ಮುಸ್ಲಿಮನಾಗಿದ್ದ. ಇಪ್ಪತ್ತು ತುಂಬುವ ಮೊದಲೇ ಒಂದು ಮದುವೆಯಾಗಿದ್ದ. ಎರಡು ಮಕ್ಕಳಾದ ಮೇಲೆ ಆಕೆಗೆ ಕೈ ಕೊಟ್ಟಿದ್ದ. ಅದೊಂದು ದಿನ ಮಸೀದಿಯಲ್ಲಿ ನವಮುಸ್ಲಿಮನಿಗೆ ಸಿಗುತ್ತಿದ್ದ ವಿಶೇಷ ಆತಿಥ್ಯವನ್ನು ಕಂಡು ಪುಳಕಿತನಾದ ಆತ ಅದೇ ಹೆಸರಲ್ಲಿ ಕಾರ್ಯಾಚರಿಸುವ ನಿರ್ಧಾರಕ್ಕೆ ಬಂದ. ಹಾಗೇ ನಾನು ಮೊದಲು ರಾಮ್ ಆಗಿದ್ದೆ, ಈಗ ರಹೀಮ್ ಆಗಿದ್ದೇನೆ. ಮದುವೆ ಆಗಿಲ್ಲ ಎಂದು ಮಸೀದಿಯ ಉಸ್ತಾದರಲ್ಲಿ ಹೇಳಿ ತನ್ನ ನಯ ಮಾತಿನಿಂದ ಅವರ ವಿಶ್ವಾಸ ಗಳಿಸಿ ಮದುವೆಯಾಗಿ ಹಣ, ಚಿನ್ನಾಭರಣ ದೋಚುವುದು ಅವನ ಉದ್ದೇಶವಾಗಿತ್ತು. ಹಾಗೇ ಹಲವು ಕಡೆ ಮಾಡಿ ಅನೇಕ ಮಂದಿಗೆ ವಂಚಿಸಿದ್ದ. ಆದರೆ ಎಲ್ಲೂ ಕೂಡಾ ಆತ ಸಿಕ್ಕಿ ಬೀಳಲಿಲ್ಲ.

ಏಳೆಂಟು ತಿಂಗಳು ಉರುಳಿತು. ತಾಂತ್ರಿಕ ಕಾರಣದಿಂದ ಆತನಿಗೆ ಆಶ್ರಯ ಯೋಜನೆಯಡಿ ಮನೆ ಸಿಗದಿದ್ದರೂ ಅದಕ್ಕಾಗಿ ಪ್ರಯತ್ನ ನಡೆಯುತ್ತಲೇ ಇತ್ತು. ನವಮುಸ್ಲಿಮನಿಗೆ ಮದುವೆ, ಮನೆಗೆ ಸಿದ್ಧತೆ ಇತ್ಯಾದಿ ಇತರ ಭಿಕ್ಷುಕರಿಗೆ ಅಸಹನೆಯುಂಟುಮಾಡಿದರೂ ಕೂಡಾ ಅವರು ನೋವು ನುಂಗಿ ಸುಮ್ಮನಾಗಿದ್ದರು.

ತನ್ನನ್ನು ಗಂಡ ತುಂಬಾ ಪ್ರೀತಿಸುತ್ತಿದ್ದಾರೆ ಎಂದು ಅಲಿಮಮ್ಮ ಬಗೆದು ಸುಂದರ ಕನಸು ಕಾಣುತ್ತಿದ್ದಳು. ಇದ್ದಕ್ಕಿದ್ದ ಹಾಗೇ ಅದೊಂದು ಮುಂಜಾನೆ ರಹೀಮ್ ಕಾಣೆಯಾಗಿದ್ದ. ಅಷ್ಟೇ ಅಲ್ಲ, ಆಕೆಯ ಎಲ್ಲಾ ಚಿನ್ನಾಭರಣವನ್ನೂ ದೋಚಿದ್ದ. ವಿಷಯ ಊರಿಡೀ ಹಬ್ಬಿತು. ಮಸೀದಿಯ ಅಧ್ಯಕ್ಷರು ಮತ್ತು ಉಸ್ತಾದರು ನಾಚಿಕೆ, ಹತಾಶೆಯಿಂದ ಮುಖ ತಗ್ಗಿಸಿದ್ದರು. ಊರವರು ತಲೆಗೊಂದರಂತೆ ಮಾತನಾಡಿದರು. ಬಹುತೇಕ ಮಂದಿಗೆ ತಾವು ಮೋಸಹೋದುದು ಅರಿವಾಗಿತ್ತು. ನವ ಮುಸ್ಲಿಮನನ್ನು ಉಪಚರಿಸುವ ಭರಾಟೆಯಲ್ಲಿ ಮಸೀದಿಯ ಕಾಮಗಾರಿಯೂ ಸ್ಥಗಿತಗೊಂಡಿತ್ತು.

ಈಗ ಅಲಿಮಮ್ಮಳಿಗೆ ಅಳುವುದೊಂದೇ ಬಾಕಿ. ಆಕೆಯ ತಾಯಿ ಎಲ್ಲರಿಗೂ ಶಾಪ ಹಾಕತೊಡಗಿದರು. ಅನೇಕ ವರ್ಷವಾದರೂ ಕೂಡಾ ನವಮುಸ್ಲಿಮನ ಸುಳಿವಿಲ್ಲ. ''ಉಸ್ತಾದ್, ನನ್ನ ಮಗಳನ್ನು ನೀವು ನಡು ನೀರಲ್ಲಿ ಬಿಟ್ಟುಬಿಟ್ಟಿರಿ. ಅವ ಒಂದು ಮಗು ಮಾಡಿ ಹೋದುದಲ್ಲದೆ, ಇದ್ದ ಚಿನ್ನಾಭರಣವನ್ನೂ ದೋಚಿದ. ಇನ್ನು ನಾನು ಎಷ್ಟೊಂತ ಕಾಯುವುದು ? ಮೊನ್ನೆ ಒಂದು ಮದುವೆ ಸಂಬಂಧ ಇತ್ತು. ಆದರೆ ನಾಳೆ ಆತ ಬಂದರೆ ?'' ಎಂದು ಅಲಿಮಮ್ಮಳ ತಾಯಿ ತನ್ನ ಅಳಲು ತೋಡಿಕೊಂಡರು. ಉಸ್ತಾದರು, ಮಸೀದಿಯ ಅಧ್ಯಕ್ಷರಲ್ಲಿ ಮಾತನಾಡುತ್ತಾ ಸ್ಥಳೀಯ ಪತ್ರಿಕೆಯಲ್ಲಿ ಫಸ್ಕ್ ಪ್ರಕಟಣೆಯನ್ನು ಹೊರಡಿಸಲು ಸೂಚನೆ ನೀಡಿದರು.

**ಫಸ್ಕ್ ಪ್ರಕಟಣೆ**

ಮಂಗಳೂರು ತಾಲೂಕಿನ ಮುಸ್ಲಿಂ ಜಮಾಅತ್ ವ್ಯಾಪ್ತಿಯ ದಿವಂಗತ ಬಾಪುಂಞಿ ಎಂಬವರ ಪುತ್ರಿ ಅಲಿಮಮ್ಮ ಎಂಬವಳಾದ ನಾನು ನನ್ನ ಗಂಡ ಕೇರಳದ ರಹೀಮ್ ಎಂಬವರಿಗೆ ಈ ಮೂಲಕ ತಿಳಿಸುವುದೇನೆಂದರೆ, ನೀವು ಮೂರು ವರ್ಷದ ಹಿಂದೆ ನನ್ನನ್ನು ಮದುವೆಯಾಗಿ ಒಂದು ಮಗುವಿನ ಜನ್ಮಕ್ಕೆ ಕಾರಣನಾಗಿ ನಂತರ ಯಾವುದೇ ಸೂಚನೆ ಇಲ್ಲದೆ ಮನೆ ಬಿಟ್ಟು ಹೋಗಿದ್ದೀರಿ. ನಮ್ಮ ಯಾವುದೇ ಕಷ್ಟ ಸುಖದಲ್ಲಿ ಭಾಗಿಯಾಗಿರದ ನಿಮ್ಮ ಬರುವಿಕೆಯನ್ನು ಕಾದು ನಾವು ನಿರಾಶರಾಗಿದ್ದೇವೆ. ಹಾಗಾಗಿ ಈ ಪ್ರಕಟಣೆ ಹೊರಡಿಸಿದ ದಿನದಿಂದ ೧೫ ದಿನದ ಒಳಗೆ ನೀವು ಮತ್ತೆ ಬಂದು ನನ್ನೊಂದಿಗೆ ಮೊದಲಿನಂತೆ ಜೀವನ ನಡೆಸದಿದ್ದಲ್ಲಿ ನಾನು ಶರೀಅತ್‌ಗೆ ಅನುಗುಣವಾಗಿ ನಮ್ಮ ವಿವಾಹ ಸಂಬಂಧವನ್ನು ಫಸ್ಕ್ ಮೂಲಕ ವಿಚ್ಛೇದಿಸುವುದಾಗಿ ಈ ಮೂಲಕ ತಿಳಿಯಪಡಿಸುತ್ತೇನೆ.

ಅಲಿಮಮ್ಮ

ದಿ. ಬಾಪುಂಞಿಯ ಮಗಳು

ಹಾಗಂತ ಉಸ್ತಾದರು ಬರೆದು ಕಳುಹಿಸಿದ್ದ ಬರಹದ ಕೆಳಗೆ ಅಲಿಮಮ್ಮ ತನ್ನ ಹೆಬ್ಬೆಟ್ಟು ಒತ್ತಿದಳು. ಅದನ್ನು ಓದಿಸಿದಾಗ ಆಕೆಯ ಕಣ್ಣಲ್ಲಿ ನೀರು ಆಟವಾಡತೊಡಗಿತ್ತು. ತನ್ನನ್ನು ಈ ಸಂಕಷ್ಟದಲ್ಲಿ ಸಿಲುಕಿಸಿದವರ ವಿರುದ್ಧ ಸೆಟೆದು ನಿಲ್ಲಬೇಕೆಂದು ಮನಸ್ಸಾದರೂ ಕೂಡಾ ತಾಳ್ಮೆ ವಹಿಸಿ ನೋವು ನುಂಗಿದಳು.

ಮರುದಿನ ಪತ್ರಿಕೆಯಲ್ಲಿ ಫಸ್ಕ್ ಪ್ರಕಟಣೆಯೂ ಆಯಿತು. ಅಲಿಮಮ್ಮ ೧೫ ದಿನ ಉರುಳುವುದನ್ನು ಎಣಿಸುತ್ತಾ, ಅಷ್ಟರೊಳಗೆ ಗಂಡ ಬರುತ್ತಾರಾ ಎಂಬ ನಿರೀಕ್ಷೆಯಲ್ಲಿ ದಾರಿ ನೋಡತೊಡಗಿದಳು.

**ಹಂಝ ಮಲಾರ್**
ಅರಸ್ತಾನ, ಅಂಚೆ : ಪಾವೂರು - ೫೭೪ ೧೫೨
ಮಂಗಳೂರು

# ಷೇಕ್ಸ್‌ಪಿಯರ್‌ನ ಪರಿಚಯ ಇದೆಯಾ ?

**ಷೇಕ್ಸ್‌ಪಿಯರ್ ತನ್ನ ಕಾಲಕ್ಕೆ ತನ್ನ ಯುಗಕ್ಕೆ ಸೀಮಿತನಾದವನಲ್ಲ, ಅವನು ತನ್ನ ಇಂಗ್ಲಿಷ್, ಕ್ರಿಶ್ಚಿಯನ್, ಯುರೋಪಿಯನ್ ಹಾಗೂ ಮಧ್ಯಯುಗೀನ ಉಪಾಧಿಗಳನ್ನೆಲ್ಲ ಮೀರಿ ಬೆಳೆದುನಿಂತ ಒಬ್ಬ ಅಪ್ಪಟ ಮಾನವತಾವಾದಿ, ಇಡೀ ಮನುಕುಲವನ್ನು ಪ್ರತಿನಿಧಿಸುವ ಒಬ್ಬ ಮಹಾನ್ ಕಲಾವಿದ. ಅವನ ನಾಟಕಗಳ ಮಾಯಾದರ್ಪಣದಲ್ಲಿ ನಮಗೆ ಮನುಷ್ಯನ ಅಸಂಖ್ಯ ಮುಖಗಳ, ಬದುಕಿನ ಚಿತ್ರವಿಚಿತ್ರ ಘಟನೆಗಳ ದರ್ಶನವಾಗುತ್ತದೆ.**

**——— ಬಿದರಹಳ್ಳಿ ನರಸಿಂಹಮೂರ್ತಿ ———**

ವಿಲಿಯಂ ಷೇಕ್ಸ್‌ಪಿಯರ್ (೧೫೬೪-೧೬೧೬) ಹುಟ್ಟಿದ್ದು ಇಂಗ್ಲೆಂಡಿನ ಏವನ್ ನದಿ ದಂಡೆಯಲ್ಲಿರುವ ಸ್ಟ್ರ್ಯಾಟ್‌ಫರ್ಡ್‌ನಲ್ಲಿ. ಅವನ ತಂದೆ ಜಾನ್ ಷೇಕ್ಸ್‌ಪಿಯರ್ ಮಾಂಸದ, ಉಣ್ಣೆಯ ವ್ಯಾಪಾರಿ ಹಾಗೂ ಆ ಊರಿನ ಒಬ್ಬ ಗಣ್ಯ ವ್ಯಕ್ತಿ. ಅವನ ತಾಯಿ ಮೇರಿ ಆರ್ಡೆನ್ ಹಡೆದ ಎಂಟು ಮಕ್ಕಳ ಪೈಕಿ ವಿಲಿಯಂ ಮೂರನೆಯವ. ಅವನು ಹುಟ್ಟಿದ ದಿನಗಳಲ್ಲಿ ಆ ಭಾಗದಲ್ಲೆಲ್ಲ ಪ್ಲೇಗಿನ ಹಾವಳಿ ಇದ್ದು, ವಿಲಿಯಂನ ಮನೆ ಬಾಗಿಲನ್ನು ಆ ರೋಗಮಾರಿ ತಟ್ಟದಿದ್ದುದು ನಮ್ಮ ಪುಣ್ಯ. ಸ್ಟ್ರ್ಯಾಟ್‌ಫರ್ಡಿನ ಫ್ರೀ ಗ್ರಾಮರ್ ಸ್ಕೂಲ್‌ನಲ್ಲಿ ಅವನ ವಿದ್ಯಾಭ್ಯಾಸ. ೧೫೮೨ರಲ್ಲಿ ಷೇಕ್ಸ್‌ಪಿಯರ್ ತನಗಿಂತ ಎಂಟು ವರ್ಷ ದೊಡ್ಡವಳಾದ ಆ್ಯನ್ ಹ್ಯಾತವೇ ಜೊತೆ ಮದುವೆಯಾದಾಗ ಸುಸಾನ್ನಾ ಎಂಬ ಅವರ ಮೊದಲ ಮಗುವಿನ ಜನನವಾಗಲು ಇನ್ನು ಐದೇ ತಿಂಗಳುಳಿದಿತ್ತು. ಎರಡು ವರ್ಷಗಳ ನಂತರ ಹ್ಯಾಮ್ನೆಟ್ ಮತ್ತು ಜುಡಿತ್ ಎಂಬ ಅವಳಿಜವಳಿ ಮಕ್ಕಳ ಜನನ. ಕೆಲಕಾಲ ಶಾಲಾ ಮಾಸ್ತರಿಕೆ. ನಂತರ ಲಂಡನ್‌ಗೆ ಪಯಣ. 'ದ ಥಿಯೇಟರ್' ಅಥವಾ 'ದ ಕರ್ಟನ್' ಕಂಪನಿಯಲ್ಲಿ ಪರದೆ ಎಳೆಯುವ ಸಣ್ಣ ಕೆಲಸ. ಲಾರ್ಡ್ ಸೌತಾಂಪ್‌ಟನ್‌ನ ಪರಿಚಯ. ಮುಂದೆ ಲಾರ್ಡ್ ಛೇಂಬರ್‌ಲೇನ್ಸ್ ಕಂಪನಿ ಆಫ್ ಪ್ಲೇಯರ್ಸ್‌ನ ಸದಸ್ಯತ್ವ. ೧೫೯೦-೯೧ರಲ್ಲಿ ಷೇಕ್ಸ‌ಪಿಯರ್ ತನ್ನ ಮೊದಲ ನಾಟಕಗಳನ್ನು, ೧೫೪ ಸುನೀತ (ಸಾನೆಟ್)ಗಳನ್ನು ಹಾಗೂ 'ದ ರೇಪ್ ಆಫ್ ಲ್ಯೂಕ್ರಿಸ್', 'ವೀನಸ್ ಆ್ಯಂಡ್ ಆಡೊನಿಸ್' ಮುಂತಾದ ಕವಿತೆಗಳನ್ನು ರಚಿಸಿದ. 'ದ ಗ್ಲೋಬ್'ನಂಥ ಪ್ರತಿಷ್ಠಿತ ನಾಟಕ ಮಂದಿರದಲ್ಲಿ ಅವನ ನಾಟಕಗಳ ಪ್ರದರ್ಶನಕ್ಕೆ ಜನ ಕಿಕ್ಕಿರಿದು ನೆರೆಯುತ್ತಿದ್ದರು. ೧೬೧೧ರಲ್ಲಿ ಸ್ಟ್ರ್ಯಾಟ್‌ಫರ್ಡ್‌ಗೆ ಮರಳಿದ. ೧೬೧೩ರಲ್ಲಿ ಬ್ಲ್ಯಾಕ್‌ಫ್ರೆಯರ್ಸ್‌ನಲ್ಲಿ ನ್ಯೂ ಪ್ಲೇಸ್ ಎಂಬ ಅದ್ಭುತವಾದ ಮನೆ ಕೊಂಡ. ೧೬೧೬ರ ಮಾರ್ಚ್‌ನಲ್ಲಿ ತನ್ನ ಮರಣ ಪತ್ರವನ್ನೂ ಸಿದ್ಧಪಡಿಸಿದ. ಅದೇ ವರ್ಷ ಏಪ್ರಿಲ್ ೨೩ರಂದು ಕೊನೆಯುಸಿರೆಳೆದ. ಅವನ ಬದುಕಿನ ಈ ವಿವರಗಳ ಅಧಿಕೃತತೆಯ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ.

ಷೇಕ್ಸ್‌ಪಿಯರ್‌ನ ಜೀವಿತಾವಧಿಯಲ್ಲಿ ಅವನ ಯಾವುದೇ ನಾಟಕ ಮುದ್ರಿತ ರೂಪದಲ್ಲಿ ಪ್ರಕಟವಾಗಿರಲಿಲ್ಲ. ಅವನು ಸತ್ತ ಏಳು ವರ್ಷಗಳ ನಂತರ, ಅಂದರೆ ೧೬೨೩ರಲ್ಲಿ 'ಫಸ್ಟ್ ಫೋಲಿಯೊ' ಎಂಬ ಹೆಸರಿನಲ್ಲಿ ಅವನ ೩೬ ('ಪೆರಿಕ್ಲಿಸ್' ಮತ್ತು 'ಟೂ ನೋಬಲ್ ಕಿನ್ಸ್‌ಮೆನ್'ಗಳನ್ನು ಹೊರತುಪಡಿಸಿ) ನಾಟಕಗಳನ್ನು ಪ್ರಕಟಿಸಲಾಯಿತು. ಇದನ್ನು ಸಂಪಾದಿಸಿ ಪ್ರಕಟಿಸಿದವರು ಷೇಕ್ಸ್‌ಪಿಯರ್‌ನ ಗೆಳೆಯರೂ ಸಹನಟರೂ ಆಗಿದ್ದ ಜಾನ್ ಹೆಮಿಂಗ್ ಮತ್ತು ಹೆನ್ರಿ ಕೊಂಡಾಲ್ ಎಂಬುವರು. ಈ ಮೊದಲ ಮುದ್ರಣದ ಮುಂಪುಟದಲ್ಲಿ ಮಾರ್ಟಿನ್ ಡ್ರೋಶೌಟ್ ಎಂಬ ಕಲಾವಿದ ರಚಿಸಿರುವ ಷೇಕ್ಸ್‌ಪಿಯರ್‌ನ ಚಿತ್ರವಿದೆ. ಇದು ಮತ್ತು ಸ್ಟ್ರ್ಯಾಟ್‌ಫರ್ಡ್ ಇಗರ್ಜಿಯಲ್ಲಿರುವ ಷೇಕ್ಸ್‌ಪಿಯರ್‌ನ ಪ್ರತಿಮೆ ಇವೆರಡೆ ಅವನು ನೋಡಲು ಹೇಗಿದ್ದ ಎಂಬ ಕಲ್ಪನೆ ಕೊಡಬಲ್ಲ ಕಲಾಕೃತಿಗಳು.

ಷೇಕ್ಸ್‌ಪಿಯರ್‌ನ ನಾಟಕಗಳನ್ನು ಟ್ರ್ಯಾಜಿಡಿಗಳು, ಕಾಮಿಡಿಗಳು, ರೊಮಾನ್ಸ್‌ಗಳು (ರಮ್ಯಾದ್ಭುತ ನಾಟಕಗಳು) ಮತ್ತು ಚಾರಿತ್ರಿಕ ನಾಟಕಗಳು ಎಂದು ನಾಲ್ಕು ಗುಂಪುಗಳಾಗಿ ವಿಭಾಗಿಸಲಾಗಿದೆ. 'ಮ್ಯಾಕ್‌ಬೆತ್', 'ಹ್ಯಾಮ್‌ಲೆಟ್', 'ಒಥೆಲ್ಲೊ' ಮತ್ತು 'ಕಿಂಗ್ ಲಿಯರ್' ಇವನ್ನು ವಿಮರ್ಶಕರು ದ ಫೋರ್ ಗ್ರೇಟ್ ಟ್ರ್ಯಾಜಿಡೀಸ್ ಎಂದು ಗುರುತಿಸಿದ್ದಾರೆ. 'ಜೂಲಿಯಸ್ ಸೀಜರ್', 'ರೋಮಿಯೋ ಆಂಡ್ ಜೂಲಿಯೆಟ್', 'ಆ್ಯಂಟನಿ ಆಂಡ್ ಕ್ಲಿಯೋಪಾತ್ರ', 'ಟೈಮನ್ ಆಫ್ ಅಥೆನ್ಸ್', 'ಕೋರಿಯಾಲನಸ್' ಮತ್ತು 'ಟೈಟಸ್ ಆಂಡ್ರೋನಿಕಸ್' ಇನ್ನಿತರ ಟ್ರ್ಯಾಜಿಡಿಗಳು. 'ಕಾಮಿಡಿ ಆಫ್ ಎರರ್ಸ್', 'ಟೇಮಿಂಗ್ ಆಫ್ ದಿ ಶ್ರೂ','ಟೂ ಜೆಂಟ್ಲ್‌ಮೆನ್ ಆಫ್ ವೆರೋನ', 'ಲವ್ಸ್ ಲೇಬರ್ಸ್ ಲಾಸ್ಟ್', 'ಮರ್ಚೆಂಟ್ ಆಫ್ ವೆನಿಸ್', 'ಮೆರಿ ವೈವ್ಸ್ ಆಫ್ ವಿಂಡ್ಸರ್', 'ಮಚ್ ಆ್ಯಡೋ ಎಬೌಟ್ ನಥಿಂಗ್', 'ಆ್ಯಸ್ ಯು ಲೈಕ್ ಇಟ್', 'ಟ್ವೆಲ್ತ್ ನೈಟ್', 'ಟ್ರಯಲಸ್ ಆಂಡ್ ಕ್ರಿಸೀಡ', 'ಮೆಶರ್ ಫಾರ್ ಮೆಶರ್', 'ಆಲ್ ಈಸ್ ವೆಲ್ ದಟ್ ಎಂಡ್ಸ್ ವೆಲ್,' 'ಪೆರಿಕ್ಲಿಸ್' ಮತ್ತು 'ಸಿಂಬೆಲಿನ್' ಇವು ಕಾಮಿಡಿಗಳು. 'ಟೆಂಪೆಸ್ಟ್', 'ವಿಂಟರ್ಸ್ ಟೇಲ್' ಮತ್ತು 'ಎ ಮಿಡ್ ಸಮರ್ ನೈಟ್ಸ್ ಡ್ರೀಮ್' ಇವು ರೋಮಾನ್ಸ್‌ಗಳು. 'ಹೆನ್ರಿ ದ ಸಿಕ್ಸ್ತ್' (ಭಾಗ-೧, ೨, ಮತ್ತು ೩) 'ರಿಚರ್ಡ್ ದ ಥರ್ಡ್', 'ಕಿಂಗ್ ಜಾನ್', 'ರಿಚರ್ಡ್ ದ ಸೆಕೆಂಡ್', 'ಹೆನ್ರಿ ದ ಫೋರ್ತ್' (ಭಾಗ-೧ ಮತ್ತು ೨) 'ಹೆನ್ರಿ ದ ಫಿಫ್ತ್' ಮತ್ತು 'ಹೆನ್ರಿ ದ ಏಯ್ತ್' ಇವು ಚಾರಿತ್ರಿಕ ನಾಟಕಗಳು.

ವಿಶ್ವವಿದ್ಯಾಲಯದ ಪದವಿಗಳ ಹಂಗಿಲ್ಲದೆ ಅರಳಿತು ಷೇಕ್ಸ್‌ಪಿಯರ್‌ನ ಅದ್ಭುತ ಕಲಾಪ್ರತಿಭೆ. ಅನುಭವಗಳಿಗೆ ತೆರೆದುಕೊಳ್ಳುವ ಅವನ ಸಾಹಸಿ ವ್ಯಕ್ತಿತ್ವವು ಬಾಲ್ಯದಲ್ಲಿ ಹಳ್ಳಿಯ ಹಸಿರು ಪರಿಸರವನ್ನು, ಯೌವನದಲ್ಲಿ ರೆನೆಸಾನ್ಸ್ ಲಂಡನ್ನಿನ ಜ್ಞಾನಪರ್ವವನ್ನು, ಎಲಿಜಬೆತನ್ ಇಂಗ್ಲೆಂಡಿನ ಸಾಂಸ್ಕೃತಿಕ ತಹತಹವನ್ನು ತನ್ನ ಒಳಗಣ್ಣಿನೊಳಗೆ ಹೀರಿಕೊಂಡಿತು. ಇದರಿಂದಾಗಿ ಅವನಿಗೆ ಮನುಷ್ಯ ಬದುಕಿನ ಬಗ್ಗೆ ಒಂದು ಪ್ರಚಂಡ ಕಾಣ್ಕೆ, ಈ ಜಗತ್ತಿನ ಬಗ್ಗೆ ಒಂದು ಮಹಾದರ್ಶನ ಉಂಟಾದವು. ಅವನ ಭಾವಭೂಮಿಕೆ ಎಂಬ ಮಾಯಾಲಾಂದ್ರದಿಂದಾಗಿ ಅವತ್ತಿನ ಎಲಿಜಬೆತನ್ ರಂಗಭೂಮಿಯಲ್ಲಿ ಮಿಂಚಿನ ಸಂಚಾರವಾಯಿತು.

ಆದರೆ ಷೇಕ್ಸ್‌ಪಿಯರ್‌ನ ವಿಶ್ವರೂಪ - ಪ್ರತಿಭೆಯನ್ನು ಇಂಗ್ಲೆಂಡಿನ ರಾಷ್ಟ್ರೀಯ ಆಸ್ತಿ ಎಂಬಂತೆ ಭಾವಿಸಿದ್ದು, ಇಂಗ್ಲಿಷ್ ಭಾಷೆಯನ್ನು ಇಂಗ್ಲೆಂಡಿನ ವಸಾಹತು ದೇಶಗಳ ಮೇಲೆ ಹೇರಲು ಷೇಕ್ಸ್‌ಪಿಯರ್‌ನ ಕೀರ್ತಿಯನ್ನು



ಬಂಡವಾಳ ಮಾಡಿಕೊಂಡಿದ್ದು ಚಾರಿತ್ರಿಕ ವ್ಯಂಗವೇ ಸರಿ. ಷೇಕ್ಸ್‌ಪಿಯರ್ ಕಾಳಿದಾಸನಷ್ಟೆ ಮಹತ್ವದ ನಾಟಕಕಾರ. ಪಾಶ್ಚಿಮಾತ್ಯನಾದ ಷೇಕ್ಸ್‌ಪಿಯರ್ ಲೌಕಿಕ ದೃಷ್ಟಿಕೋನದ ವಾಸ್ತವವಾದಿ. ಅವನ ಕಲಾವಂತಿಕೆ ರೌದ್ರ-ಬೀಭತ್ಸಗಳನ್ನು ಕಡೆಯುವ ದುರಂತ ನಾಟಕಗಳಲ್ಲಿ ಪ್ರಜ್ವಲಿಸಿತು. ಕಾಳಿದಾಸ ಪೌರ್ವಾತ್ಯ. ಅವನದು ಆದರ್ಶವಾದಿ ಅಲೌಕಿಕ ದೃಷ್ಟಿಕೋನ. ಅವನ ಕಲ್ಪನಾವಿಲಾಸವು ದುರಂತದ ಕಮರಿಯನ್ನು ದಾಟಿಸಿ ಸುಖಾಂತದ ಹಿಮಶಿಖರಗಳಿಗೆ ಕರೆತಂದು ಶಾಂತ ಕರುಣ ರಸಗಳ ಪ್ರಶಾಂತ ಸರೋವರದಲ್ಲಿ ಮೀಯಿಸುವಂಥದ್ದು. ವಾಸ್ತವವಾದ ತನ್ನ ಆತ್ಯಂತಿಕ ಸ್ವರೂಪದಲ್ಲಿ ನಿರಾಶಾವಾದಕ್ಕೆ ಹತ್ತಿರವಾದರೆ, ಆದರ್ಶವಾದ ಆಶಾವಾದಕ್ಕೆ ಹತ್ತಿರವಾಗಿರುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಕಾಳಿದಾಸನನ್ನು ಇಂಡಿಯನ್ ಷೇಕ್ಸ್‌ಪಿಯರ್ ಎನ್ನುವುದು, ಷೇಕ್ಸ್‌ಪಿಯರ್‌ನನ್ನು ಇಂಗ್ಲಿಷ್ ಅಥವಾ ಯುರೋಪಿಯನ್ ಕಾಳಿದಾಸ ಎನ್ನುವುದು ಎರಡೂ ಪ್ರಾರೋಪಿಯಲ್ಲಾಗಿ, ಸಂಕುಚಿತ ರಾಷ್ಟ್ರೀಯ ನಿಲುವಾಗಿ ಕಾಣುತ್ತದೆ. ಅವರಿಬ್ಬರನ್ನೂ ಕೇವಲ ಅವರ ಹೆಸರಿನಿಂದ ಗುರ್ತಿಸುವುದೆ ಅವರಿಗೆ ನಾವು ತೋರಿಸಬಹುದಾದ ನಿಜವಾದ ಗೌರವ ಎನ್ನಬಹುದು. ಓರಿಯಂಟಲ್ ಇಥೋಸ್‌ನ ಸಾಕಾರರೂಪವಾದ ಕಾಳಿದಾಸ ಮತ್ತು ಆಕ್ಸಿಡೆಂಟಲ್ ಇಥೋಸ್ ಮೂರ್ತಿವೆತ್ತಂಥ ಷೇಕ್ಸ್‌ಪಿಯರ್ ಇಬ್ಬರೂ ಮನುಕುಲದ ಕಥೆಯ ಎರಡು ವಿಭಿನ್ನವಾದ, ವೈಶಿಷ್ಟ್ಯಪೂರ್ಣವಾದ ಮಗ್ಗುಲುಗಳನ್ನು ಚಿತ್ರಿಸಿದ್ದಾರೆ ಎಂಬುದು ಸದಾ ನಮ್ಮ ನೆನಪಿನಲ್ಲಿರಬೇಕು.

ಎಲಿಜಬೆತನ್ ರಂಗಭೂಮಿಯಲ್ಲಿ ವಸ್ತ್ರಾಲಂಕಾರಕ್ಕೆ ಪ್ರಾಶಸ್ತ್ಯವಿತ್ತು. ಆದರೆ ದೃಶ್ಯಾವಳಿಗಳಿಗೆ ಆಸ್ಪದವೇ ಇರಲಿಲ್ಲ. ಪ್ರೇಕ್ಷಕರ ಕಲ್ಪನೆಯನ್ನು ಉದ್ದೀಪಿಸುವಂಥ ವರ್ಣನಾತ್ಮಕ, ಕಾವ್ಯಾತ್ಮಕ ಸಂಭಾಷಣೆ ಮತ್ತು ಸ್ವಗತಗಳನ್ನು ಬಳಸಬೇಕಾಗಿ ಬಂದುದರಿಂದ ಷೇಕ್ಸ್‌ಪಿಯರ್‌ನ ನಾಟಕಗಳು ಒಟ್ಟೊಟ್ಟಿಗೆ ದೃಶ್ಯಕಾವ್ಯಗಳೂ ಶ್ರವ್ಯಕಾವ್ಯಗಳೂ ಆಗಿ ರೂಪಗೊಂಡವು. ರಂಗದ ಮೇಲೆ ಅದ್ಭುತ ನಾಟಕೀಯ ಘಟನಾವಳಿಯನ್ನು ಸೃಷ್ಟಿಸುವುದರಲ್ಲಿ ಷೇಕ್ಸ್‌ಪಿಯರ್ ಎತ್ತಿದ ಕೈ. 'ಮ್ಯಾಕ್‌ಬೆತ್'ನಲ್ಲಿ ಮಾಟಗಾತಿಯರು ಹಂಡೆಯಲ್ಲಿ ಪೈಶಾಚಿಕ ಕಿಚಡಿ ಬೇಯಿಸುತ್ತ ಮಾಯದ ಹಬೆ ಎಬ್ಬಿಸುತ್ತ ಮ್ಯಾಕ್‌ಬೆತ್‌ನ, ಬ್ಯಾಂಕೋನ ಭವಿಷ್ಯ ಹೇಳುವ ದೃಶ್ಯ ; 'ಒಥೆಲ್ಲೋ'ದಲ್ಲಿ ಒಥೆಲ್ಲೊ ತನ್ನ ಹೂವಿನಂಥ ಹೆಂಡತಿ ಡೆಸ್ಡಿಮೋನಾಳನ್ನು ಮಲಗು ಮನೆಯಲ್ಲೇ ಕತ್ತು ಹಿಸುಕಿ ಕೊಲ್ಲುವ ದೃಶ್ಯ ; 'ಹ್ಯಾಮ್‌ಲೆಟ್'ನಲ್ಲಿ ಹಾಮ್‌ಲೆಟ್‌ನ ಕೊಲೆಯಾದ ಅಪ್ಪ ಕೋಟೆಗೋಡೆಯ ಬಳಿ ಪ್ರೇತರೂಪದಲ್ಲಿ ಕಾಣಿಸಿಕೊಂಡು ಸಂಜ್ಞೆ ಮಾಡುವ ದೃಶ್ಯ ; 'ಕಿಂಗ್ ಲಿಯರ್'ನಲ್ಲಿ ಕಿಂಗ್ ಲಿಯರ್ ಹುಚ್ಚು ಹಿಡಿದು ಬಿರುಗಾಳಿಯ ಬಯಲಲ್ಲಿ ಅಲೆಯುತ್ತ ಆಕಾಶ ನೀರು ಗಾಳಿಗಳನ್ನು ಆವಾಹಿಸಿ ಸರ್ವನಾಶಮಾಡಿರೆಂದು ಕೇಳಿಕೊಳ್ಳುವ ದೃಶ್ಯ; 'ಟೆಂಪೆಸ್ಟ್'ನಲ್ಲಿ ಮದುವೆಯ ಔತಣದಲ್ಲಿ ಮಾಯಾಮಂತ್ರ ನಡೆಯುವ ದೃಶ್ಯ; 'ಎ ಮಿಡ್ ಸಮರ್ ನೈಟ್ಸ್ ಡ್ರೀಮ್'ನಲ್ಲಿ ಬಾಟಮ್ ಕತ್ತೆ ರೂಪ ಪಡೆದು ಗಂಧರ್ವರಾಣಿ ಟೈಟಾನಿಯಾಳನ್ನು ಹೊಗಳುವುದನ್ನು ನೋಡಿ ಗಂಧರ್ವರಾಜ ಒಬೆರಾನ್ ನಗುವ ದೃಶ್ಯ ; 'ಮರ್ಚೆಂಟ್ ಆಫ್ ವೆನಿಸ್'ನಲ್ಲಿ ಷೈಲಾಕ್ ಕೋರ್ಟಿನಲ್ಲಿ ಆ್ಯಂಟೋನಿಯೋನ ದೇಹದಿಂದ ಒಂದು ಪೌಂಡ್ ಮಾಂಸ ಕಿತ್ತುಕೊಳ್ಳಲು ಮುಂದಾದಾಗ ವಕೀಲವೇಷದಲ್ಲಿ ಬಂದ ಪೋರ್ಷಿಯ ಅವನ ಬಾಯಿಕಟ್ಟಿಸುವ ದೃಶ್ಯ – ಇವೆಲ್ಲ ಮರೆಯಲಾಗದ ಘಟನಾವಳಿಗಳು. ನಟರ ಅಭಿನಯ ಸಾಕಷ್ಟು ಶೈಲೀಕೃತವಾಗಿರುತ್ತಿತ್ತು. ಹೆಣ್ಣು ಪಾತ್ರಗಳನ್ನು ಗಂಡಸರೇ ಮಾಡುತ್ತಿದ್ದರಿಂದ ಆಗಿನ್ನೂ ನಟಿಯರು ರಂಗಭೂಮಿಗೆ ಕಾಲಿಟ್ಟಿರಲಿಲ್ಲ. ನಟರ ಅಭಿನಯದಲ್ಲೂ ಆಂಗಿಕ ಅಭಿವ್ಯಕ್ತಿ, ಮುಖಭಾವಗಳಿಗಿಂತ ಡೈಲಾಗ್ ಡೆಲಿವರಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗುತ್ತಿತ್ತು.

ಮಾರ್ಲೋ, ಬೆನ್ ಜಾನ್‌ಸನ್, ಬ್ಯೂಮಾಂಟ್, ಫ್ಲೆಚರ್ ಮುಂತಾದವರು ಷೇಕ್ಸ್‌ಪಿಯರ್‌ನ ಸಮಕಾಲೀನರು ಹಾಗೂ ನಾಟಕಕಾರರಾಗಿ ಅವನ ಪ್ರತಿಸ್ಪರ್ಧಿಗಳಾಗಿದ್ದವರು. ಆದರೆ ಅವರು ಯಾರೂ ಅವನ ಪ್ರತಿಭೆಯ ಮಟ್ಟಕ್ಕೆ ಏರಲಿಲ್ಲ. ಷೇಕ್ಸ್‌ಪಿಯರ್‌ನನ್ನು ಪ್ರತಿಸ್ಪರ್ಧಿಯೆಂದು ಬಗೆದ ಮತ್ತೊಬ್ಬ ನಾಟಕಕಾರನೆಂದರೆ ಮೂರು ಶತಮಾನಗಳ ನಂತರ ಬಂದ ಜಾರ್ಜ್ ಬರ್ನಾರ್ಡ್ ಷಾ. ಆದರೆ ಅವನು ಕೂಡ ಷೇಕ್ಸ್‌ಪಿಯರ್‌ನ ಸಿದ್ಧಿ ಮತ್ತು ಪ್ರಸಿದ್ಧಿಯ ಮಟ್ಟಕ್ಕೆ ಮುಟ್ಟಲಿಲ್ಲ. ಷೇಕ್ಸ್‌ಪಿಯರ್‌ನ ಅತ್ಯಂತ ವೈವಿಧ್ಯಮಯವಾದ ಪಾತ್ರ ಚಿತ್ರಣದ ಶಕ್ತಿ, ವಿಧವಿಧವಾದ ಭಾವನೆಗಳ ತಾಕಲಾಟದ ಅಭಿವ್ಯಕ್ತಿ, ಅದ್ಭುತ ಶಬ್ದ ಸಂಪತ್ತು ಇವು ಯಾವುವೂ ಅವರಲ್ಲಿ ಕಾಣಬರುವುದಿಲ್ಲ. ಅಷ್ಟೇ ಅಲ್ಲದೆ, ಷೇಕ್ಸ್‌ಪಿಯರ್‌ನ ನಾಟಕಗಳು ಇತ್ತ ಓದಿ ಆಸ್ವಾದಿಸಬಹುದಾದ ಕಾವ್ಯಾತ್ಮಕ ನಾಟಕಗಳೂ ಆಗಿವೆ; ಅತ್ತ ನೋಡಿ ಆನಂದಿಸಬಹುದಾದ ರಂಗಕೃತಿಗಳೂ ಆಗಿವೆ. ಇಪ್ಪತ್ತನೆ ಶತಮಾನದ ಜರ್ಮನ್ ನಾಟಕಕಾರ ಬ್ರೆಕ್ಟ್‌ನನ್ನು ಮಾತ್ರ ಷೇಕ್ಸ್‌ಪಿಯರ್‌ನಷ್ಟೆ ಎತ್ತರ ಮಟ್ಟದ ನಾಟಕಕಾರನೆಂದು ಗುರ್ತಿಸಲಾಗುತ್ತಿದೆ. ಇವರಿಬ್ಬರ ನಾಟಕಗಳೂ ಅದ್ಭುತ ರಂಗಸಾಧ್ಯತೆಯನ್ನು ಹೊಂದಿದ್ದು ನಿರ್ದೇಶಕರಿಗೆ ಸೃಜನಶೀಲ ಸವಾಲುಗಳನ್ನು ಒಡ್ಡುತ್ತವೆ. ಅಲ್ಲದೆ ಓದುಗರನ್ನು ನೋಡುಗರನ್ನು ಆಳವಾದ ಮಾನವತಾವಾದಿ ಚಿಂತನೆಗೆ ಹಚ್ಚುತ್ತವೆ.

ಗ್ರೀಕ್ ದುರಂತ ನಾಟಕಗಳಲ್ಲಿ ನಾಯಕ-ನಾಯಕಿ ಪಾತ್ರಗಳು ವಿಧಿಯ ಕೈಗೊಂಬೆಗಳಾಗಿ ಪ್ರಸಂಗದ ವ್ಯಂಗ್ಯಕ್ಕೆ ಬಲಿಯಾಗುತ್ತವೆ. ಆದರೆ ಷೇಕ್ಸ್‌ಪಿಯರ್‌ನ ದುರಂತನಾಯಕ-ನಾಯಕಿಯರು ತಮ್ಮ ವ್ಯಕ್ತಿತ್ವದಲ್ಲಿನ ಬಿರುಕಿನಿಂದಾಗಿ, ವೈಯಕ್ತಿಕ ದೋಷದಿಂದಾಗಿ ಪತನ ಹೊಂದುತ್ತಾರೆ. ಗ್ರೀಕ್ ನಾಟಕ ಅಸ್ತಿತ್ವಕ್ಕೆ ಬಂದ ಕಾಲದಲ್ಲಿ ದೇವತೆಗಳು ಮನುಷ್ಯರನ್ನು ಸೂತ್ರದ ಗೊಂಬೆಗಳಂತೆ ಆಡಿಸುತ್ತಾರೆ ಎಂಬ ನಂಬಿಕೆ ಜನಜನಿತವಾಗಿತ್ತು. ಷೇಕ್ಸ್‌ಪಿಯರ್ ನಾಟಕ ರಚಿಸಿದ್ದು ೧೬ನೇ ಶತಮಾನದ ಯುರೋಪಿನ ಸಾಂಸ್ಕೃತಿಕ ಕೇಂದ್ರವಾಗಿದ್ದ ಇಂಗ್ಲೆಂಡಿನಲ್ಲಿ. ಆಗಷ್ಟೆ ಹೊಸ ಜಲಮಾರ್ಗಗಳ, ಹೊಸ ಭೂಖಂಡಗಳ ಶೋಧನೆಯಾಗಿತ್ತು. ಮಾನವ ಪೃಥ್ವಿಯ ಕೇಂದ್ರ ಎಂಬ ಘೋಷಣೆ ಮನುಷ್ಯನ ವೈಜ್ಞಾನಿಕ ಚಿಂತನೆಯನ್ನು ಹರಿತಗೊಳಿಸಿತು. ಬದುಕನ್ನು ಕುರಿತ ದೃಷ್ಟಿಕೋನದಲ್ಲಿ ಅಲೌಕಿಕತೆ ಮಾಯವಾಗಿ ಲೌಕಿಕತೆ ದಟ್ಟಯಿಸತೊಡಗಿತ್ತು. ಇವೆಲ್ಲದರಿಂದಾಗಿ ಹೊಸ ತಾತ್ವಿಕ ದರ್ಶನ ಪಡೆದುಕೊಂಡ ಷೇಕ್ಸ್‌ಪಿಯರ್ ತನ್ನ ದುರಂತ ಪಾತ್ರಗಳು ತಮ್ಮ ಕೃತ್ಯಗಳಿಗೆ ತಾವೇ ಜವಾಬ್ದಾರರಾಗುವಂತೆ ಮಾಡಿದ. ತಾವು ಮಾಡಿದ್ದರ ಫಲವನ್ನು ತಾವೆ ಉಣ್ಣುವಂತೆ ಮಾಡಿದ. ಈ ದೃಷ್ಟಿಯಿಂದ ಅವನ ಕಲೆಯನ್ನು ಪ್ರಜ್ಞಾಪೂರ್ವಕ ಕಲೆ ಎನ್ನಬಹುದಾಗಿದೆ. ಅವನ ತಾತ್ವಿಕತೆ, ವ್ಯಕ್ತಿವಾದಿ ಸಿದ್ಧಾಂತಕ್ಕೆ ಹತ್ತಿರವಾಗಿದೆ. ಇದೆಲ್ಲ ಒಂದು ಹೊಸ ಯುಗಧರ್ಮದ ಅಭಿವ್ಯಕ್ತಿ ಎನ್ನಬಹುದಾಗಿದೆ. ಗ್ರೀಕ್ ನಾಟಕದ ಕೋರಸ್ (ಮೇಳ) ಸಮಾಜದ ಸಮಷ್ಟಿಯ ಅಭಿಪ್ರಾಯ, ಅನಿಸಿಕೆಗಳ ಪ್ರತೀಕವಾದರೆ, ಷೇಕ್ಸ್‌ಪಿಯರ್ ನಾಟಕದ ಸಾಲಿಲೋಕ್ವಿ (ಸ್ವಗತ) ವ್ಯಷ್ಟಿಯ ಅಂತರಂಗದ ಮೊರೆಯನ್ನು ಸಂಕೇತಿಸುತ್ತದೆ. ಅರಿಸ್ಟಾಟಲ್ ಹೇಳುವಂತೆ ಗ್ರೀಕ್ ನಾಟಕದ ಹಲವಾರು ಶಿಖರ ಪ್ರಸಂಗಗಳಲ್ಲಿ ದೇವತೆಗಳು ಪ್ರತ್ಯಕ್ಷರಾಗಿ, ಸಮಸ್ಯೆಯನ್ನು ಬಿಡಿಸುತ್ತಾರೆ. ಇಲ್ಲವೆ ಪರೋಕ್ಷವಾಗಿ ಪರಿಹಾರ ಸೂಚಿಸುತ್ತಾರೆ. ಷೇಕ್ಸ್‌ಪಿಯರ್‌ನ ದುರಂತ ನಾಟಕದ ನಾಯಕರು ತಮ್ಮ ಅಪರಾಧದ ಜವಾಬ್ದಾರಿಯನ್ನು ತಾವೇ ಹೊತ್ತುಕೊಂಡು ಪ್ರಲಾಪಿಸುತ್ತಾರೆ, ಶಿಕ್ಷೆ ಅನುಭವಿಸುತ್ತಾರೆ. ಪ್ರಾಚೀನ ಕಾಲದಲ್ಲಿ ನಾಟಕ ಧಾರ್ಮಿಕ ಆಚರಣೆಯ ಒಂದು ಪ್ರಮುಖ ಅಂಗವಾಗಿತ್ತು. ದೇವತೆಗಳ, ಹಿರಿಯರ ಅಥವಾ ದುಷ್ಟ ಶಕ್ತಿಗಳ ಮುಖವಾಡ ಧರಿಸಿ ಪಾತ್ರಧಾರಿಗಳು ಉತ್ಸವದಲ್ಲಿ ಪಾಲ್ಗೊಳ್ಳುತ್ತಿದ್ದರು. ನಂತರ ರಂಗದ ಮೇಲೆ ಕಾಣಿಸಿಕೊಳ್ಳುತ್ತಿದ್ದರು. ಗ್ರೀಕ್ ನಾಟಕ, ಜಪಾನಿನ ನೋ ನಾಟಕ, ಕರ್ನಾಟಕದ ಯಕ್ಷಗಾನಗಳಲ್ಲಿ ಮುಖವಾಡಗಳು ಬಳಕೆಯಾಗುತ್ತಾ ಬಂದಿರುವುದು ಆ ಪ್ರಾಚೀನ ಆಚರಣೆಯ ಪಳೆಯುಳಿಕೆ ಎನ್ನಬಹುದು. ರೆನೇಸಾನ್ಸ್ ಕಾಲದ ಯುರೋಪಿನಲ್ಲಿದ್ದ ಷೇಕ್ಸ್‌ಪಿಯರ್ ಮಾನವತಾವಾದಕ್ಕೆ ಒತ್ತುಕೊಟ್ಟ. ಮನುಷ್ಯನ ಲೌಕಿಕ ವ್ಯಕ್ತಿತ್ವ, ಅವನ ವೈಯಕ್ತಿಕ ಅನುಭವ, ಭಾವನೆಗಳು, ಒಳತೋಟಿ ಇವುಗಳಿಗೆ ಭೂತಗನ್ನಡಿ ಹಿಡಿದು ತೋರಿಸಿದ.

## ಬಣ್ಣ



ಗಿಡಮರಗಳಿಗೆ
ಭೂಮಿ ತಾಯಿ ನೀಡುವ
ಬಣ್ಣಗಳೆಷ್ಟೋ....

ಜನಗಳು
ತಮ್ಮ ಬಣ್ಣಗಳೊಂದಿಗೆ
ಕಿತ್ತಾಡುವುದೆಷ್ಟೋ....

ಆಂದನೂರು ಶೋಭ
ಬೆಂಗಳೂರು - ೫೬೦ ೦೦೦

ಇದರಿಂದಾಗಿ ಮುಖಭಾವದ ಅಭಿವ್ಯಕ್ತಿಗೆ ಅಷ್ಟಿಷ್ಟು ಬೆಲೆ ಸಿಕ್ಕು ಮುಖವಾಡಗಳು ಮರೆಯಾದವು.

ಗ್ರೀಕ್ ನಾಟಕದಲ್ಲಿ ಕಂಡುಬರುವ ಕೃಥಾರ್ಸಿಸ್ - ಪರ್ಗೇಶನ್ (ಶುದ್ಧೀಕರಣ) ಮತ್ತು ಅದರ ತಳಹದಿಯಾದ ನೈತಿಕತೆಯ ಜಿಜ್ಞಾಸೆ ಷೇಕ್ಸ್‌ಪಿಯರ್‌ಗೆ ಅಷ್ಟು ಮುಖ್ಯವಾಗುವುದಿಲ್ಲ. ಅದಕ್ಕೆಂದೆ ಅವನು ಪಾತ್ರಗಳ ಮನಸ್ಸಿನಾಳದಲ್ಲಿರುವ ಟ್ರ್ಯಾಜಿಕ್-ಫ್ಲಾ (ದುರಂತದ ಬೀಜ) ವನ್ನು ಎತ್ತಿ ಹಿಡಿಯುತ್ತಾನೆ. ಕೆಡುಕಿನ ಪ್ರಶ್ನೆಯನ್ನು ಬಿಡಿಸುವಲ್ಲಿ ಷೇಕ್ಸ್‌ಪಿಯರ್ ಹೊಸಯುಗದ ಆಧುನಿಕ ಪ್ರಜ್ಞೆಯನ್ನು ಮೆರೆದಿದ್ದಾನೆ. ಸ್ವರ್ಗ-ನರಕ, ಪಾಪ-ಪುಣ್ಯಗಳ ಸರಳೀಕೃತ ಕಲ್ಪನೆಯನ್ನು ಕೈಬಿಟ್ಟು ಮನುಷ್ಯನ ಸುಖದುಃಖಗಳಿಗೆ ಮನುಷ್ಯನೇ ಕಾರಣ ಎಂಬ ವಾಸ್ತವವಾದಿ ನಿಲುವನ್ನು ಎತ್ತಿ ಹಿಡಿದಿದ್ದಾನೆ. ಮನುಷ್ಯನ ಗತದ ಕ್ರಿಯೆಗೂ ವರ್ತಮಾನದ ಬದುಕಿಗೂ, ವರ್ತಮಾನದ ಕ್ರಿಯೆಗೂ ಭವಿಷ್ಯತ್ತಿನ ಆಗುಹೋಗುಗಳಿಗೂ ಕಾರ್ಯಕಾರಣ ಸಂಬಂಧವಿರುತ್ತದೆ ಎಂಬುದನ್ನು ಧ್ವನಿಸಿದ್ದಾನೆ. ದೇವರ ಮೇಲೆ ನಂಬಿಕೆ ಕಳೆದುಕೊಂಡ ಮನುಷ್ಯ ತನ್ನ ನೈತಿಕ ಅಧಃಪತನಕ್ಕೆ ತನ್ನನ್ನೇ ಹೊಣೆಗಾರನನ್ನಾಗಿಸಿ ಕೊಳ್ಳುವಂತೆ ಮಾಡುವ ಮೂಲಕ ಷೇಕ್ಸ್‌ಪಿಯರ್ ತನ್ನ ಸಮಕಾಲೀನ ಸಮಾಜದಲ್ಲಿ ಉಂಟಾದ ಮೌಲ್ಯಪಲ್ಲಟವನ್ನು ಗುರ್ತಿಸಿದ್ದಾನೆ.

ಮ್ಯಾಕ್‌ಬೆತ್ ಹೇಳುವ –

'They have tied me to a stake; I cannot fly,

but bear-like I must fight the course.'

ಎಂಬ ಮಾತು ಇಡೀ ಮಾಡರ್ನಿಸಂನ ಒಟ್ಟು ಧ್ವನಿಯಂತೆ ಕೇಳಿಸುತ್ತದೆ. ಆಧುನಿಕ ಮನಶ್ಶಾಸ್ತ್ರದ ಬೇರುಗಳು, ನವ್ಯತೆಯ ತಲ್ಲಣಗಳು ಇದರಲ್ಲಿ ಅಡಗಿವೆ. ಈ ದೃಷ್ಟಿಯಿಂದ ನೋಡಿದಾಗ ಅನಾಥ ಪ್ರಜ್ಞೆ, ಪರಕೀಯ ಪ್ರಜ್ಞೆ, ಅಸ್ತಿತ್ವವಾದ, ಅಸಂಗತತೆ, ಸರ್ರಿಯಲಿಸಂ ಮುಂತಾದ ಎಲ್ಲ ಆಧುನಿಕ ಕಲಾತತ್ವಗಳಿಗೂ ಷೇಕ್ಸ್‌ಪಿಯರ್‌ನ ತಾತ್ವಿಕತೆಯೇ ಮೂಲ ಆಕರವಲ್ಲವೇ ಎನಿಸುತ್ತದೆ.

ಷೇಕ್ಸ್‌ಪಿಯರ್ ರಾಜಪ್ರಭುತ್ವದಲ್ಲಿ ನಂಬಿಕೆಯಿದ್ದ ಒಬ್ಬ ರಾಯಲಿಸ್ಟ್ ಆಗಿದ್ದ. ರಾಜವೈಭವ, ಪ್ರಭುಶಕ್ತಿ, ರಾಜಭಕ್ತಿ, ರಾಷ್ಟ್ರಾಭಿಮಾನ ಇವುಗಳಲ್ಲಿ ಅವನಿಗೆ ಅಪಾರ ನಂಬಿಕೆ, ಗೌರವ ಎರಡೂ ಇತ್ತು. ಇವುಗಳನ್ನು ಕಾಪಾಡಿಕೊಂಡರೆ ಮಾತ್ರ ರಾಜ್ಯದಲ್ಲಿ ಸುಭಿಕ್ಷ, ಸುವ್ಯವಸ್ಥೆ ಇರಬಲ್ಲದು ಎಂಬುದು ಅವನ ಪ್ರಾಮಾಣಿಕ ತಿಳುವಳಿಕೆಯಾಗಿತ್ತು. ರಾಜ ದೇವರ ಪ್ರತಿನಿಧಿ, ಅವನೇ ಸಾಮಾಜಿಕ ನೆಮ್ಮದಿಯ ಪಾಲಕ, ಆರ್ಥಿಕ ವ್ಯವಸ್ಥೆಯ ಕಾರಣಕರ್ತ, ಸಂಸ್ಕೃತಿ ರಕ್ಷಕ ಎಂಬ ನಂಬಿಕೆ ಇನ್ನೂ ಬಲವಾಗಿ ಬೇರೂರಿದ್ದ ಯುಗ ಅದು. ಆದಾಗ್ಯೂ ಷೇಕ್ಸ್‌ಪಿಯರ್, ಒಂದು ಕಡೆ ವಿಶ್ವವ್ಯವಸ್ಥೆಗೆ ದೇವರೆ ಕೇಂದ್ರವಾಗಿರುವಂತೆ ರಾಜ್ಯ ವ್ಯವಸ್ಥೆಗೆ ರಾಜನೇ ಕೇಂದ್ರ ಎಂದು ಪ್ರತಿಪಾದಿಸುತ್ತಲೇ ಇನ್ನೊಂದು ಕಡೆ ಮನುಷ್ಯನೇ ಈ ಜಗತ್ತಿನ ಒಡೆಯ, ಅವನ ವೈಯಕ್ತಿಕ ಚಿಂತನೆ, ಭಾವನೆಗಳೇ ಬದುಕಿನ ಒಳಿತು-ಕೆಡುಕುಗಳಿಗೆ ಕಾರಣ ಎಂದು ಪ್ರತಿಪಾದಿಸುತ್ತಾನೆ. ಪ್ರಜೆಗಳು ರಾಜ್ಯ ವ್ಯವಸ್ಥೆಗೆ ಬದ್ಧರಾಗಬೇಕು ಎನ್ನುತ್ತಲೆ ಬಂಡಾಯಗಾರರ ವ್ಯಕ್ತಿ ಸ್ವಾತಂತ್ರ್ಯವನ್ನು ಎತ್ತಿಹಿಡಿಯುತ್ತಾನೆ. ಮಾಟ-ಮಂತ್ರ, ದೆವ್ವ-ಭೂತಗಳನ್ನು ಮೂದಲಿಸುತ್ತಲೆ ಅವು ಅರಮನೆಯ ಅಧಿಕಾರವಲಯದಲ್ಲಿ ಬೀರುವ ಪ್ರಭಾವವನ್ನು ಚಿತ್ರವತ್ತಾಗಿ ಕಣ್ಣಿಗೆ ಕಟ್ಟುವಂತೆ ಕಾಣಿಸುತ್ತಾನೆ. ಈ ಎಲ್ಲ ವೈರುಧ್ಯಗಳು ಹದಿನಾರನೆ ಶತಮಾನದಲ್ಲಾಗುತ್ತಿದ್ದ ಭಾರಿ ಬೆಳವಣಿಗೆಗಳ ಫಲಶ್ರುತಿಗಳು ; ಲೋಕದೃಷ್ಟಿಯಲ್ಲಿ ಉಂಟಾಗಿದ್ದ ಪಲ್ಲಟದ ಪರಿಣಾಮಗಳು. ಬದುಕನ್ನು ಸಮಗ್ರವಾಗಿ ಗ್ರಹಿಸಲು ಹೊರಡುವ ದೈತ್ಯ ಪ್ರತಿಭೆಯ ಕಲಾವಿದರಿಗೆ ಇಂಥ ವೈರುಧ್ಯಗಳು ಅತ್ಯಂತ ಸಹಜವೂ ಅನಿವಾರ್ಯವೂ ಆಗಿರುತ್ತವೆ.

ಷೇಕ್ಸ್‌ಪಿಯರ್‌ನ ಸಾನೆಟ್‌ಗಳೂ ಅವನ ನಾಟಕಗಳಷ್ಟೇ ಪ್ರಸಿದ್ಧವಾಗಿವೆ. ಅವನ ೧೫೪ ಸಾನೆಟ್‌ಗಳನ್ನು ಎರಡು ಗುಂಪುಗಳಾಗಿ ವಿಭಾಗಿಸಿದ್ದಾರೆ. ಮೊದಲನೆಯ ೧೨೬ ಸಾನೆಟ್‌ಗಳು ಅವನ ಪ್ರೀತಿ ಗೌರವ ಅಭಿಮಾನಗಳಿಗೆ ಪಾತ್ರನಾಗಿದ್ದ ಒಬ್ಬ ಅನಾಮಿಕ ಗೆಳೆಯನನ್ನು ಕುರಿತು ಹೇಳುತ್ತವೆ (ಈ ಗೆಳೆಯ ಲಾರ್ಡ್ ಸೌತ್‌ಆ್ಯಂಪ್ಟನ್ ಎಂದು ಹಲವಾರು ವಿಮರ್ಶಕರ ಅಭಿಪ್ರಾಯ). ಉಳಿದವು ಒಬ್ಬ ನಿಗೂಢ ಕಪ್ಪು ಸುಂದರಿಯನ್ನು ಕುರಿತಿವೆ. ಈ ಅನಾಮಿಕ ಗೆಳೆಯನ ಸ್ನೇಹಪೂರ್ಣ ವ್ಯಕ್ತಿತ್ವ ಮತ್ತು ಆ ಕಪ್ಪುಸುಂದರಿಯ ಆಕರ್ಷಕ ಸೌಂದರ್ಯ, ಅವುಗಳ ಅನಿಶ್ಚಿತತೆ-ಅಶಾಶ್ವತತೆ ಇವು ಷೇಕ್ಸ್‌ಪಿಯರ್‌ನ ಸಾನೆಟ್ಟುಗಳ ಮುಖ್ಯ ಮೂಲವಸ್ತು ಎನ್ನಬಹುದು. ಈ ಇಬ್ಬರು ತೆರೆಮರೆಯ ಪಾತ್ರಗಳನ್ನು ನೆಪ ಮಾಡಿಕೊಂಡು ಷೇಕ್ಸ್‌ಪಿಯರ್ ಕಾಲ-ಕಾಲಾತೀತತೆ, ಬದುಕು-ಸಾವು, ಕೀರ್ತಿ-ಅಪಕೀರ್ತಿ, ಚೆಲುವು-ವಿಕಾರ, ಸ್ನೇಹ-ಶತ್ರುತ್ವ, ಕಾವ್ಯತತ್ವ, ಕಲಾಸೃಷ್ಟಿ ಇವುಗಳ ಬಗ್ಗೆ ಚಿಂತನೆ ಮಾಡುತ್ತಾನೆ. ಸಾನೆಟ್ ಎಂಬುದು ಹದಿನಾಲ್ಕು ಸಾಲುಗಳ ಮಾಟವಾದ, ಬಿಗಿಯಾದ ಕವಿತೆ. ಇಂಗ್ಲಿಷ್ ಸಾನೆಟ್‌ಗಳೆಲ್ಲ ಸಾಮಾನ್ಯವಾಗಿ ಅಯಾಂಬಿಕ್ ಪೆಂಟಾಮೀಟರ್ಸ್ ಛಂದಸ್ಸಿನಲ್ಲಿರುತ್ತವೆ. ಷೇಕ್ಸ್‌ಪಿಯರ್‌ನ ಸಾನೆಟ್‌ಗಳು abab-cdcd-efef-gg ಎಂಬ ಪ್ರಾಸವ್ಯವಸ್ಥೆ ಪಡೆದಿದ್ದು ಮೂರು ಚೌಪದಿಗಳು ಹಾಗೂ ಒಂದು ದ್ವಿಪದಿಯನ್ನು ಒಳಗೊಂಡಿರುತ್ತವೆ. ಕೊನೆಯಲ್ಲಿರುವ ಈ ದ್ವಿಪದಿ ಇಡೀ ಕವಿತೆಯ ಸಾರಾಂಶವನ್ನು ಅಥವಾ ವಸ್ತುವನ್ನು ಕುರಿತ ವ್ಯಾಖ್ಯಾನವನ್ನು ಕಟ್ಟಿಕೊಡುತ್ತದೆ. (ಇಟ್ಯಾಲಿಯನ್ ಅಥವಾ ಪೆಟ್ರಾರ್ಕನ್ ಸಾನೆಟ್‌ಗಳು ಎಂಟು ಸಾಲುಗಳ ಆಕ್ಟೇವ್ ಮತ್ತು ಆರು ಸಾಲುಗಳ ಸೆಸ್ಟೆಟ್ ಎಂಬ ಎರಡು ಭಾಗಗಳನ್ನು ಹೊಂದಿರುತ್ತವೆ. ಮೊದಲ ಭಾಗ ವಿಷಯವನ್ನು, ಸಮಸ್ಯೆಯನ್ನು ಮುಂದಿಟ್ಟರೆ ಎರಡನೆ ಭಾಗ ಅದಕ್ಕೆ ಭಾಷ್ಯವನ್ನು ನೀಡುತ್ತದೆ ಅಥವಾ ಪರಿಹಾರವನ್ನು ಸೂಚಿಸುತ್ತದೆ.)

ಮುಂದಿನ ಬಹಳಷ್ಟು ಕವಿಗಳು ಸಾನೆಟ್ ಪ್ರಕಾರವನ್ನು ಬಳಸಿದ್ದಾರೆ, ಬೆಳೆಸಿದ್ದಾರೆ. ಕಾವ್ಯದ ವಸ್ತುವನ್ನು ಗಂಭೀರವಾಗಿ, ಅಚ್ಚುಕಟ್ಟಾಗಿ, ಸಂಕ್ಷಿಪ್ತವಾಗಿ, ಮನಮುಟ್ಟುವಂತೆ ಹೇಳಲು ಸಾನೆಟ್ ಹೇಳಿ ಮಾಡಿಸಿದ ಕಾವ್ಯಪ್ರಕಾರ. ಹೀಗಾಗಿ ಕನ್ನಡ ಕವಿಗಳಲ್ಲೂ ಬಹಳ ಮಂದಿ ಸಾನೆಟ್‌ಗಳನ್ನು ಬರೆದಿದ್ದಾರೆ. ಕನ್ನಡದಲ್ಲಿ ಸಾನೆಟ್ಟನ್ನು ಸುನೀತ ಎಂಬ ಸುಂದರ ಹೆಸರಿನಿಂದ ಕರೆಯಲಾಗಿದೆ.

'ಇಂಗ್ಲಿಷ್ ಭಾಷೆಯ ಮೇಲೆ ಬೈಬಲಿನ ನಂತರ ಷೇಕ್ಸ್‌ಪಿಯರ್‌ನದು ಅತ್ಯಂತ ಮುಖ್ಯ ಪ್ರಭಾವ. ಬೇರಾವ ಬರಹಗಾರನೂ ಅವನಷ್ಟು ಪ್ರಮಾಣದಲ್ಲಿ ಭಾಷೆಗೆ ಪದಗಳನ್ನು ನೀಡಲಿಲ್ಲ. ಡಾಂಟ್‌ಲೆಸ್, ಇನ್‌ಕಾರ್ನಡೈನ್, ಅಜೈಲ್, ಅಸಾಸಿನೇಷನ್, ಕೆಟಾಸ್ಟ್ರಫಿ, ಕ್ರಿಟಿಕಲ್, ಡೆಮಾನ್‌ಸ್ಟ್ರೇಟ್, ಎಂಫಸಿಸ್, ಎಕ್ಸ್‌ಟ್ರ್ಯಾಕ್ಟ್, ಹಾರಿಡ್, ಲೋನ್ಲಿ, ಮಲ್ಟಿಟ್ಯೂಡಿನಸ್, ಮೆಡಿಟೇಟ್, ಮಾಡೆಸ್ಟ್, ಅಬ್ಸೀನ್ ಪ್ರಡಿಜಿಯಸ್, ರಿಲೈಯನ್ಸ್, ವಾಸ್ಟ್ ಎಲ್ಲ ಆತನ ಸಾಹಿತ್ಯದಿಂದ ಬಂದವೇ' ಎನ್ನುತ್ತಾರೆ ಪ್ರೊ॥ ಎಲ್. ಎಸ್. ಶೇಷಗಿರಿರಾಯರು ತಮ್ಮ 'ಇಂಗ್ಲಿಷ್ ಸಾಹಿತ್ಯ ಚರಿತ್ರೆ'ಯಲ್ಲಿ.

ಪುರಾಣ ಹಾಗೂ ಸಾಹಿತ್ಯದಲ್ಲಿ ಬರುವ ಸುಪ್ರಸಿದ್ಧ ಪಾತ್ರಗಳು ಕಾಲಕ್ರಮೇಣ ದಂತ ಕತೆಗಳಾಗಿ, ಉದಾಹರಣೆಗಳಾಗಿ, ನುಡಿಗಟ್ಟು (ಈಡಿಯಮ್) ಅಥವ ಗಾದೆ ಮಾತಾಗಿ (ಪ್ರಾವರ್ಬ್) ಜನಮನದಲ್ಲಿ ಉಳಿದುಬರುವುದನ್ನು ಚರಿತ್ರೆಯುದ್ದಕ್ಕೂ ನೋಡುತ್ತ ಬಂದಿದ್ದೇವೆ. ದೈನಂದಿನ ಸಂಭಾಷಣೆಯಲ್ಲಿ ಅಂಥವರು ಪದೇಪದೇ ಬಂದು ಹೋಗುತ್ತಾರೆ. ಸಮಾಜದ ತರಹೇವಾರಿ ಜನಗಳ ಮಾದರಿಗಳನ್ನು ವರ್ಗೀಕರಿಸಲು ಇದು ತುಂಬಾ ಸಹಾಯಕವಾಗುತ್ತದೆ. ಹೊಟ್ಟೆಬಾಕನಿಗೆ ಬಕಾಸುರ, ಶಕ್ತಿಶಾಲಿಗೆ ಭೀಮ ಎಂಬ ಅಡ್ಡಹೆಸರು ಬೀಳುತ್ತದೆ. ಅದೇ ರೀತಿ ಷೇಕ್ಸ್‌ಪಿಯರ್‌ನ ಪಾತ್ರಗಳೂ ಇಂತಹ ಜನಮನ್ನಣೆಗೆ ಪಾತ್ರವಾಗಿವೆ. ನಗೆಪಾಟಲಾದ ವ್ಯಕ್ತಿಗೆ ಫಾಲ್‌ಸ್ಟಾಫ್ ಎಂದು ; ಮಹಾಮೂರ್ಖನಂತೆ ವರ್ತಿಸುವವನಿಗೆ ಬಾಟಮ್ ಎಂದು; ಹಡಿ ಜುಗ್ಗನಿಗೆ ಷೈಲಾಕ್ ಎಂದು; ಹುಚ್ಚಪ್ರೇಮಿಗೆ ರೋಮಿಯೋ ಎಂದು; ದುರಂತನಾಯಕಿಗೆ ಕ್ಲಿಯೋಪಾತ್ರ ಎಂದು; ಟು ಬಿ ಆರ್ ನಾಟ್ ಟು ಬಿ ಎನ್ನುತ್ತ ಮೀನಾಮೇಷ ಎಣಿಸುವವನಿಗೆ ಹ್ಯಾಮ್‌ಲೆಟ್ ಎಂದು; ಸಂಶಯ ಪಿಶಾಚಿಯಾಗಿ, ಮತ್ಸರದಿಂದ ಹೆಂಡತಿಗೆ ಕಿರುಕುಳ ಕೊಡುವ ಅಥವಾ ಕೊಂದೇ ಹಾಕುವವನಿಗೆ ಒಥೆಲ್ಲೋ ಎಂದು; ಸಂಶಯ ಬಿತ್ತಿ ಒಂದು ಸಂಸಾರವನ್ನು ಹಾಳು ಮಾಡುವವನಿಗೆ ಅಯಾಗೊ ಎಂದು; ಆದರ್ಶದ ಹೆಸರಲ್ಲಿ ಮಿತ್ರದ್ರೋಹವೆಸಗುವವನಿಗೆ ಬ್ರೂಟಸ್ ಎಂದು; ಪ್ರಾಣಮಿತ್ರನಿಗೆ ಮಾರ್ಕ್ ಆ್ಯಂಟನಿ ಎಂದು; ಹಡೆದ ಮಕ್ಕಳ ಪ್ರೀತಿ ಮತ್ತು ನಟನೆ ಎರಡನ್ನೂ ಅಪಾರ್ಥ ಮಾಡಿಕೊಂಡು ಮೋಸಹೋಗುವ ಮುದುಕನಿಗೆ ಕಿಂಗ್ ಲಿಯರ್ ಎಂದು ಹೆಸರು ಬೀಳುತ್ತದೆ. ಸಾಹಿತ್ಯ ಸಮಾಜ ಜೀವನದ ಮೇಲೆ ಬೀರುವ ನೇರ ಪ್ರಭಾವಕ್ಕೆ ಇದೊಂದು ಸ್ಪಷ್ಟವಾದ ಉದಾಹರಣೆ.

ಷೇಕ್ಸ್‌ಪಿಯರ್ ಕನ್ನಡಕ್ಕೂ ಸಾಕಷ್ಟು ಜಾರಿ ಬಂದಿದ್ದಾನೆ. ಅನುವಾದ, ರೂಪಾಂತರಗಳ ಮೂಲಕ ಕನ್ನಡ ಓದುಗರು ಅವನನ್ನು ಓದುತ್ತಲೆ ಇದ್ದಾರೆ. ಅವನ ಸುಪ್ರಸಿದ್ಧ ನಾಟಕಗಳು ಕನ್ನಡ ರಂಗಭೂಮಿಯಲ್ಲಿ ಮತ್ತೆ ಮತ್ತೆ ಅನಾವರಣಗೊಂಡಿವೆ.

ಷೇಕ್ಸ್‌ಪಿಯರ್ ತನ್ನ ಕಾಲಕ್ಕೆ, ತನ್ನ ಯುಗಕ್ಕೆ ಸೀಮಿತನಾದವನಲ್ಲ. ಅವನು ತನ್ನ ಇಂಗ್ಲಿಷ್, ಕ್ರಿಶ್ಚಿಯನ್, ಯುರೋಪಿಯನ್ ಹಾಗೂ ಮಧ್ಯಯುಗೀನ ಉಪಾಧಿಗಳನ್ನೆಲ್ಲ ಮೀರಿ ಬೆಳೆದುನಿಂತ ಒಬ್ಬ ಅಪ್ಪಟ ಮಾನವತಾವಾದಿ, ಇಡೀ ಮನುಕುಲವನ್ನು ಪ್ರತಿನಿಧಿಸುವ ಒಬ್ಬ ಮಹಾನ್ ಕಲಾವಿದ. ಅವನ ನಾಟಕಗಳ ಮಾಯಾದರ್ಪಣದಲ್ಲಿ ನಮಗೆ ಮನುಷ್ಯನ ಅಸಂಖ್ಯ ಮುಖಗಳ, ಬದುಕಿನ ಚಿತ್ರವಿಚಿತ್ರ ಘಟನೆಗಳ ದರ್ಶನವಾಗುತ್ತದೆ. ಆ ಕಲಾತ್ಮಕ ದರ್ಶನ ನಮ್ಮ ಒಳಗನ್ನು ತಿವಿದು ನಮ್ಮನ್ನು ಇನ್ನಷ್ಟು ಮನುಷ್ಯರಾಗಲು ಮತ್ತೆ ಮತ್ತೆ ಒತ್ತಾಯಿಸುತ್ತದೆ. ಅದರ ಪ್ರಭಾವ ಮತ್ತು ಪರಿಣಾಮ ಅಗಾಧವಾದದ್ದು.

---

ಬಿದರಹಳ್ಳಿ ನರಸಿಂಹಮೂರ್ತಿ
'ಅನಿಮಿಷ', ದುರ್ಗಿಗುಡಿ, ಹೊನ್ನಾಳಿ-೫೭೭ ೨೧೭ ದಾವಣಗೆರೆ ಜಿಲ್ಲೆ

ರಕ್ತ ಸೋರುತ್ತಿದ್ದ ಚೂರಿಯನ್ನು ಪಕ್ಕೆಯಿಂದ ಎಳೆದು ತೆಗೆದು ಅದನ್ನು ಎತ್ತಿ ಒಮ್ಮೆ ಹಿಡಿದು ಪಿಳಿಪಿಳಿ ಬಿಟ್ಟ ಕಣ್ಣುಗಳಿಂದ ಕ್ರೂರವಾಗಿ ನೋಡಿದ ಕೊಲೆಗಾರ. ಸಾಯಲಿದ್ದವನು ಬಿನ್ನಹದಿಂದ ಹೇಳುತ್ತಿದ್ದ, ''ನನ್ನನ್ನು ಕೊಲ್ಲಬೇಡ, ಸುಲೈಮಾನ್ ಕೊಲ್ಲಬೇಡ.''

''ನೀನು ಸಾಯಿ ಬಡವ, ನೀನು ಸಾಯಿ !''

ಕೊಲೆಗಾರ ಬಾಗಿಲಲ್ಲೇ ಕಾದುಕೊಂಡಿದ್ದ ಆತನ ಕೊನೆಯ ಉಸಿರು ಎಳೆಯುವವರೆಗೂ. ಒಂದು ಅಮಾನುಷ ಕೊಲೆಯ ದೃಶ್ಯ !

ಮಧ್ಯರಾತ್ರಿಯಲ್ಲಿ ಮಿಟುಕುತ್ತಾ ಒಮ್ಮೆಲೆ ನಾನು ಎಚ್ಚೆದ್ದೆ. ಗೂರ್ಖ ಹೊರಗಡೆ ಬಾಗಿಲನ್ನು ಕುಟ್ಟುತ್ತಾ ಹೋಗುತ್ತಿದ್ದ. ಅವನು ಸುಮಾರು ದೂರ ಹೋದ ಬಳಿಕ ಕಣ್ಣುಗಳನ್ನು ಮುಚ್ಚಿ ನಿದ್ರೆ ಮಾಡಲು ಶ್ರಮಿಸಿದೆ. ಕಣ್ಣಿನ ಮುಂದೆ ಅದೇ ರಕ್ತ ತೊಟ್ಟಿಕ್ಕುತ್ತಿದ್ದ ಹೊಳಪಾದ ಚೂರಿ ಪ್ರಕಾಶಿಸುವಂತೆ ಅನಿಸಿತು. ಆ ಕೊಲೆಗಾರನ ಮರೆಯಲಾರದ ಚಿತ್ರ ! ಮೇಜಿನ ತಳದಲ್ಲಿ ಆತನ ಗೋರಿ ಇರುವಂತೆ ಅನಿಸಿತು. ನೆಲದಲ್ಲಿ ರಕ್ತ ಕೋಡಿಯಾಗಿ ಹರಿದಿತ್ತು. ಅರೆ ತೆರೆದ ಕಣ್ಣುಗಳನ್ನು ಬಿಟ್ಟ ಆತನ ಶವ ಹೊಳೆಯುವ ಹಲ್ಲುಗಳನ್ನು ಪ್ರದರ್ಶಿಸುತ್ತಾ ಏಕದೃಷ್ಟಿಯಿಂದ ನೋಡುತ್ತಿತ್ತು.

ಕಾರು ಮೌನವಾಗಿ ಚಲಿಸುತ್ತಿತ್ತು. ನಾನು ಮುಂಭಾಗದ ಸೀಟಿನಲ್ಲಿ ಕುಳಿತಿದ್ದೆ. ಸುತ್ತಮುತ್ತಲೂ ನಿಶ್ಶಬ್ದ ತುಂಬಿತ್ತು. ನನ್ನ ಮನಸ್ಸು ಪುನಃ ಪುನಃ ಅದನ್ನೇ ಮೆಲುಕುಹಾಕ ತೊಡಗಿತು. ಆತ ಒಬ್ಬ ಪಹರೆಯವನಂತೆ ಬಾಗಿಲಲ್ಲಿ ನಿಂತುಕೊಂಡಿದ್ದನ್ನು ಮಾತ್ರ ನಾನು ಕಲ್ಪಿಸಬಹುದಿತ್ತು. ಸೆಣಸಾಡುವ ಒಬ್ಬನ ಉಳುಕು ತೆಗೆಯಲು ನಿಂತುಕೊಂಡವನಂತೆ ಕಾದುಕೊಂಡಿದ್ದೆ. ಈಗ ನಾನು ಸಾವಿನ ರೂಪದಲ್ಲಿ ಅವನ ಮುಖವನ್ನು ನೋಡಬೇಕಾಯಿತು.

ಕೃಷ್ಣನ್ ಕುಟ್ಟಿ ಮತ್ತು ವಾಸು ಹಿಂಬದಿಯ ಸೀಟಿನಲ್ಲಿ ಕುಳಿತಿದ್ದರು. ಅವರು ಶಕ್ತಿಶಾಲಿಗಳಾದ ರೌಡಿಗಳ ಬಗ್ಗೆ ಮಾತನಾಡುತ್ತಿದ್ದರು. ಎಷ್ಟೋ ಜನ ಅವರ ಬಲಿಷ್ಠವಾದ ಮುಷ್ಟಿಯಿಂದಲೂ ಹರಿತವಾದ ಚೂರಿಗಳಿಂದಲೂ ಉಸಿರು ಬಿಟ್ಟಿದ್ದಾರೆ ಎಂದು. ಸಾವು ಮಾತನಾಡುವುದರ ಬಗ್ಗೆ ನನಗೆಂದೂ ಹೆದರಿಕೆ ಆಗುತ್ತಿರಲಿಲ್ಲ. ನಾನೆಂದೂ ಜೀವನವನ್ನು ಪ್ರೀತಿಸಿದವನಲ್ಲ. ಒಂದು ದಿನ ಸಂಜೆ ಗೇರು ಮರದ ಅಡಿಯಲ್ಲಿ ನಾನು ನಿಂತುಕೊಂಡಿದ್ದಾಗ ನನ್ನ ದೇಹವನ್ನು ಕೊಚ್ಚಿ ಚೂರು ಚೂರು ಮಾಡಿ ಕಡಲ ಅಲೆಗಳಲ್ಲಿ ತೋಯ್ದು ಕೊಚ್ಚಿಕೊಂಡು ಹೋಗುವಂತೆ ಕಲ್ಪಿಸಿಕೊಂಡಿದ್ದೆ. ಅಂದು ಇಪ್ಪತ್ತು ರೂಪಾಯಿ ತೆತ್ತು ಹೊಟೇಲಿನಲ್ಲಿ ಬಾಡಿಗೆ ರೂಂ ಮಾಡಿದುದರಲ್ಲಿ ನಾನೂ ಒಬ್ಬನಾಗಿದ್ದೆ.

ಹೊರಗಡೆ ಹಾಕಿದ್ದ ವರಾಂಡದ ಬೆಂಚಿನ ಮೇಲೆ ಮಲಗಿಕೊಂಡಿದ್ದ ನಾನು ಹೊರಗೆ ಅಡಿ ಇಟ್ಟೆ. ಉದರದ ಒಳಗೆ ಹಸಿವಿನ ಬೇಗೆ ಹೊಗೆಯಾಡತೊಡಗಿತು. ಎರಡು ದಿನ ರಾತ್ರಿ ತೀವ್ರವಾದ ಹಸಿವಿನಿಂದ ಹೊಟ್ಟೆಗೆ ಬೆಂಕಿ ಇಟ್ಟಂತಹ ಅನುಭವ ಉಂಟಾಗಿ ಪ್ರಾಣ ಹೋಗುವ ಸ್ಥಿತಿಯಲ್ಲಿದ್ದೆ.

ಹಸಿವಿನ ಹಗಲು ರಾತ್ರಿಗಳು. ಕೈಯಲ್ಲಿ ಬಿಡಿ ಕಾಸಿಲ್ಲದಾಗ ಪರಿಚಿತರೊಬ್ಬರನ್ನು ಕಾಣಲು ಹದಿನಾರು ಮೈಲಿಗಳಷ್ಟು ದೂರ ನಡೆದು ಹೋಗಿದ್ದೆ. ದುರಾದೃಷ್ಟ. ಆತನೂ ಅಲ್ಲಿಲ್ಲದ ಬಳಿಕ ಅದೇ ನೆನಪಿನಿಂದ ಹಿಂತಿರುಗಿದ್ದೆ. ಬಳಿಕ ಅವರು ಹಿಂತಿರುಗಿದರು. ಕೆಲವು ಸ್ಮರಣೆಗಾಗಿ ಕತೆಗಳೆಲ್ಲಾ ಒಂದು ತೆರನಾದ ವಿವಿಧ ವಿನೋದಾವಳಿಯಂತೆ ಆಯಿತು, ಸಂಜೆಯ ಊಟದ ಸಮಯದಲ್ಲಿ.

ನಾನೆಂದೂ ನೆನೆಸಿರಲಿಲ್ಲ ಒಂದು ವರ್ಷದ ಹಿಂದೆ ಆದ ಭೇಟಿ ಹೀಗೆ ನನ್ನ ಜೀವನಕ್ಕೆ ಒಂದು ಹೊಸ ಲಗಾಮನ್ನು ಕಟ್ಟಿ ಹಾಕುವುದೆಂದು.

ಪರಿಚಿತನೊಡನೆ ಆ ಕೊಠಡಿಯೊಳಗೆ ಅಡಿ ಇಟ್ಟಾಗ ಮನಸ್ಸಿನೊಳಗೆ ದೊಡ್ಡದಾದ ಜಿಗುಪ್ಸೆ ಉಂಟಾಯಿತು.



ಆತ ಕಾಲುಚೀಲ ಹಾಕಿದ ಪಾದದೊಡನೆ ಮೇಜಿನ ಮೇಲೆ ಕಾಲು ಚಾಚಿ ಕುಳಿತಿದ್ದ. ತಲೆಯ ಮೇಲೆ ಸೀಲಿಂಗ್ ಫ್ಯಾನ್ ಸುತ್ತುತ್ತಿತ್ತು. ಅವನ ಬೆರಳ ಸಂದಿನಲ್ಲಿ ಬೆಲೆ ಬಾಳುವ ಸಿಗರೇಟು ಉರಿಯುತ್ತಿತ್ತು. ನಾನು ನನ್ನ ಪಾಡಿಗೆ ಅತೃಪ್ತಿಯಿಂದ ಹೇಳಿಕೊಂಡಿದ್ದೆ. 'ಅವನಿಗೆ ಮತ್ತೊಂದು ಹಣದ ಚೀಲ !' ಆಜ್ಞಾಪಿಸಿದ.

''ಕುಳಿತುಕೋ...''

ಕುಳಿತುಕೊಂಡೆ. ಈಗ ಪರಿಚಯ ಮಾಡಿದ.

''ನಿಮಗೆ ಅಬ್ದುಲ್ ರಜಾಕ್ ಗೊತ್ತಿಲ್ಲವಾ ? ಪತ್ರಿಕೆಗಳಲ್ಲಿ ಬರೆಯುತ್ತಾರಲ್ಲ.''

ಆತನ ತೀಕ್ಷ್ಣವಾದ ಕಣ್ಣುಗಳು ನನ್ನ ಎಣ್ಣೆಕಾಣದ ತಲೆ, ಕುರುಚಲು ಗಡ್ಡದ ಕಳೆಗುಂದಿರುವ ಮುಖ, ಕೊಳಕು ಬಟ್ಟೆಗಳ ಮೇಲೆ ಒಮ್ಮೆ ಹರಿದಾಡಿದವು.

ನಾನು ಗೊಂದಲದಲ್ಲಿ ಸಿಕ್ಕಿಕೊಂಡೆ.

ಅಂದು ಸಾರ್ವಜನಿಕ ವಾಚನಾಲಯದಲ್ಲಿ ಹಲವು ಹಿರಿಯ ಕಾದಂಬರಿಕಾರರ ಜೊತೆಗೆ ಕಳೆದ ದಿನಗಳು. ಈಗ ಇಲ್ಲಿ ಈ ಹಣದ ಚೀಲ ! ನನ್ನ ಕೋಪವನ್ನು ಅದುಮಿ ಇಟ್ಟುಕೊಂಡು, ಯಾವ ಪಕ್ಷಪಾತವಿಲ್ಲದೆ ಆಲಿಸಿದೆ. ಅಲ್ಲಿಂದ ಎದ್ದು ಹೋಗಬೇಕೆನ್ನುವಷ್ಟರಲ್ಲಿ ನನ್ನನ್ನು ತಡೆದ.

''ಇರು, ನಾನು ಹೊರಗಡೆ ಹೋಗಬೇಕು.''

''ನೀನೊಬ್ಬ ಬರಹಗಾರನೇನು ? ಹಾಗಾದರೆ ನಿನ್ನ ಹಸಿವು ಇಂಗಿಸಲಿರುವ ಯಾವುದಾದರೂ ಒಂದು ಉಪಾಯ ಹೇಳು ?''

ಮುಸ್ಸಂಜೆಯ ಬಳಿಕ, ಲಾಡ್ಜಿನ ಸಮೀಪ ನಾನು ಕಾರಿನಿಂದ ಇಳಿದಾಗ ಆತ ಕರೆದ.

''ಹೇ ರಜಾಕ್ !''

ಅಚ್ಚರಿ ಉಂಟಾಯಿತು ! ಪರಿಚಯದ ದರ್ಪದ ಕರೆ ಕೇಳಿದೊಡನೆ ನಾನು ರೇಗಲಿಲ್ಲ.

''ನೀನು ಯಾವುದಾದರೂ ಒಂದು ಕೆಲಸ ಮಾಡಬಾರದೇನೋ ?''

''ಯಾವ ಕೆಲಸ ?''

''ಯಾವುದಾದರೂ ಒಂದು ಕೆಲಸ. ನೀನು ನಿನ್ನ ತತ್ವಗಳನ್ನೆಲ್ಲಾ ಬದಿಗೊತ್ತಿ ದಿನಕ್ಕೆ ಐದು ಗಂಟೆ ಕೆಲ್ಸ ಮಾಡ್ತಿಯಾ ? ಹಾಗೆ ವಾರದಲ್ಲಿ ಆರು ದಿನಗಳು ?''

ನಾನು ನಕ್ಕೆ ಶೂನ್ಯವಾಗಿ.

ಒಂದು ರಾತ್ರಿ ಕೂಡ ಹಸಿವಿನ ನೋವು ಇಲ್ಲದೆ ಇರುತ್ತಿರಲಿಲ್ಲ. ಒಳಗಡೆ ಇಸ್ಪೀಟು ಆಟಗಾರರ ಸದ್ದು ಗದ್ದಲವಿತ್ತು. ನಾನು ಬೆಂಚಿನ ಮೇಲೆ ಬೋರಲಾಗಿ ಮಲಗಿಕೊಂಡು ಆಗಸ ನೋಡುತ್ತಿದ್ದೆ. ಹೀಗೆ ನೋಡಿ ಹಲವು ವರ್ಷಗಳಾಗಿದ್ದವು. ಇದೇ ಆಕಾಶವನ್ನು ಜಾಲೀಮರದ ಎಲೆಗಳ ಸಂದಿನಿಂದ ಅನಾಥನಂತೆ ಒಮ್ಮೆ ನೋಡಿದ್ದೆ. ಅದು ಸುಂದರವಾಗಿತ್ತು. ನಕ್ಷತ್ರಗಳು ತೆರೆಮರೆಯಲ್ಲಿ ಮತ್ತೆ ಮತ್ತೆ ಇಣುಕುತ್ತಿದ್ದವು.

* * *

ಹಿಂದಿನ ಸೀಟಿನಿಂದ ವಾಸು ಅವನ ಕತೆಯನ್ನು ಹೇಳುತ್ತಿದ್ದನು. ''ಕುಂಞಂಬು ನಂಬರ್ ವನ್ ರೌಡಿ. ಅವನಿಗೆ ಎದುರು ಬೀಳಲು ಯಾರಿಂದಲೂ ಸಾಧ್ಯವಿರಲಿಲ್ಲ. ಆದರೆ ಸುಲೈಮಾನ್ ಚಾಲೆಂಜ್ ಮಾಡಿ ತೋರಿಸಿದ. ಅವನು ಕಲ್ಲಾಯಿ ಸೇತುವೆಯಿಂದ ಮುರಿಯಾಡಿನವರೆಗೂ ಅವನಿಗೆ ಸರಿಯಾಗಿ ಬಿಗಿದಿದ್ದ. ಕುಂಞಂಬು ಮೂರು ಚೂರಿಗಳನ್ನು ಸುಲೈಮಾನನಿಂದ ಕಸಿದುಕೊಂಡಿದ್ದ. ಅಂದಿನಿಂದ ಸುಲೈಮಾನ್ ರೌಡಿ ಆದ.''

ಕೊನೆಯ ಭೇಟಿ...

ಸಾಹಿಬ ಅಷ್ಟೊಂದು ಜನಸಂದಣಿಯ ನಗರದೊಳಗಿನಿಂದ ಅತ್ಯಂತ ರಭಸವಾಗಿ ಕಾರನ್ನು ಓಡಿಸುತ್ತಿದ್ದಾಗ ನಾನು ಅವನನ್ನು ಎಚ್ಚರಿಸಿದೆ, ''ಸ್ವಲ್ಪ ಮೆಲ್ಲನೆ ಓಡಿಸು.''

''ಹೆದರಿದೆಯೇನು ? ನೀನೊಮ್ಮೆ ಆತ್ಮಹತ್ಯೆಗೆ ಪ್ರಯತ್ನಿಸಿದವನು ತಾನೆ ?'' ಎಂದ.

''ನೀನು ನನ್ನನ್ನು ಹಾಳು ಮಾಡಿದೆ. ನನ್ನನ್ನು ನೀನು ದುಡಿಯಲು ಮಾಡಿದೆ. ನೀನು ನನ್ನನ್ನು ಮದುವೆ ಆಗುವಂತೆ ಮಾಡಿದೆ. ಅದರಿಂದ ನಾನಿಂದು ಜೀವನ ಸೆರೆಯಲ್ಲಿ ಬಂಧಿಯಾಗಿದ್ದೇನೆ'' ಎಂದೆ ಜಿಗುಪ್ಸೆಯಿಂದ.

ನಾವು ಹೊಟೇಲಿನ ಗೇಟಿನ ಸಮೀಪಕ್ಕೆ ತಲುಪಿದಾಗ ಅವನಿಗೆ ಕಂಪೆನಿ ಕೊಡುವಂತೆ ಬಲತ್ಕಾರ ಮಾಡಿದ.

''ನನಗೆ ಬೇಗ ಮನೆಗೆ ಹೋಗಬೇಕು. ನನ್ನ ಸಣ್ಣ ಮಗುವಿಗೆ ಜ್ವರ ಬಂದಿದೆ'' ಎಂದೆ.

ವೇಗವಾಗಿ ನಾನು ಬಾಗಿಲನ್ನು ತೆರೆದು ಅವನ ಎದುರಿಗೆ ನಿಂತು ಕೇಳಿದೆ : ''ಒಂದು ನೂರು ರೂಪಾಯಿ ಸಾಲವಾಗಿ ಕೊಡು.''

''ನೀನು ಮೊದಲೇ ನನಗೆ ನೂರು ರೂಪಾಯಿ ಕೊಡಬೇಕಾಗಿದೆ. ನೀನು ಏನು ಮಾಡ್ತೀಯಾ ನಿನ್ನ ಸಾವಿರ ರೂಪಾಯಿ ಸಂಬಳದಿಂದ.''

''ಈಗ ಹಣ ಕೊಡು. ತಿಂಗಳ ಮೊದಲ ವಾರದಲ್ಲಿ ಕೊಡ್ತೇನೆ.''

''ಸರಿ. ಮೊದಲಿದನ್ನು ಬರೆದಿಡುತ್ತೇನೆ. ಈಗಿನ ಹಣವನ್ನು ನೀನು ಸರಿಯಾಗಿ ಒಂದನೇ ತಾರೀಖೊಳಗೆ ಕೊಡಲಿಲ್ಲವಾದರೆ ನಿನ್ನನ್ನು ಕೊಂದುಬಿಡ್ತೇನೆ.''

ನಾನು ಹೋಗುತ್ತಿದ್ದಂತೆ ಅವನು ಪುನಃ ಕರೆದ,

''ನೋಡು ರಜಾಕ್, ನಾಳೆ ನಾವು ನಮ್ಮ ಕೆರೆಯನ್ನು ಕ್ಲೀನ್ ಮಾಡ್ತೇವೆ. ಮನೆಯಲ್ಲಿ ಮಧ್ಯಾಹ್ನದ ಊಟಕ್ಕೆ ಬಂದುಬಿಡು.''

ನಾನು ಮುಂದೆ ಅಡಿ ಇಟ್ಟು ಹೋಗುತ್ತಿದ್ದಂತೆ ಆಲೋಚನೆ ಮಾಡತೊಡಗಿದೆ. ನನ್ನಂತೆ ಇನ್ನು ಯಾವ ಗಂಡಸೂ ಎಂಟು ಗಂಟೆಗಿಂತ ಮುಂಚೆ ಮನೆ ತಲುಪಬೇಕೆಂದು ಅವಸರಪಡಲಾರ. ಪ್ರತಿದಿನ ಹೊಸಿಲು ಮೆಟ್ಟುತ್ತಿರುವಾಗ ಮನಸ್ಸಿಗೆ ಒಂದು ಅಚ್ಚರಿ ಉಂಟಾಗುತ್ತಿತ್ತು. ನನ್ನ ಮನೆ, ನನ್ನ ಸಂಸಾರ ಎಂದು. ನನ್ನ ಮಕ್ಕಳು ದಿಕ್ಕಿಲ್ಲದವರಂತೆ ಪಾತ್ರೆ ಹಿಡಿದು ಉದ್ದನೆಯ ಸಾಲಿನಲ್ಲಿ ಕಾಯುತ್ತ ನಿಂತಿರುವುದನ್ನು ಕಲ್ಪಿಸಿಕೊಳ್ಳಲಾರೆ.

ನಾನು ಈಸಿಚೇರಿನ ಮೇಲೆ ಬಿದ್ದುಕೊಂಡಿದ್ದೆ – ಎರಡನೇ ತರಗತಿಯಲ್ಲಿ ಓದುತ್ತಿದ್ದ ಹಿರಿಯ ಮಗ ಓದುತ್ತಿರುವುದನ್ನು ನೋಡಿಕೊಂಡು. ನನ್ನ ಮಡದಿ ಜ್ವರ ಬಂದ ಸಣ್ಣ ಮಗಳನ್ನು ತೊಡೆಯ ಮೇಲೆ ಮಲಗಿಸಿ ಹಣೆಗೆ ಶಾಖ ಕೊಡುತ್ತಾ ರೇಡಿಯೋ ಆಲಿಸುತ್ತಿದ್ದಳು.

ಆ ಮುಸ್ಸಂಜೆ ಹೊತ್ತಿನಲ್ಲಿ ಸಾವಿನ ದೂತ ಬಂದಿದ್ದ.

ಅಗಲವಾದ ಕೆರೆಯ ಏರಿಯ ಮೇಲೆ ಹೆಣವನ್ನು ಚಟ್ಟದಲ್ಲಿರಿಸಿ ಮಸಣದ ಕಡೆಗೆ ಮೆರವಣಿಗೆ ಹೋಗುತ್ತಿತ್ತು, ಒಂದು ಗುಂಪು. ನಾನು ಕಂಪೌಂಡಿನ ಮೂಲೆಗೆ ಸರಿದು ನಿಂತು ಕೆರೆಯ ಬಳಿಗೆ ನೋಡುತ್ತಿದ್ದೆ.

ಮೊನ್ನೆ ತಾನೆ ಸೋಸಿ ಶುಚಿಗೊಳಿಸಿದ ಕೆರೆಯಾಗಿತ್ತು ಅದು. ಅಂದು ಕೆರೆ ಕ್ಲೀನ್ ಮಾಡುವಾಗ ಸಾವಿನ ದವಡೆಯಿಂದ ತಪ್ಪಿಸಿಕೊಂಡಿದ್ದ ಮೀನುಗಳೆಲ್ಲವೂ ಇಂದು ಆನಂದದಿಂದ ವಯ್ಯಾರದಿಂದ ನೀರಿನಲ್ಲಿ ಓಡಾಡುತಲಿದ್ದವು.

* * *

ಕಿಟಕಿಯ ಸಂದಿನಿಂದ ಒಳಸೇರಿದ ಚಂದ್ರನ ಬೆಳಕು ನಾಚಿಕೆ ಇಲ್ಲದೆ ನಕ್ಕಿತು. ನನ್ನೆಣಿಸಿಕೆ, ಬಹುಶಃ ನಾನೆಲ್ಲಾದರೂ ಬಿಳಿಯ ಗೋರಿಯ ಮೇಲೆ ಮಲಗಿರುವೆನಾ ಎಂದು.

ಸುಲೈಮಾನ್, ನೀನು ರಕ್ತ ತುಂಬಿದ ಚೂರಿಯೊಡನೆ ಬಾಗಿಲಿನಲ್ಲಿ ಕಾವಲುಗಾರನಂತೆ ನಿಂತು ಮಿಡುಕುತ್ತಿದ್ದ ಒಡಲನ್ನೇ ನೋಡುತ್ತಲಿದ್ದೆ. ಬಹುಶಃ ಇರುಳೆಲ್ಲಾ ಅವನು ಸಾಯಲಿಲ್ಲ ಎಂಬಂತೆ.

ಸಮುದ್ರ ತೀರದ ಮಾರ್ಗದ ತಿರುವಿನಲ್ಲಿ ಬೀಸಿದ ತಂಪು ಗಾಳಿಗೆ ನಾನು ತುಸು ಚೇತರಿಸಿಕೊಂಡಂತೆ ಅನಿಸಿತು. ಕಣ್ಣು ಬಿಟ್ಟು ನೋಡಿದಾಗ ಮೈಲುಗಲ್ಲಿನಲ್ಲಿ ಹದಿನಾಲ್ಕು ಮೈಲುಗಳು ಇನ್ನೂ ಇವೆ ಎಂದಿತ್ತು.

ನನ್ನ ಹಿಂಬದಿಯ ಸೀಟಿನಲ್ಲಿ ಕುಳಿತಿದ್ದ ಜೊತೆಗಾರರು ಸೆರೆಮನೆಯ ಬಗ್ಗೆ ಮಾತನಾಡುತ್ತಲಿದ್ದರು. ನಾನು ನ್ಯಾಯಾಲಯದ ಕೊಠಡಿಯನ್ನು ಎಂದೂ ನೋಡಿದವನಲ್ಲ. ನಾನು ನ್ಯಾಯಾಲಯಕ್ಕೆ ಹೋಗಿದ್ದು ಕಟಕಟೆಯಲ್ಲಿ ನಿಂತಿರುವ ನನ್ನ ವೈರಿಯನ್ನು ನೋಡುವ ಸಲುವಾಗಿ ಮಾತ್ರ. ನಾಲ್ಕು ಐದು ಬೆಂಚುಗಳಲ್ಲಿ ಬಹಳಷ್ಟು ಜನ ಕುಳಿತುಕೊಂಡಿದ್ದರು.

* * *

ನಾನು ಕಲ್ಪಿಸಿಕೊಂಡಿದ್ದ ನ್ಯಾಯಾಲಯದ ಕೊಠಡಿ ಆಗಿರಲಿಲ್ಲ. ತುಸು ಎತ್ತರದ ಆಸನದಲ್ಲಿ ಗಂಭೀರದ ಠೀವಿಯಲ್ಲಿ ನ್ಯಾಯಮೂರ್ತಿ ಕುಳಿತುಕೊಂಡಿದ್ದರು. ಅವರು ಎಡೆಬಿಡದೆ ಬರೆದುಕೊಳ್ಳುತ್ತಿದ್ದರು. ನ್ಯಾಯಾಧೀಶರ ಶಿರದ ತುಸು ಮೇಲೆ ಅವರ ಹಿಂಬದಿಯಲ್ಲಿ ಗೋಡೆಯಲ್ಲಿ ಹೀಗೆ ಬರೆಯಲ್ಪಟ್ಟಿತ್ತು. ''ಸ್ವರ್ಗ ಧರೆಗೆ ಇಳಿದರೂ ನ್ಯಾಯ ಸರಿಯಾದ ರೀತಿಯಲ್ಲಿ ದೊರಕಲಿ !''

ವೀಕ್ಷಕರ ಹಿಂಬದಿಯಿಂದ ಬಾಗಿಲ ಸಂದಿಯ ಮೂಲಕ ನಾನು ಸಕಲವನ್ನೂ ಗಮನಿಸುತ್ತಿದ್ದೆ.

* * *

ನನ್ನ ನೋಟಕ್ಕೆ ಮೊದಲು ಕಂಡ ವ್ಯಕ್ತಿ ಸಾಕ್ಷಿಯ ಕಟಕಟೆಯೊಳಗೆ ಇದ್ದವ. ನ್ಯಾಯವಾದಿಯೋರ್ವ ಅವನೊಡನೆ ನಿಧಾನವಾಗಿ ಪ್ರಶ್ನೆಗಳನ್ನು ಕೇಳುತ್ತಲಿದ್ದ. ಸಾಕ್ಷಿ ಸಹ

ಮೃದುವಾದ ಕಂಠದಿಂದ ಉತ್ತರಿಸುತ್ತಿದ್ದ. ಅವರು ಇಬ್ಬರ ಧ್ವನಿ ನನಗೆ ಚೆನ್ನಾಗಿ ಕೇಳಿಸುತ್ತಿತ್ತು. ಆದರೆ ಸಿನಿಮಾಗಳಲ್ಲಿ ನಾನು ನೋಡಿದ ನ್ಯಾಯಾಲಯದ ವಾದ ವಿವಾದದ ಸನ್ನಿವೇಶಗಳಲ್ಲಿ ವಾದಿ, ಪ್ರತಿವಾದಿಗಳು ಪರಸ್ಪರ ಬೊಬ್ಬೆ ಹಾಕುತ್ತಾ ಮಾತನಾಡುತ್ತಾರೆ.

ಅಪರಾಧಿಗಳು ನಿಲ್ಲುವ ಕಟಕಟೆಯ ಗೂಡನ್ನು ಸಹ ಇದಕ್ಕಿಂತ ಮೊದಲು ನೋಡಿದ್ದೆ. ಅಚ್ಚರಿ ತರುವ ವಿಷಯವೆಂದರೆ, ಈ ಕೈದಿಯ ಗೂಡನ್ನು ನಾನು ಅತೀ ಸಮೀಪದಿಂದ ನೋಡುತ್ತಿರುವುದು.

ನಾನು ಅಪರಾಧಿಯನ್ನು ನೋಡಿದೆ. ಹಿಂದಿನಿಂದ ಆತನ ತಲೆಯನ್ನು ತಿರುಗಿಸಿದಾಗ ಗುಳಿಬಿದ್ದ ಕಣ್ಣುಗಳು, ಶೇವ್ ಮಾಡಿದ ಅಂದವಾದ ಮುಖ, ಅದರಲ್ಲಿ ಲಜ್ಜೆ ಭೀತಿ ಎರಡು ಇದ್ದಂತೆ ಅನಿಸಿತು.

ಕೊಠಡಿಯ ಪಶ್ಚಿಮಕ್ಕಿದ್ದ ಮೇಜಿನ ಎದುರಿಗೆ ಕುಳಿತುಕೊಂಡಿದ್ದ, ಅಪರಾಧಿಯ ಪರ ವಾದಿಸಲಿರುವ ವಕೀಲರನ್ನು ನೋಡಿದೆ. ಆತ ಕೆಲವು ಮುಖ್ಯ ವಿಷಯಗಳನ್ನು ಹೇಳುತ್ತಲಿದ್ದ. ಆತನ ಕಿವಿಯ ಹಿಂಬದಿಯಲ್ಲಿ ಪವಿತ್ರವಾದ ತುಳಸಿ ದಳ, ಹಣೆಯಲ್ಲಿ ವಿಭೂತಿಯ ದೊಡ್ಡ ನಾಮ ಬಳಿದಿದ್ದ. ಆತನ ಕಣ್ಣುಗಳು ಕಂದು ಬಣ್ಣದಿಂದ ತುಸು ಪ್ರಾಯವಾದಂತೆ ತೋರುತ್ತಿತ್ತು. ಒಂದು ಪ್ರತೀಕಾರದ ತಾತ್ಸಾರದಿಂದ ಆ ಮುದಿ ವಕೀಲನನ್ನು ಒಮ್ಮೆ ದಿಟ್ಟಿಸಿ ನೋಡಿದೆ.

ಆತನ ನ್ಯಾಯವಾದದ ಕೀರ್ತಿಯ ಬಗ್ಗೆ ನಾನು ತುಂಬಾ ಕೇಳಿದ್ದೆ. ಹೇಳುವುದಾದರೆ ಆತನಿಗೆ ಮೂಲವ್ಯಾಧಿ ಬಾಧಿಸಿದ ನಂತರ ಸೇವೆಯಿಂದ ವಿಶ್ರಾಂತಿ ಪಡೆದಿದ್ದ. ಮೊದಮೊದಲು ಹಲವು ಕೊಲೆ, ಖೂನಿ ಮಾಡಿದ ಅಪರಾಧಿಗಳೆಲ್ಲರನ್ನೂ ವಾದಿಸಿ ಉಳಿಸಿದ್ದ. ಈಗ ಮತ್ತೆ ಪುನಃ ಹಿಂತಿರುಗಿ ಬಂದಿದ್ದಾನೆ! ಶತ್ರುವನ್ನು ಉಳಿಸಲು.

ಯಾರೋ ಒಬ್ಬರು ನನ್ನನ್ನು ತಡೆದು ನಿಲ್ಲಿಸಿದರು. ನಾನು ಕೋರ್ಟ್ ವಠಾರದ ಹೊರಗೆ ಹೋಗುತ್ತಿದ್ದಂತೆ.

''ಕೇಸು ಹೇಗಿತ್ತು ಸರ್ ?''

''ಸಾಗುತ್ತ ಇದೆ.''

''ಅಡ್ವಕೇಟ್ ಸ್ವಾಮಿ ಬಹಳ ಗಟ್ಟಿಗರು.''

ಅವರು ಬಿಟ್ಟು ಹೋಗಬೇಕು. ಮತ್ತೆ ನಾವು ನೋಡ್ತೀವಿ. ದ್ವೇಷ ತುಂಬಿದ್ದು ನಿಚ್ಚಳವಾಗಿ ಸ್ಪಷ್ಟವಾಗುತ್ತಿತ್ತು. ಆ ತೀಕ್ಷ್ಣವಾದ ಕಣ್ಣುಗಳು ಮೂಡಿದ ಸಿಡುಬಿನ ಕಲೆಗಳು ಇರುವ ಮುಖದಲ್ಲಿ.

''ಕೋರ್ಟ್ ಅವನನ್ನು ಕೈ ಬಿಟ್ಟರೂ ನಾವು ಮಾತ್ರ ಬಿಡೋದಿಲ್ಲ.''

ನಾನು ಪಿಸುಗುಟ್ಟಿದೆ: ''ಮೊಹಿದೀನ್, ಅದನ್ನು ನೋಡ್ಲಿಕ್ಕಾಗಿ ನಾನು ನಿನ್ನೊಡನೆ ಇರ್ತೇನೆ.''

ಅಪೀಲು, ಕರುಣೆ ಇಲ್ಲದ ವಿವರಣೆ, ಆಗಾಗ ಅದರ ವಿಷಯ ನನಗೆ ತಲುಪಬೇಕಾದ ಏರ್ಪಾಡನ್ನು ಮಾಡಿದೆ. ಕೊನೆಗೆ ಕೋರ್ಟಿನಲ್ಲಿದ್ದ ಸ್ನೇಹಿತನೊಬ್ಬ ಬಂದು ಹೇಳಿದ. ''ಪೊನ್ನಾನಿಯಲ್ಲಿ ನನ್ನ ಕೆಲವು ಸ್ನೇಹಿತರಿದ್ದಾರೆ. ಅವರು ಶವವನ್ನು ತೆಗೆದುಕೊಂಡು ಬೇಕಾದ ಏರ್ಪಾಡು ಮಾಡ್ತೇನೆಂತ ಒಪ್ಪಿಕೊಂಡಿದ್ದಾರೆ ಅಂದಿದ್ದ ಸುಲೈಮಾನ್'' ಎಂದು.

ಜೈಲರು ವಿಷಯವನ್ನು ಕೂಲಂಕಷವಾಗಿ ಶೋಧಿಸಿದ ಬಳಿಕ ಸ್ಪಷ್ಟಪಡಿಸಿದ. ಮೃತನ ಬಗ್ಗೆ ನ್ಯಾಯಕ್ಕಾಗಿ ಯಾರು ಕೈ ಹಾಕುತ್ತಾರೆ. ಅವರಿಗೆ ಶವವನ್ನು ಒಪ್ಪಿಸಬಹುದೆಂದು. ಇಲ್ಲವಾದರೆ ಹೂಳಲು ಬೇಕಾದ ಏರ್ಪಾಡಾಗಬೇಕು ಇಲ್ಲಿ.

ಈ ಪ್ರಶ್ನೆ ಹುಟ್ಟುವುದಕ್ಕಿಂತ ಮೊದಲೇ ನನಗೆ ಗೊತ್ತಿತ್ತು. ಯಾಕೆ? ಸುಲೈಮಾನ್ ಮೂಪ ನೀನು ಮಾಡಬಾರದಿತ್ತು?

ಕೊನೆಗೆ ನಾನು ತುಂಬಾ ಕಷ್ಟದಿಂದ ಹೇಳಿದೆ:

''ಸುಲೈಮಾನ್ ನಾನು ಹೋಗುತ್ತೇನೆ.''

ಆತ ಅವನ ಕೈಯನ್ನು ಮುಂದೆ ನೀಡಿದ. ಆ ಒರಟಾದ ಕೈಗಳು ಲಾಕಪ್ಪಿನ ಸರಳುಗಳ ಮಧ್ಯದಿಂದಾಗಿ ಹೊರಬಂದು ನನ್ನ ಕೈಗಳನ್ನು ಅದುಮಿದವು. ಆ ಬಲಗೈಯಲ್ಲಿ ನೆತ್ತರು ಸೋರುತ್ತಿದ್ದ ತೊಯ್ದ ಚೂರಿಯನ್ನು ಒಮ್ಮೆ ನೋಡಿದ್ದ ನೆನಪಾಯಿತು. ಸುಲೈಮಾನ್ ಕೇಳಿದ, ''ನೀನು ಬೆಳಕಾದ ಮೇಲೆ ಹೋಗುವುದು ಒಳ್ಳೆಯದಲ್ಲವೆ ಬೆಳಗ್ಗಿನ ಕಾರ್ಯಕ್ಕೆ ?''

ನಾನು ಅವನ ಮುಖವನ್ನು ದಿಟ್ಟಿಸಲಿಲ್ಲ.

ಒಮ್ಮೆಲೆ ನನ್ನ ಕಂಠದಿಂದ ನೊರೆ ಬಂದಿತು, ''ಸುಲೈಮಾನ್ ಮೂಪ ಧೈರ್ಯವಾಗಿರು'' ನನ್ನ ಅವಸರದ ಮಾತಿಗೆ ನಾನೇ ಹೆಮ್ಮೆ ಪಟ್ಟುಕೊಳ್ಳಬೇಕಾಯಿತು.

ಅವನ ಕೈಯನ್ನು ಹಿಂದಕ್ಕೆ ಮೆಲ್ಲನೆ ಎಳೆದಂತೆ ಸುಲೈಮಾನ್ ಏನೋ ಆವೇಶ ಬಂದವನಂತೆ ಪುನಃ ನನ್ನ ಕೈಗಳನ್ನು ಒಮ್ಮೆ ಮೃದುವಾಗಿ ಅದುಮುತ್ತಾ ತನ್ನ ಹಣೆಗೆ ಒತ್ತಿಕೊಂಡು, ''ನನ್ನ ಸಲಾಂ ನಿಮ್ಮೆಲ್ಲರಿಗೂ.''

ಅದರ ನಂತರ ಅವನ ಮಾತಿಗೆ ಸ್ವಲ್ಪ ಬಿಡುವು ಇದ್ದಂತೆ ಅನಿಸಿತು. ಬಳಿಕ ಒಮ್ಮೆ ಬಿಕ್ಕಿದ.

ಜೈಲರನ ಮಾತಿಗೆ ಕಾಯದೆ ವರಾಂಡದಿಂದ ನಾನು ಕೆಳಗೆ ಅಡಿ ಇರಿಸಿದೆ.

ನಾನೊಬ್ಬ ಕೇವಲ ಮನುಷ್ಯನಾಗಿದ್ದೆ ಅಷ್ಟೆ. ಬಹುಶಃ ಆತ ತಿಳಿದಿರಬೇಕು. ನಾನೊಬ್ಬ ಪವಾಡ ಪುರುಷನೆಂದು; ಅವರು ಮಾಡಿದ ಮಹಾ ಅಪರಾಧವನ್ನು ಮನ್ನಿಸಲು.



ಜೈಲರು ಕೇಳಿದ, ''ಏಸೀ... ಹಾಗಾದರೆ ನಿಮಗೆ ಸುಲೈಮಾನ್ ಮೂಪ ಗೊತ್ತಿದ್ದೆಯಾ ?''

ನನ್ನ ನೆತ್ತರು ಕುಂದಿದ ಮುಖದಿಂದ ಉಂಟಾದ ಮುಗುಳ್ನಗೆಯು ಸಮ್ಮತಿಯನ್ನು ವ್ಯಕ್ತಪಡಿಸಿತು.

''ಅಂದರೆ, ಕೊಲೆಯಾದ ವ್ಯಕ್ತಿಯೂ ನಿಮಗೆ ಗೊತ್ತೇನು ?''

ಆ ಪ್ರಶ್ನೆಗೆ ಮಾತ್ರ ನಾನು ಮೂಕನಾದೆ.

ಆತನ ಅಮಾನುಷ ಸಾವು ಮಾತ್ರ ನನ್ನನ್ನು ಮತ್ತೊಮ್ಮೆ ಅನಾಥನನ್ನಾಗಿ ಮಾಡಿತು.

ನಾವು ಮುಂದೆ ಅಡಿ ಇಟ್ಟು ಸಾಗಿದಂತೆ ಜೈಲರ್ ಕೇಳಿದ,

''ಒಂದು ನಿಮಿಷ, ನಿಮಗೆ ನೇಣು ಕಂಬ ನೋಡುವುದು ಬೇಡವೇನು ?''

ಸಹಾಯಕ ವಾರ್ಡನ್ ಜಮಾಲ್ ನಮ್ಮೊಡನೆ ಸೇರಿಕೊಂಡ.

ಜೈಲರ್ ವಿವರಣೆ ನೀಡುತ್ತಲಿದ್ದ – ''ಬೆಳಕಾಗುವವರೆಗೂ ಈ ಅಂಗಳದುದ್ದಕ್ಕೂ ಹಜಾರಗಳಲ್ಲಿಯೂ ವಿದ್ಯುತ್ ಉರಿಯುತ್ತ ಇರುವುದು. ಜೈಲಿನ ಅಧಿಕಾರಿಗಳು ಪ್ರತಿ ಕೊಠಡಿಗಳೊಳಗಿನ ಕೈದಿಗಳ ಚಲನವಲನಗಳನ್ನು ಕುಳಿತಲ್ಲಿಂದಲೇ ಗಮನಿಸುವರು. ನಾಲ್ಕು ಗಂಟೆಗೆ ಕೊಠಡಿ ತೆರೆದೊಡನೆ ಎಲ್ಲ ಕೈದಿಗಳನ್ನು ಹೊರಗಡೆ ತರಲಾಗುವುದು. ಆಗ ಸಶಸ್ತ್ರ ವಾರ್ಡರ್‌ಗಳು ಸುತ್ತುಗಟ್ಟಿ ನಿಲ್ಲುವರು. ಅವರಲ್ಲಿ ಆತ್ಮಹತ್ಯೆ ಮಾಡಿಕೊಳ್ಳಲು ಬಯಸುವವರು ಮತ್ತು ಓಡಿ ಹೋಗಲು ಇರುವವರು ಕೂಡ ಇರುವರು.

''ಕೈದಿಗಳನ್ನು ಕೊಠಡಿಯಿಂದ ಹೊರಗೆ ಕರೆತರುವ ಸಮಯದಲ್ಲಿ ಅವರ ಕೈಗಳನ್ನು ಹಿಂದಕ್ಕೆ ಕಟ್ಟಿರುವರು. ಅವರಲ್ಲಿ ಕೆಲವರು ಬೊಬ್ಬೆ ಹಾಕುವರು. ಮತ್ತೆ

ಕೆಲವರು ಕೆಳಗೆ ಬಿದ್ದು ಉರುಳಾಡುವರು.''

''ಹೌದು ಹೌದು ಇಂಥದು ಆಗುವುದು ಸಹಜ'' ಎಂದುಸುರಿದ ನಂತರ ಜೈಲರ್ ಮುಂದುವರಿಸಿದ.

''ಕೆಲವು ಉದಾಹರಣೆಗಳಿವೆ. ಅವರ ಯೂನಿಫಾರಂ ಅನ್ನೆ ಹರಿದು ಹಗ್ಗ ಮಾಡಿಕೊಂಡು ಅವರವರೇ ಆತ್ಮಹತ್ಯೆ ಮಾಡಿಕೊಂಡವರಿದ್ದಾರೆ. ಆದರೆ ಈಗ ಹಾಗೂ ಮಾಡಲು ಸಾಧ್ಯವಿಲ್ಲ. ನೀವು ಗಮನಿಸಿದ್ದೀರಲ್ಲಾ, ವೆಂಟಿಲೇಟರ್ಸ್ ಎಷ್ಟೊಂದು ಎತ್ತರವಾಗಿದೆ ಅಂತ? ಅದೂ ಅಲ್ಲದೆ ವಾರ್ಡನ್ ಸಕಲವನ್ನೂ ನೋಡಬಹುದು. ಒಳಗೆ ಹೋಗುವುದನ್ನು ರಾತ್ರಿಯಲ್ಲಿ ಕೂಡಾ.''

ನಾವು ಮತ್ತೊಂದು ಹಾವಸಿಗೆ ಹರಡಿದ ಗೋಡೆಯ ಎದುರುಗಡೆ ನಿಂತೆವು. ಘನವಾದ ಮಂದ ಬಾಗಿಲಿಗೆ ದೊಡ್ಡ ಕಬ್ಬಿಣದ ಸರಳುಗಳನ್ನು ಹಾಕಿದ್ದರು.

''ನೇಣುಗಂಬ ಒಳಗಡೆ ಇದೆ.''

ನಾನು ಒಳಗಡೆ ಗೋಡೆಯ ಹಿಂಬದಿಯಾಗಿ ನೋಡಿದೆ. ನಾನು ಸಣ್ಣ ಹುಡುಗನಾಗಿದ್ದಾಗ ಬಂದರಿನಲ್ಲಿ ನೋಡಿದ್ದ ದೊಡ್ಡದಾದ ತೂಗುವ ಯಂತ್ರದ ಕ್ರೇನಿನಂತೆ ತೂಗುಗಂಬ ಸಹ ಇರಬಹುದೆಂದು ಕಲ್ಪಿಸಿಕೊಂಡಿದ್ದೆ. ಆದರೆ ಜೈಲಿನಲ್ಲಿರುವ ನೇಣುಗಂಬ ಅದರಂತೆ ಇರಲಿಲ್ಲ. ಇಲ್ಲಿ ಹಾವಸಿಗೆ ಹರಡಿರುವ ಗೋಡೆಯ ಹಿಂಬದಿಯಲ್ಲಿ ಎತ್ತರವಾದ ಹೆಂಚು ಹಾಸಿದ ಛಾವಡಿಯಲ್ಲಿ ಕಂದು ಬಣ್ಣವೊಂದು ಗೋಚರಿಸುತ್ತಿತ್ತು.

ಬಾಗಿಲಲ್ಲಿ ತೂಗು ಹಾಕಿದ್ದ ಬೀಗ ಗೋಚರಿಸುತ್ತಿರಲಿಲ್ಲ. ಅದನ್ನು ಬಲವಾಗಿ ಬಿಗಿದು ಬಟ್ಟೆಯಿಂದ ಸುತ್ತಿ ಮುಚ್ಚಿಸುತ್ತಿರುವುದರಿಂದಾಗಿ. ಜಮಾಲ್ ನಿಧಾನವಾಗಿ ಬಟ್ಟೆಯನ್ನು ಬಿಚ್ಚತೊಡಗಿದ. ಜೈಲರ್ ಅವನ ಪ್ಯಾಂಟಿನ ಜೇಬಿನಿಂದ ಉದ್ದನೆಯ ಬೀಗದ ಎಸಳೊಂದನ್ನು ತೆಗೆದು ಬೀಗವನ್ನು ತೆರೆದ. ಆ ದೊಡ್ಡ ಬಾಗಿಲನ್ನು ಅಷ್ಟು ಸುಲಭವಾಗಿ ದೂಡಿ ತೆರೆಯಲು ಕಷ್ಟವಾಗಿತ್ತು. ಜೈಲರ್ ತನ್ನ ಸಹಾಯಕನನ್ನು ಕರೆದು ನೆನಪು ಮಾಡಿಸಿದ.

''ನೋಡು ಜಮಾಲ್, ಈ ಹಿಂಜಾಸುಗಳಿಗೆ ಸ್ವಲ್ಪ ಎಣ್ಣೆ ಹಾಕಬೇಕು.''

ಕೊಠಡಿಯ ಒಳಗೆ ಮಂದವಾಗಿ ಕತ್ತಲು ತುಂಬಿತ್ತು. ಸೂರ್ಯನ ಬೆಳಕೇ ಬೀಳುತ್ತಿರಲಿಲ್ಲ. ಅಲ್ಲಿಯ ವಾತಾವರಣವಿಡೀ ತೇವಗೊಂಡು ಕೊಳೆತ ಹೂವಿನ ವಾಸನೆ ಬರುತ್ತಿತ್ತು.

ಜೈಲರ್‌ಗೆ ಸಹ ಲೈಟು ಹಾಕದೆ ಆ ಪ್ರದೇಶ ಕಾಣುತ್ತಿರಲಿಲ್ಲ. ಆ ಹಳದಿಯ ಮಂದ ಬೆಳಕಿನಲ್ಲಿ ಸಾವಿನ ಯಂತ್ರವನ್ನು ನೋಡಿದೆವು.

ಆ ಮಂದ ಬೆಳಕಿನಲ್ಲಿ ಅರಿವು ತೀರಾ ಕ್ಷೀಣಗೊಂಡಂತೆ ಒಂದು ಅನಿಸಿಕೆ.

''ತಿರುವನಂತಪುರದ ಪೂಜಾಪುರ ಜೈಲು, ಅಲ್ಲಿ ನೇಣು ಹಾಕುವವರು ಪರಂಪರೆಯ ಕುಟುಂಬದಿಂದ ಬಂದವರು. ಇಲ್ಲಿ ನಾವು ಅದೇ ಕೆಲಸವನ್ನು ಮಾಡುತ್ತಿದ್ದೇವೆ.''

''ಎಷ್ಟು ಸಮಯ ತೆಗೆದುಕೊಳ್ಳುತ್ತೆ ಇದು ?''

''ಬಹಳ ಸುಲಭ. ಇದಾ ಮಿ. ರಜಾಕ್ ನನ್ನ ಬದಿಯಲ್ಲಿ ನಿಲ್ಲಿ, ಇಲ್ಲಿ ನೋಡಿ ಪಾಸಿಗೆ ಕೊಡುವವನನ್ನು ಈ ಫ್ಲಾಟ್‌ಫಾರಂನ ಮೇಲೆ ನಿಲ್ಲುವಂತೆ ಮಾಡುವೆವು. ಆ ಬೀಮಿನಿಂದ ಹಗ್ಗವನ್ನು ಎಸೆಯಲಾಗಿದೆ. ನಾನು ನಿಮಗೆ ತೋರಿಸ್ತೇನೆ'' ಎನ್ನುತ್ತ ಆತ ಸಿಳ್ಳು ಕೊಳವೆಯಿಂದ ಹಗ್ಗವನ್ನು ತೆಗೆದು ಜಮಾಲಿನ ತೋಳಿಗೆ ಸುತ್ತಿ ಮತ್ತೊಂದು ತುದಿಯನ್ನು ಅರ್ಧ ಚಂದ್ರಾಕೃತಿಯ ರೀತಿಯಾಗಿ ಗ್ರೂವಿರುವ ಕಬ್ಬಿಣದ ರಾಡಿಗೆ ಸುತ್ತಿದ. ಬಳಿಕ ವಿವರಣೆ ಪ್ರಾರಂಭಿಸಿದ.

''ಇದು ಉರ್ಲು. ಜಮಾಲ್, ಆ ಲಿವರನ್ನು ಎಳೆ ; ನೋಡು, ಹೌದು. ಆ ಲಿವರನ್ನು ಅವನ ಕಾಲಿನಿಂದ ಆಪರೇಟ್ ಮಾಡಿದಾಗ ಈ ಫ್ಲಾಟ್‌ಫಾರಂ ಮಧ್ಯದಲ್ಲಿ ಬಾಯಿ ಬಿಡುತ್ತ ತೆರೆಯುತ್ತೆ. ತಳದಲ್ಲಿ ಗುಂಡಿ...'' ಸಾವಿನ ಯಂತ್ರದ ಸಮೀಪ ಒಂದು ವಿಕಾರವಾದ ನಿಶ್ಶಬ್ದತೆ ಇದ್ದಿತು. ನಾವು ಜೈಲರನ್ನು ಹಿಂಬಾಲಿಸಿದೆವು. ಆತ ಹೇಳಿದ, ''ಪೂಜಾಪುರದಲ್ಲಿ ಹಗ್ಗವನ್ನು ಪಾಸಿ ಹಾಕುವವನೇ ಮಾಡುತ್ತಾನೆ. ನಾವು ಇಲ್ಲಿ ವಿಶೇಷವಾಗಿ ತಯಾರು ಮಾಡುವ ಮದರಾಸಿನ ಮಿಲ್ಲೊಂದರಿಂದ ತರಿಸಿದ್ದು. ತುಂಬಾ ನಯವಾಗಿದೆ. ಆ ಪಾಸಿಗಾರರ ಹಗ್ಗ ತುಂಬಾ ಮಂದ. ಇದು ತುಂಬಾ ಸಮಯ ತೆಗೆದುಕೊಳ್ಳುವುದು.''

ನೇಣುಗಂಬದ ಹಿಂಬದಿಯಲ್ಲಿದ್ದ ಕತ್ತಲಿನ ಗುಂಡಿಯೊಳಗೆ ತಳಕ್ಕೆ ಇಳಿಯಲಿದ್ದ ಮೆಟ್ಟಿಲುಗಳನ್ನು ನಾವು ನೋಡಿದೆವು.

''ನೀವು ಕೆಳಗೆ ಇಳಿಯಲು ಇಷ್ಟ ಪಡುತ್ತೀರಾ ? ತಳದವರೆಗೆ ಮೆಟ್ಟಿಲುಗಳಿವೆ.''

''ಬೇಡ.''

''ಎರಡು ಮೂರು ನಿಮಿಷಗಳು ಮಾತ್ರ. ನೀವು ಕೆಳಗೆ ಇಳಿಯುವುದರ ಒಳಗೆ ಸಕಲವೂ ಮುಕ್ತಾಯವಾಗುವುದು.''

ಆತ ಸಂಖ್ಯೆಗಳನ್ನು ಕೂಡುತ್ತಿದ್ದ. ಕೈದಿಯ ಕೊಠಡಿಯಿಂದ ಈ ಸ್ಥಳಕ್ಕೆ ಸಾಗಿಸುವುದಕ್ಕೆ ಕನಿಷ್ಠ ಎರಡು ಮೂರು ನಿಮಿಷಗಳು ಬೇಕಾಗುತ್ತಿತ್ತು. ಅನಂತರ ಅವರ ತಲೆಗೆ ಕಪ್ಪು ಪೋಷಾಕು ಹಾಕಿ, ಕಬ್ಬಿಣದ ಫ್ಲಾಟ್‌ಫಾರಂನ ಮೇಲೆ ನಿಲ್ಲಿಸಿ ಅವರನ್ನು ಚಾಲೂ ಮಾಡುವುದಕ್ಕೆ ಒಂದು ನಿಮಿಷ ಬೇಕಾಗುತ್ತದೆ. ಸಕಲವೂ... ಎಲ್ಲವೂ ಪರಿಪೂರ್ಣವಾಗಿ ಮುಗಿಯುವಷ್ಟರಲ್ಲಿ ಆರು ಅಥವಾ ಏಳು ನಿಮಿಷ ಬೇಕಾಗುತ್ತದೆ.

''ಶವವನ್ನು ಆ ದಾರಿಯಾಗಿ ಸಾಗಿಸಬೇಕು.''

''ನಾವು ಹೊರಡುವಾ'' ನಾನು ನಮ್ಮ ಜೊತೆಗಾರರಿಗೆ ಹೇಳಿದೆ. ಜೈಲರಿಗೂ ಕೇಳಿಸುವಂತೆ.

''ಒಂದು ಸೆಕೆಂಡು. ನಿಮಗೆ ಒಂದು ಜೋಕು ಕೇಳಬೇಕಾ ? ಆವತ್ತು ಒಂದು ಸಾರಿ – ಯಾವಾಗ ಅದು ಜಮಾಲ್ ? ಹೌದು, ಏಳನೇ ತಾರೀಖಿಗೆ. ನಾವು ಶವವನ್ನು ನೋಡಲು ಗುಂಡಿಯ ಒಳಗೆ ಇಳಿದಾಗ ಅಲ್ಲಿ ಒಂದು ಹಾವು !''

''ವಿಚಿತ್ರ !'' ನಾನು ಗೊಣಗಿದೆ.

''ಏನು ?''

''ತಕ್ಕುದಾದ ಏರ್ಪಾಡು.''

ಒಂದು ಪರಿಪೂರ್ಣವಾದ ವೇದಿಕೆಯ ಮೇಲೆ ಸಿದ್ಧಗೊಂಡಂತೆ ಸಕಲವೂ ಕೂಡ. ಪ್ರಜ್ವಲಿಸುವ ಬೆಳಕು, ಜಗುಲಿಯಲ್ಲಿ ಮತ್ತು ಅಂಗಳದಲ್ಲೂ, ಎತ್ತರವಾದ ವೆಂಟಿಲೇಟರ್, ವಿಷಪೂರಿತವಲ್ಲದ ಪೌಷ್ಟಿಕ ಆಹಾರ, ನುರಿತ ವೈದ್ಯರಿಂದ ಪರೀಕ್ಷಿಸಲ್ಪಟ್ಟಿದ್ದು, ನಯವಾದ ಹಗ್ಗ ಮದರಾಸಿನ ಒಂದು ಮಿಲ್ಲಿನಲ್ಲಿ ವಿಶೇಷವಾಗಿ ತಯಾರಿಸಲ್ಪಟ್ಟಿದ್ದು...

ಆಂತರಿಕವಾಗಿ ಯಾವುದೊಂದು ಕುತೂಹಲವೂ ಸಂತೋಷವೂ ಅನಿಸದಂತೆ ನೆವ ಹೇಳಿದೆ.

''ಚೆನ್ನಾಗಿದೆ ! ವಿಚಿತ್ರ !''

ನಾನು ಬಾಗಿಲಿನ ಎದುರಿಗೆ ತಿರುಗಿದೆ. ಇಕ್ಕಟ್ಟಾದ ಗೇಟಿನ ಮುಖಾಂತರ ಬಾಗಿ ಹೊರಬಂದಾಗ, ತುಸು ಮುಗುಳ್ನಗುವಂತೆ ಆಯಿತು. ಜೈಲರಿನ ಕೈ ಹಿಡಿದು ಕುಲುಕಿ ವಂದನೆಗಳನ್ನು ವ್ಯಕ್ತಪಡಿಸಿದೆ.

ನಮ್ಮ ಕಾರು ಒಂದು ಸುತ್ತು ಬಂದಾಗ, ಎತ್ತರವಾದ ಗೋಡೆಗೂ ಜಲ್ಲಿ ಹಾಸಿದ ಮಾರ್ಗದ ಮಧ್ಯದಲ್ಲಿದ್ದ ಪ್ರದೇಶದಲ್ಲಿ ನೇಣು ಗುಂಡಿಯಿಂದ ಶವಗಳನ್ನು ಜೋಡಿಸುತ್ತಿದ್ದ ಪ್ರದೇಶವು ಗೋಚರಿಸಿತು.

ನಾವು ೫೬ ಕಿ. ಮೀ. ವರೆಗೆ ನಿಶ್ಶಬ್ದವಾಗಿ ಯಾವ ಮಾತುಕತೆಯೂ ಇಲ್ಲದೆ ಹಿಂತಿರುಗಿ ಸಾಗಿದೆವು. ಕಡಲ ಕಿನಾರೆಯ ಹೊಟೇಲು ಒಂದರ ಎದುರು ನನ್ನ ಇತರ ಸ್ನೇಹಿತರನ್ನು ಬೀಳ್ಕೊಡುವ ಸಲುವಾಗಿ ಕಾರಿನಿಂದ ಇಳಿದೆ.

ಕೊನೆಗೆ ನನ್ನ ಮನೆಗೆ ತಲುಪಿ ಹಾಸಿಗೆ ಹಿಡಿದಾಗ ಗೋಡೆಯ ಗಡಿಯಾರ ಮಧ್ಯರಾತ್ರಿಯ ನಂತರದ ಎರಡನ್ನು ಹೊಡೆಯಿತು.

ಕತ್ತಲು, ವಿಕಾರವಾದ ಕತ್ತಲು ನನ್ನ ಸುತ್ತಲೂ ಆವರಿಸಿತು. ಸ್ಮೃತಿಯಲ್ಲಿ ಅರಿವು ಇಲ್ಲದಂತಾ ಒಂದು ಅನಿಸಿಕೆ. ತಲೆಯ ಮೇಲೆ ಕಪ್ಪು ಮುಸುಕು ಇಳಿಸಿ ಶರೀರದ ಮೇಲೆಲ್ಲಾ ಎಳೆದಂತೆ.

ಗಾಬರಿಯಿಂದ ಉಸಿರು ಕಟ್ಟುತ್ತಿದ್ದಂತೆ, ನನ್ನ ಕಣ್ಣುಗಳನ್ನು ತೆರೆದು ಹೆದರಿಕೊಂಡೆ. ಬೆಳಕಿನೆಡೆಗೆ ನೋಡುತ್ತಿದ್ದಂತೆ ಕಣ್ಣೀರು ತುಂಬಿದ ನನ್ನಾಕೆಯ ಮುಖವನ್ನು ದಿಟ್ಟಿಸಿದೆ.

ತೊಟ್ಟಿಕ್ಕುವ ಕಣ್ಣೀರಿನೊಡನೆ ಆಕೆ ಕೇಳಿದಳು.

''ಏನಾಯ್ತು ? ಏನಿದು ?''

ನನ್ನ ಕತ್ತು ಹಿಸುಕಿತು. ನನ್ನ ಕೈಗಳಿಂದ ಶಿರವನ್ನು ಹಿಡಿದು ಮುಖವನ್ನು ತಲೆದಿಂಬಿನ ಮೇಲೆ ಗುದ್ದುತ್ತಿದ್ದೆ. ಕಣ್ಣುಗಳಿಂದ ಧಾರಾಕಾರದ ಅಶ್ರು ಸುರಿಯುತ್ತಿತ್ತು.

''ನಾನು ಸತ್ತೆ, ನಾನು ಸತ್ತೆ !'' ಎಂದು ತೊದಲಿದೆ.

**ಮಲೆಯಾಳದಿಂದ : ಅನು : ಕೋವರ್‌ಕೊಲ್ಲಿ ಕರುಣಾಕರ**
ಶ್ರೀ ಸಾಯಿ ದುರ್ಗಾ, ೩ನೇ ಅಡ್ಡರಸ್ತೆ, ವೇಗಾಸ್ ಟೌನ್ ಶಿಪ್, ಕಿನ್ನಿಮೂಲ್ಕಿ, ಉಡುಪಿ - ೫೭೬ ೧೦೧

'ಕವಿತೆಗೆ ವಸ್ತುವೆಂಬುದು ನೆಪ, ನಿಮಿತ್ತ. ಭಾವಲಹರಿಯೇ ನಿಜವಾದ ಕವಿತೆ' ಎಂದು ಕವಿತೆಯನ್ನು ವ್ಯಾಖ್ಯಾನಿಸುವ ಸ. ಉಷಾ ಅವರ ಕಾವ್ಯಶ್ರದ್ಧೆ ವಿಶಿಷ್ಟವಾದದ್ದು. ಉದಾರ ಸ್ತ್ರೀವಾದ ಪ್ರತಿಪಾದಕರಾದ ಉಷಾ ಅವರು ಈಗಾಗಲೇ ತಮ್ಮ ಎರಡು ಕವನ ಸಂಕಲನಗಳಾದ – 'ತೊಗಲು ಗೊಂಬೆಯ ಆತ್ಮಕತೆ', 'ಈ ನೆಲದ ಹಾಡು' – ಮೂಲಕ ಕನ್ನಡದ ಕಾವ್ಯ ಪ್ರೇಮಿಗಳಿಗೆ ಸಾಕಷ್ಟು ಪರಿಚಿತರು. ಅರಸೀಕೆರೆಯ ಶ್ರೀ ಹೊಯ್ಸಳೇಶ್ವರ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಇವರು 1991ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಪಡೆದಿದ್ದಾರೆ. ಇದೀಗ ಐವತ್ತರ ಗಡಿಯನ್ನು ದಾಟಿದ ಈ ಕನ್ನಡದ ಮಹತ್ವದ ಕವಯಿತ್ರಿಯ ಜೊತೆಗೆ ಸಾಹಿತ್ಯ, ಸ್ತ್ರೀವಾದ ಮತ್ತು ಬದುಕಿನ ಕುರಿತು ಸಂದರ್ಶನದ ನೆಪದಲ್ಲಿ ಪ್ರಶ್ನೆಗಳನ್ನು ಹಾಕಿ ಉತ್ತರ ಪಡೆದುಕೊಂಡದ್ದು ಇಲ್ಲಿದೆ.



# ಸಮಾನತೆಯೊಡನೆ ಬದುಕಿನ ಅನೇಕ ಜವಾಬ್ದಾರಿಗಳೂ ಬರುತ್ತವೆ

– ಸ. ಉಷಾ

**ವಿಜಯಕಾಂತ ಪಾಟೀಲ :** ನೀವು ಕವಿತೆಯನ್ನು ವರಿಸಿದ್ದು ಹೇಗೆ ? ಕವಿತೆಯೆಂದರೆ ನಿಮಗೇಕಷ್ಟು ಪ್ರೀತಿ ?

**ಸ.ಉಷಾ :** 'ವರಿಸಿದ್ದು' ಎಂಬ ನಿಮ್ಮ ಪದದ ಆಯ್ಕೆ ರೋಮಾಂಚನಗೊಳಿಸುವಂತಿದೆ. ನಾನು ಕವಿತೆಯನ್ನು 'ವರಿಸಲಿಲ್ಲ' ; ಒಂದು ತಳಮಳದ ಸಂಜೆ ಕವಿತೆ ನನ್ನನ್ನು 'ಆ-ವರಿಸಿಕೊಂಡಿತು'. ನನ್ನೊಳಗೆ ನನ್ನಮ್ಮ ನನ್ನಪ್ಪ – ಕಂದಾಚಾರದರಮನೆಯ ಗೋಡೆಗಳು ಮೂಗುಬ್ಬಸಪಡಿಸುತ್ತಿದ್ದವು. ನಾನು ಬಾಲ್ಯದಲ್ಲಿ ಪಡೆದು ತಾರುಣ್ಯದಲ್ಲಿ ಕಳಕೊಂಡ ಬೆಳಕು ಬಿಸಿಲು ಹಸಿರುಗಳನ್ನು ಅರಸುತ್ತ ಹೊರಟಾಗ ಕವಿತೆ ನನ್ನನ್ನು ಆ-ವರಿಸಿಕೊಂಡಿತು.

ನನಗೆ ಸಾಹಿತ್ಯದ ಎಲ್ಲ ಪ್ರಕಾರಗಳೂ ಪ್ರೀತಿಯೇ. ನಾನು ಹೆಚ್ಚು ಕವಿತೆ ಬರೆಯುವುದರಿಂದ ನೀವು ಈ ಪ್ರಶ್ನೆ ಕೇಳಿದ್ದೀರಿ ಅಂದುಕೊಳ್ಳುತ್ತೇನೆ. ಕವಿತೆ ಬಹುಮುಖೀ ವಜ್ರದ ಹಾಗೆ ಬಚ್ಚಿಡುತ್ತದೆ, ಬಿಚ್ಚಿಡುತ್ತದೆ, ಆಡುತ್ತದೆ, ಆಡಿಸುತ್ತದೆ. ಎಲ್ಲ ಹೇಳಿದ ಮೇಲೂ ಹೇಳುವುದನ್ನು ಉಳಿಸಿಕೊಳ್ಳುತ್ತದೆ. ಹೇಳಿದ್ದರ ಆಚೆಗೂ ಇನ್ನೇನೋ ಹೇಳುತ್ತದೆ. ಹಾಡಿ ಮುಗಿದ ಮೇಲೂ ಕೇಳಿಸುತ್ತಲೇ ಇರುತ್ತದೆ. ಹೀಗೆ, ಇನ್ನೂ ಏನೇನೋ...

**ವಿ.ಪಾ :** ನಿಮ್ಮ ಪ್ರೀತಿಯ ಕವಿ ಯಾರು ? ಯಾಕೆ ?

ಸಂದರ್ಶನ
ವಿಜಯಕಾಂತ ಪಾಟೀಲ

**ಸ.ಉಷಾ :** ಕನ್ನಡ ಕವಿತೆಯ ಎಲ್ಲ ಉತ್ತುಂಗಗಳು ನನಗೆ ಪ್ರೀತಿಯವು. ಇಂಗ್ಲಿಷ್ ಮತ್ತು ಹಿಂದಿಯ ಕೆಲ ಬಿಡಿ ಕವಿತೆಗಳು ನನ್ನನ್ನು ಆಳವಾಗಿ ಕಲಕಿ ಮತ್ತೆ ಮತ್ತೆ ಹಾಡಿಸಿಕೊಳ್ಳುತ್ತವೆ.

ಬೇಂದ್ರೆಯವರು ಶಬ್ದ-ಅರ್ಥದ ನಿರಂತರ ಹುಡುಕು-ಮುಟ್ಟುವ ಆಟ, ಕೆ.ಎಸ್.ನ.ರ ಪ್ರೀತಿಯ ಕೋಮಲ ಪ್ರಪಂಚ, ಕುವೆಂಪುರವರ ದಿಟ್ಟ ವೈಚಾರಿಕತೆ, ಅಡಿಗರ ಲಯಬಂಧ, ಹೊಸ ಭಾಷೆಯ ಕಟ್ಟೋಣ-ಒಡೆಯೋಣ, ಹಳೆಯ ಪುರಾಣದಲ್ಲಿ ಇಂದಿನ ಕತೆ ಹುಡುಕುವ ಶಿವಪ್ರಕಾಶ್‌ರ ಆರ್ತತೆ ಮತ್ತು ದಿಟ್ಟತನ, ಸತ್ಯಕ್ಕೆ ನಿರ್ಭಿಡೆಯಾಗಿ ಮುಖಾಮುಖಿಯಾಗುವ ಪ್ರತಿಭಾರ ಹೊಳಹುಗಳು, ಅಡುಗೆ ಮನೆಯ ಹುಡುಗಿಯನ್ನು, ಅರ್ಧರಾತ್ರಿಯ ಹುಡುಗಿಯನ್ನು ಹುಡುಕಿಕೊಟ್ಟ ವೈದೇಹಿ ಮತ್ತು ಜ್ಯೋತಿ ಗುರುಪ್ರಸಾದ್ – ಹೇಳುತ್ತಾ ಹೋದರೆ ಪಟ್ಟಿ ಬೆಳೆಯುತ್ತದೆ. ಇವರೆಲ್ಲರೂ ನನಗೆ ಪ್ರೀತಿಯವರೇ ಏಕೆ ಎಂಬುದೂ ಇಲ್ಲೇ ಇದೆ.

**ವಿ.ಪಾ :** ಕಾವ್ಯ ಬರೀ ಕಲಾತ್ಮಕತೆಯನ್ನೇ ಮೈಗೂಡಿಸಿಕೊಂಡು ಅರಳಿದರೆ ಸಾಕೇ ? ಕಾವ್ಯಕ್ಕಿರುವ ಶಕ್ತಿ ಎಂಥದೆಂದು ನೀವು ಹೇಳುತ್ತೀರಿ ?

**ಸ.ಉಷಾ :** ಕವಿತೆಯಲ್ಲಿ ಬರಿಯ ಕಲಾತ್ಮಕತೆ ಎಂಬುದು ಇಲ್ಲ; ಹಾಗೇನಾದರೂ ಇದೆಯೆಂದುಕೊಂಡರೆ ಅದು ಪ್ರಾಣವಿಲ್ಲದ ಒಡಲು.

'ಶಿರವಿಲ್ಲದ ಸೌಂದರ್ಯ ಶವಮುಖದಾ ಕಣ್ಣು' ಎಂದು ನಮ್ಮ ಶತಮಾನ ಕಂಡ ಶ್ರೇಷ್ಠ ಚಿಂತಕರಲ್ಲೊಬ್ಬರಾದ ಕುವೆಂಪು ಇದಕ್ಕಾಗಲೇ ಉತ್ತರಿಸಿದ್ದಾರೆ.

ಕಾವ್ಯ ರೂಪುರೇಷೆಗನುಗುಣವಾಗಿ ಹುಟ್ಟುವ ಸರಕು ಅಲ್ಲ. ಅದು ಹೀಗೆಲ್ಲ ಇರಬೇಕು – ಅದರೊಳಗೆ ಸಮಾಜಮುಖತೆ, ಕಲಾತ್ಮಕತೆ, ಭಾಷಾ ಸೌಂದರ್ಯ ಇತ್ಯಾದಿತ್ಯಾದಿಗಳೆಲ್ಲ ಇಷ್ಟಿಷ್ಟೇ ಪ್ರಮಾಣದಲ್ಲಿ ಇರಬೇಕು ಎಂದು ವಿಧಿಸುವುದಕ್ಕೆ ಕಲಾತ್ಮಕತೆ ಎಂಬ ಮಾತಿನಲ್ಲೇ ಈ ಎಲ್ಲ ಪ್ರಮಾಣಬದ್ಧತೆಯೂ ಇದೆ.

ಕಾವ್ಯಕ್ಕಿರುವ ಶಕ್ತಿ ಎಂಥದು ಎಂಬ ಬಗ್ಗೆ ಭಾರತೀಯ ಕಾವ್ಯ ಮೀಮಾಂಸೆಯ ಕಾಲದಿಂದ ಹಿಡಿದು ಇಂದಿನವರೆಗೆ ಸಾಕಷ್ಟು ಚರ್ಚೆ ನಡೆದಿದೆ. ಮಮ್ಮಟ ''ಕಾವ್ಯಂ ಯಶಸೇ ಅರ್ಥಕೃತೇ'' ಎಂದರೆ – ಇಂದಿನ ಬಂಡಾಯ ಕವಿ ಕಾವ್ಯವನ್ನು 'ಜನರ ನೋವಿಗೆ ಮಿಡಿವ ಪ್ರಾಣಮಿತ್ರ' ಎನ್ನುತ್ತಾನೆ. ಕಾವ್ಯ ನೇರವಾಗಿ ಸಮಾಜದ ಬದಲಾವಣೆಗೆ, ಪರಿವರ್ತನೆಗೆ ಕಾರಣವಾಗದಿರಬಹುದು. ಪರೋಕ್ಷವಾಗಿ ಅದು ಸಮಾಜ ಪರಿವರ್ತನೆಗೆ ಕಾರಣವಾಗಬಹುದು. ಶರಚ್ಚಂದ್ರರ 'ಶೇಷಪ್ರಶ್ನೆ' ಪ್ರಕಟವಾದ ಮೇಲೆ ವಿಚ್ಛೇದನದ ಕಾನೂನುಗಳು ಸರಳಗೊಂಡವಂತೆ. ಜಾಣೆ ಕಮಲ ''ಕತ್ತಲ ಹೂವಿನ ಹಾಡ''ನ್ನು ಕನ್ನಡಕ್ಕೆ ತಂದರೆ ಅದು ಬೆಳಕಿನ ನಾಡಿನಲ್ಲೊಂದಿಷ್ಟು ಕಪ್ಪು ಬೆಳಕು ಚೆಲ್ಲಬಹುದು. 'ಅಡಿಗೆ ಮನೆಯ ಹುಡುಗಿ' –

ಓದಿದ ಮೇಲೆ ಮನೆ ಕಟ್ಟಿಸುವ ಸೂಕ್ಷ್ಮ ಮನದ ಪುರುಷ ಒಂದಿಷ್ಟು ಗಾಳಿ ಬೆಳಕಿರುವ ಅಡಿಗೆ ಮನೆ ಕಟ್ಟಿಸಬಹುದು. ಕಾವ್ಯಕ್ಕಿರುವ ಶಕ್ತಿ ಇಂಥದು – ಓದಿದವನ ಮನಸ್ಸನ್ನು ಬಹುಸೂಕ್ಷ್ಮವಾಗಿ ಒಳಿತಿನ ಕಡೆಗೆ ಬದಲಿಸುವಂಥದು. ಹಾಗಂತ ಕಾವ್ಯ purposeful propaganda ಆಗಬಾರದು. ಕವಿತೆಯ/ಸಾಹಿತ್ಯದ ಕಲಾತ್ಮಕತೆ ಈ ಎಲ್ಲ ಅಂಶಗಳನ್ನು ಒಳಗೊಂಡಿದೆ.

**ವಿ.ಪಾ :** ಕನ್ನಡದ ಮಟ್ಟಿಗೆ ಕುವೆಂಪು-ಬೇಂದ್ರೆ-ಕೆ.ಎಸ್.ನ-ಕಣವಿಯಂತಹವರ ಹಾಗೆ ಕೋಟ್ ಮಾಡಬಹುದಾದ ಕವಯಿತ್ರಿಯರೇಕೆ ಬರಲಿಲ್ಲ? ಇವತ್ತಾದರೂ ಅಂಥವರಿದ್ದಾರೆಂದು ನಿಮಗನ್ನಿಸಿದೆಯೇ?

**ಸ.ಉಷಾ :** ಈ ಪ್ರಶ್ನೆಗೆ ಉತ್ತರವನ್ನು ಬರೀ ಕಾವ್ಯಕ್ಕಷ್ಟೇ ಅಲ್ಲ; ಇಡೀ ಮಹಿಳಾ ಸಾಹಿತ್ಯಕ್ಕೆ ಅನ್ವಯಿಸಿಕೊಂಡು ಕೊಡಬೇಕು. ಇದೂ ಅಷ್ಟೆ ತುಂಬಾ ಸ್ವಾರಸ್ಯಕರ ಉತ್ತರಗಳನ್ನು ಹೊರಡಿಸುವ ಪ್ರಶ್ನಕನ ಬಹುಶ್ರುತತೆಯನ್ನು ಪ್ರಶ್ನಿಸುವ ಪ್ರಶ್ನೆ. ಹೀಗೆ ಕೇಳುವವರು ಮಹಿಳಾ ಸಾಹಿತ್ಯವನ್ನು ಶ್ರದ್ಧೆಯಿಂದ ಓದಿರುವುದಿಲ್ಲ. ಕೋಟ್ ಮಾಡುವುದಿಲ್ಲ ಮತ್ತು ಈ ಪ್ರಶ್ನೆ ಪುರುಷ ಸಾಹಿತ್ಯಕ್ಕೂ ಅನ್ವಯಿಸುತ್ತದೆ ಎಂಬುದನ್ನು ಮರೆತುಬಿಡುತ್ತಾರೆ. ಬೇಂದ್ರೆ - ಕಾರಂತ - ಕೆ.ಎಸ್.ನ - ಕಣವಿ - ಜಿ.ಎಸ್.ಎಸ್ – ತರದ ಕವಿಗಳು ಮತ್ತೆ ಪುರುಷ ಸಾಹಿತ್ಯದಲ್ಲೂ ಬಂದಿಲ್ಲ ಹೌದೋ ಅಲ್ಲವೋ? ಪ್ರಶ್ನಕ ವಾದಕ್ಕಾಗಿ ವಾದ ಮಾಡದೆ ತೆರೆದ ಮನಸ್ಸಿನಿಂದ ಸಾಹಿತ್ಯವನ್ನೋದಿ ಈ ಪ್ರಶ್ನೆ ಕೇಳಿಕೊಳ್ಳಬೇಕು. ಕುವೆಂಪು-ಬೇಂದ್ರೆ ಕಾಲದಲ್ಲೇ-

''ಗಿಡವೆಂದು ತಿಳಿದೆಯೋ ಹೆಣ್ಣುಜನ್ಮದ ಒಡಲ
ಫಲಗಳನು ಮನಬಂದಂತೆ ಸೃಜಿಸುವುದಕ್ಕೆ'' ಎಂದು ಬರೆದ ಬೆಳಗೆರೆ ಜಾನಕಮ್ಮ,
''ಒಲೆ ಬದಲಾಗಿದೆ ಉರಿ ಬದಲಾಗಿದೆಯೆ'' ಎನ್ನುವ ಕವಿತಾ ರೈ,
''ನನ್ನ ಕವಿತೆಗೆ ಮರೆ ತಿಳಿಯದು'' ಎನ್ನುವ ಪ್ರತಿಭಾ,
''ನೋಡಬಾರದು ಚೀಲದೊಳಗನು ಪುರುಷರೇ'' ಎನ್ನುವ ವೈದೇಹಿ,

ಇವರೆಲ್ಲರ ಕಾವ್ಯವನ್ನು ಎದೆ ತೆರೆದು ಓದುವ, ಪ್ರೀತಿಯಿಂದ ಕೋಟ್ ಮಾಡುವ ಪುರುಷ ವಿಮರ್ಶಕರು, ಸಾಹಿತ್ಯಾಸಕ್ತರು ಬರುವವರೆಗೂ ಈ ಪ್ರಶ್ನೆ ಇದ್ದೇ ಇರುತ್ತದೆ.

ಇದಕ್ಕೆ ಉತ್ತರ ಕವಿತೆಯೊಳಗೇ ಇದೆ :

ಚಿಂತೆಯಿಲ್ಲ ಬಿಡಿ
ಅವನಿಗೆ ಆ ಸೂರ್ಯ ಮುಕ್ತ ಸಂಜ್ಞೆಯ
ಸ್ವಯಂಪ್ರಭೆ ಕಾಣುವುದು ಕಷ್ಟ
ಆದರೆ ಅವಳಿಗೆ ಗೊತ್ತಿದೆ
ಅವನಿಗೆ ಕಾಣದಿರುವುದೂ ಇದೆ
ಅವನ ಕಿತ್ತ ಷರಟಿನ ಗುಂಡಿ
ಅವನ ಪ್ಯಾಂಟಿನ ಜೇಬಿಗೆ ಹತ್ತಿದ ಕೊಳೆ
ಅವನ ಗುಂಡಿ ಹೊಲೆದುಕೊಳ್ಳಲು ಸೂಜಿ
ಹೊಂದುವ ಬಣ್ಣದ ದಾರ
ಎಲ್ಲಿದೆ, ಎಲ್ಲಿದೆ,
ಅನೇಕ ಮಹಾಘನಗಳೊಡನೆ
ಆ ಅಣುವೂ ಅಲ್ಲೇ ಇರುತ್ತದೆ
ಅವನಿಗೆ ಕಾಣುವುದಿಲ್ಲ ಅಷ್ಟೇ.

ಇಲ್ಲಿ ಇನ್ನೊಂದು ಸ್ವಾರಸ್ಯಕರ ವಿಚಾರವಿದೆ. ನಿಮ್ಮ ಕವಿಗಳ ಪಟ್ಟಿ ಕಣವಿಯವರ ವರೆಗೆ ನಿಂತಿದೆ. ಅಲ್ಲಿಂದ ಮುಂದಕ್ಕೆ ಕುವೆಂಪು-ಬೇಂದ್ರೆ-ಕೆ.ಎಸ್.ನ-ಕಣವಿ ತರದ ಕವಿಗಳೇಕೆ ಬರಲಿಲ್ಲ ಎಂದು ಇಂದು ಅಂಥವರಿದ್ದಾರೆಯೇ ಎಂದು ಪ್ರತಿಭಾ, ವೈದೇಹಿ, ಮೀರಾ, ಕವಿತಾ ಪ್ರಶ್ನಿಸುವುದಿಲ್ಲ, ಯಾಕೆಂದರೆ ಅವರು ಎಲ್ಲ ಸಾಹಿತ್ಯವನ್ನು ಎದೆ ತೆರೆದು ಓದುತ್ತಾರೆ. ಇವತ್ತಿನ ಒತ್ತಡಗಳಲ್ಲಿ ವೈಯಕ್ತಿಕ ನೆಲೆಯಲ್ಲಿ ಬರೆಯುವ ಕವಿ ಕುವೆಂಪು, ಬೇಂದ್ರೆ, ಕೆ.ಎಸ್.ನ, ಕಣವಿ 'ಥರ'ವೇ ಬರೆಯಲು ಸಾಧ್ಯವಿಲ್ಲ ಎಂಬ ಸತ್ಯ ಅವರಿಗೆ ಗೊತ್ತಿದೆ.

**ವಿ.ಪಾ :** ಈಚಿನ ದಿನಗಳಲ್ಲಿ ಸ್ತ್ರೀವಾದಿ ಚಿಂತನೆ ಪ್ರಬಲಗೊಳ್ಳಲು ಕಾರಣವೇನು? ಸ್ತ್ರೀವಾದ ಅತಿಯಾಯಿತೆನ್ನುವ ಮಾತೂ ಇದೆ, ನೀವೇನನ್ನುತ್ತೀರಿ?

**ಸ.ಉಷಾ :** ಸ್ತ್ರೀವಾದಿ ಚಿಂತನ ''ಈಚಿನ ದಿನಗಳಲ್ಲಿ'' ಪ್ರಬಲಗೊಂಡಿರುವುದಲ್ಲ. ಕರ್ನಾಟಕಕ್ಕೆ ಒಂದು ಪ್ರಬಲವಾದ ಸ್ತ್ರೀಪ್ರಾಧಾನ್ಯದ ಸಾಂಸ್ಕೃತಿಕ ಹಿನ್ನೆಲೆಯಿದೆ. ಅದನ್ನು ಪ್ರಧಾನವಾಹಿನಿ ಸರಿಯಾಗಿ ಗುರ್ತಿಸಿಲ್ಲ ಅಷ್ಟೇ. ತಿರುಮಲಾಂಬ, ಕಲ್ಯಾಣಮ್ಮ, ಶ್ಯಾಮಲಾ ಬೆಳಗಾಂವಕರ್, ಬೆಳಗೆರೆ ಜಾನಕಮ್ಮ ಇವರುಗಳನ್ನು 'ಈಚಿನ' ದಿನಗಳಲ್ಲಿ ಗುರ್ತಿಸಲಾಗಿದೆ, ಅಷ್ಟೇ. ಉದ್ಯೋಗಾವಕಾಶಗಳು, ವಿದ್ಯೆ ಮತ್ತು ಆಧುನಿಕ ಜೀವನಕ್ರಮ ಇವೆಲ್ಲವೂ ಮಹಿಳೆಯನ್ನು ಒಂದು ಕತ್ತಲೆಯಿಂದ ಬಿಡುಗಡೆ ಮಾಡಿದವು ನಿಜ. ಆದರೆ ಇನ್ನೊಂದು ರೀತಿಯ ಒತ್ತಡವನ್ನು ಮಹಿಳೆಯ ಮೇಲೆ ಹೇರಿದವು. ಇದು ಕರ್ನಾಟಕದ ನಮ್ಮೂರಿನ ಚಿತ್ರ. ಇನ್ನೊಂದು ವಿಶ್ವಚಿತ್ರವಿದೆ. ಪ್ರಪಂಚದಾದ್ಯಂತ ಎಪ್ಪತ್ತರ ದಶಕ, ತುಳಿಯಲ್ಪಟ್ಟವರು ಎಚ್ಚರಗೊಂಡು ಚಳುವಳಿಗಳನ್ನು ಕಟ್ಟಿದ ದಶಕ (ಈ ಮಾತನ್ನು ನಾನು ಕೇವಲ ನನ್ನ ವೈಯಕ್ತಿಕ ತಿಳಿವಿನಿಂದ ಹೇಳುತ್ತಿರುವುದಷ್ಟೇ ಅಲ್ಲ; Tao of Physics ಎಂಬ ಪುಸ್ತಕದ ಮುನ್ನುಡಿಯಲ್ಲಿ ಫ್ರಿಟ್ಸ್ ಕಾಪ್ರಾ ಎಂಬ ವಿಜ್ಞಾನಿ-ಚಿಂತಕ ಹೇಳಿರುವುದೂ ಹೌದು) ಇದರ ಪರಿಣಾಮ ಢಾಳಾಗಿ ಕಣ್ಣಿಗೆ ಹೊಡೆಯುವ ಹಾಗೆ ಕಾಣುತ್ತಿರುವುದು ''ಈಚಿನ ದಿನಗಳಲ್ಲಿ.''

''ಸ್ತ್ರೀವಾದ ಅತಿಯಾಯಿತು'' ಎಂಬ ಮಾತೂ ಹೀಗೇ ಇಡಿಯಾಗಿ ಮಹಿಳಾ ಚಳುವಳಿಗಳ ಆರೋಗ್ಯಕರ ಚಿಂತನೆಯ ಅರಿವಿಲ್ಲದ ''ಭೀತರು'' ಆಡುವ ಮಾತು. ನಿಜವಾದ ಸ್ತ್ರೀವಾದ ಮನುಕುಲದ ಸಂಪೂರ್ಣ ಆರೋಗ್ಯಕ್ಕೆ ತನ್ನ ಕಾಣಿಕೆಯನ್ನು ಕೊಡುವಂಥದು. ಅದನ್ನು ಮುಕ್ತ ಮನಸ್ಸಿನಿಂದ ಅರ್ಥೈಸಿಕೊಳ್ಳಬೇಕು. ಈ ಮಾತು ಎಲ್ಲ ತುಳಿಯಲ್ಪಟ್ಟವರ ಚಳುವಳಿಗಳಿಗೂ ವಾದಗಳಿಗೂ ಅನ್ವಯಿಸುತ್ತದೆ. ಅತಿರೇಕಗಳನ್ನಷ್ಟೇ ಗಮನದಲ್ಲಿಟ್ಟುಕೊಂಡು ಮಾತಾಡುವವರು ಹಿಮ ಪರ್ವತದ ತುದಿಗಳನ್ನು ಮಾತ್ರ ಗಮನಿಸಿ ಮಾತಾಡುತ್ತಿರುತ್ತಾರೆ.

**ವಿ.ಪಾ :** ನೀವೆಂಥ ಸ್ತ್ರೀ ಸಮಾನತೆ ಬಯಸುತ್ತೀರಿ?

**ಸ.ಉಷಾ :** ಸಮಾನತೆಯೊಡನೆ ಬದುಕಿನ ಅನೇಕ ಜವಾಬ್ದಾರಿಗಳೂ ಬರುತ್ತವೆ. ಒಂದೊಂದೇ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸುತ್ತ ಹೋದಾಗ, ದಬ್ಬಾಳಿಕೆಯನ್ನು ಸಹಿಸದೆ ಬಾಳತೊಡಗಿದಾಗ ಸಮಾನತೆ ಸದ್ದಿಲ್ಲದೆ ಸ್ಥಾಪಿತವಾಗುತ್ತದೆ. ನನಗೆ ಅಪ್ಪನ ಜೇಬಿನಲ್ಲಿರುವಷ್ಟು ದುಡ್ಡು ಸಿಕ್ಕಿದ್ದರೆ ಎಲ್ಲಕ್ಕೂ ಐಸ್‌ಕ್ರೀಂ ತಿಂದು ಖುಷಿ ಪಟ್ಟು ಬಿಡುತ್ತಿದ್ದೆ ಎಂದು ಮಗುವಾಗಿದ್ದಾಗ ಯೋಚಿಸಬಹುದು. ಅಪ್ಪನಾಗಿ ಗೃಹಸ್ಥನಾದ ಮೇಲೆ ಹಾಗೆ ಮಾಡಲಾಗುತ್ತದೆಯೇ? ನಾನು ಬಯಸುವ ಸಮಾನತೆ ಪರಸ್ಪರರನ್ನು ಗೌರವಿಸುವ, ಬದುಕಿನ ಜವಾಬ್ದಾರಿಗಳನ್ನು ಹಂಚಿಕೊಳ್ಳುವ ಸಮಾನತೆ.

**ವಿ.ಪಾ :** 'ಹೆಣ್ಣಿಗೆ ಹೆಣ್ಣೇ ಶತ್ರು' – ಎಂಬ ಮಾತನ್ನು ನೀವು ಹೇಗೆ ಅರ್ಥೈಸುತ್ತೀರಿ?

**ಸ.ಉಷಾ :** ಇದೂ ಸಹ ಬಹಿರಂಗದ ನಡವಳಿಕೆಗಳನ್ನು ಮೇಲುನೋಟಕ್ಕೆ ಅರ್ಥೈಸಿ ಹೇಳುವ ಮಾತು. ಅತ್ತೆ ಸೊಸೆಯನ್ನು ಗೋಳು ಹೊಯ್ದುಕೊಳ್ಳುತ್ತಾಳೆ. ಸೊಸೆ ಅತ್ತೆಯನ್ನು ನೋಯಿಸುತ್ತಾಳೆ. ಸರಳವಾಗಿ ನೋಡುವವರು ಹೆಣ್ಣಿಗೆ ಹೆಣ್ಣೇ ಶತ್ರು ಎಂದು ಹೇಳಿಬಿಡುತ್ತಾರೆ. ಈ ಬಹಿರಂಗ ವರ್ತನೆಯ ಹಿನ್ನೆಲೆಯಲ್ಲಿ ಸಂಪತ್ತಿನ ವಿತರಣೆ, ಸಂಗ್ರಹಗಳ ಅಧಿಕಾರವನ್ನು ಮುಷ್ಟಿಯಲ್ಲಿರಿಸಿಕೊಂಡ ಪುರುಷನಿದ್ದಾನೆ. ಅವನನ್ನು ತೃಪ್ತಿಪಡಿಸಲು ಒಂದು ಕುಟುಂಬದಲ್ಲಿರುವ ಇಬ್ಬರು ಸ್ತ್ರೀಯರೂ ಪ್ರಯತ್ನಿಸುತ್ತಿರುತ್ತಾರೆ. ಇದು ಪರ್ಯಾಯವಾಗಿ ತನ್ನ ಮಗ ಅಥವಾ ಗಂಡ ಆಗಿರುವ ಒಬ್ಬ ಪುರುಷನ ಮೂಲಕ ಹೆಚ್ಚೆಚ್ಚು ಸವಲತ್ತುಗಳನ್ನು ಪಡೆಯುವ ತಂತ್ರವಾಗಿದೆ. ಇದರಲ್ಲಿ ಇಬ್ಬರು ಸ್ತ್ರೀಯರೇ ಭಾಗಿಗಳಾಗಿರಬೇಕೆಂದೇನೂ ಇಲ್ಲ. ಇಬ್ಬರು ಸಹಪಾಠಿಗಳು ಒಂದೇ ಸ್ಥಾನಕ್ಕೆ ಅರ್ಜಿ ಹಾಕಿದಾಗ, ಇಬ್ಬರು ಉದ್ಯೋಗಿಗಳು ಒಬ್ಬ ಬಾಸ್ ಕೆಳಗೆ ಕೆಲಸ ಮಾಡುವಾಗ ಅತ್ತೆ-ಸೊಸೆ ನಡವಳಿಕೆ ಮಾದರಿಯ ಎಲ್ಲ ತಂತ್ರಗಳೂ ಉಪಯೋಗವಾಗುತ್ತವೆ. ಇದು ಬದುಕನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ತಿಳಿಯುತ್ತದೆ. ಹಾಗೇ ವಧುದಹನ, ತನ್ನ ಆಯ್ಕೆಯಲ್ಲದ ಸೊಸೆಯನ್ನು ಹಿಂಸಿಸುವುದು, ಒಂದು ಕಂಪನಿಯ ಅಂತರಂಗದ ರಾಜಕೀಯ ಚದುರಂಗ, ಹಳೆ ಕೈದಿ ವಾರ್ಡರನಾಗುವುದು, ಭಿನ್ನವೇನಲ್ಲ. ಇದೆಲ್ಲದರ ಹಿನ್ನೆಲೆಯಲ್ಲಿರುವುದು ಶಕ್ತಿ ರಾಜಕೀಯವೇ.

**ವಿ.ಪಾ :** ಬಂಡಾಯ ಮನೋಭಾವನೆ ಹೆಚ್ಚು ಕಡಿಮೆ ಲೇಖಕಿಯರೆಲ್ಲರಲ್ಲೂ ಇದ್ದೇ ಇರುತ್ತದಲ್ಲವೇ?

**ಸ.ಉಷಾ :** ಇದೂ ಸಹ ಒಂದು ಬೀಸು ಹೇಳಿಕೆ. ಎಲ್ಲ ಬರಹವೂ ಬಂಡಾಯವೇ ಎನ್ನುವ ನೆಲೆಯಲ್ಲಿ ಬಂಡಾಯ ಮನೋಭಾವನೆ ಲೇಖಕಿಯರಲ್ಲೂ ಇರುತ್ತದೆ. ಹಾಗೇ ಸ್ಥಾಪಿತ ಮೌಲ್ಯಗಳನ್ನು ವೈಭವೀಕರಿಸಿ ಬರೆಯುವ ಲೇಖಕಿಯರೂ ಇದ್ದಾರೆ. ಲೇಖಕರಲ್ಲಿ ಇರುವಂತೆಯೇ ಸ್ಥಾಪಿತ ಮೌಲ್ಯಗಳನ್ನು ಪ್ರತಿಪಾದಿಸುವ ಲೇಖಕಿಯರಿಲ್ಲವೇ?

**ವಿ.ಪಾ :** ಲೇಖಕಿಯಾಗಿ ನೀವು ನೊಂದುಕೊಳ್ಳುವಂತಹ ಸಂದರ್ಭವೇನಾದರೂ ನಿಮಗೆ ಎದುರಾದದ್ದಿದೆಯೇ?

**ಸ.ಉಷಾ :** ಸಾಮಾನ್ಯವಾಗಿ ಮಹಿಳೆಯರ ಬಗ್ಗೆ ಅಥವಾ ವಿಶೇಷವಾಗಿ ಲೇಖಕಿಯರ ಬಗ್ಗೆ ಅಥವಾ ನಾನು ಗೌರವಿಸುವ ಯಾವುದೇ ಮೌಲ್ಯಗಳ ಬಗ್ಗೆ ಯಾರಾದರೂ ಹಗುರವಾಗಿ ಪ್ರತಿಕ್ರಿಯಿಸಿದಾಗ ನನಗೆ ನೋವಾಗುತ್ತದೆ. ಆದರೆ ನಾನು ನೊಂದುಕೊಂಡು ಸುಮ್ಮನಿರುವುದಿಲ್ಲ. ಆ ಸಂದರ್ಭದ ಮತ್ತು ಸಭಾ ಮರ್ಯಾದೆಗಳ ಔಚಿತ್ಯದ ಮಿತಿಯಲ್ಲಿ ನನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತೇನೆ. ಅಸ್ತಿತ್ವಕ್ಕಾಗಿ

# ದೇವರು

ಹುಲ್ಲಿನ ಬುಡದಲಿ ಹುಟ್ಟಿದ ದೇವರು
ಬೆಳೆದನು ಚಿಗುರುತ ಬೆಟ್ಟದಲಿ
ಬೆಳಗಿನ ಬಿಸಿಲಲಿ ಹೊಳೆದನು ಆರಳುತ
ಹೂಗಳ ಮೇಲಿನ ಮುತ್ತಿನಲಿ

ಹೂವಿನ ಒಡಲಲಿ ಹುರುಳಾಗಿದ್ದನು
ಗಂಧವ ಚೆಲ್ಲುತ ಗಾಳಿಯಲಿ
ಪರಾಗ ಕಣದಲಿ ಅಣುವಂತಿದ್ದವ
ಒಸಗೆಯ ಬೆಸೆದನು ಸ್ಪರ್ಶದಲಿ

ಮರಗಳ ಟೊಂಗೆಯ ತುದಿಯಲಿ ಒಣಗುತ
ಇದ್ದನು ಬೀಜದ ರೂಪದಲಿ
ಜಡಿಮಳೆ ಸುರಿಯಲು ಬಿದ್ದನು ಮಣ್ಣಲಿ
ಎದ್ದನು ಚಿಗುರುತ ಮೊಳಕೆಯಲಿ

ಗುಡಿಸಲು ಗೂಡಿನ ಒಳಗಡೆ ಅಳುವನು
ಹಾಡುತ ಹೈಕಳ ಕಂಠದಲಿ
ಸೋರುವ ಮಾಡಿನ ಕೆಳಗಡೆ ಬೆಳೆದನು
ಬೀಗುತ ಸೆರಗಿನ ಪ್ರೀತಿಯಲಿ

ದುಡಿಯುವ ಭುಜಗಳ ಬೆವರಿನ ಹನಿಯಲಿ
ನಗುವನು ಚಿನ್ನದ ಬಣ್ಣದಲಿ
ಕಷ್ಟದ ಮಡಿಲಲಿ ಸುಖವಾಗಿರುವನು
ಉರಿವನು ಬೆಳಗುತ ದೀಪದಲಿ

ಸುಡುವನು ಒಡಲಲಿ ಹಸಿವಿನ ಬೆಂಕಿಯ
ಸುಡದಂತಿರುವನು ಮಣ್ಣಿನಲಿ
ಮೌನದ ಕೊರಳಲಿ ಮಾತಾಗಿರುವನು
ನುಡಿವನು ಮಿಡಿಯುತ ಹಾಡಿನಲಿ !

**ಗಣೇಶ ಹೊಸ್ಮನೆ**
ಜಾನ್ಮನೆ - ೫೮೧ ೩೧೫, ಶಿರಸಿ, ಉತ್ತರ ಕನ್ನಡ ಜಿಲ್ಲೆ

ಹೋರಾಟವೂ ಹೊಸ ಮೌಲ್ಯಗಳ ಪ್ರತಿಷ್ಠಾಪನೆಯೂ ಸೈದ್ಧಾಂತಿಕ ಪ್ರತಿಭಟನೆಯೂ ವಿಷಯಗಳಾಗಿದ್ದು ನೊಂದುಕೊಳ್ಳುವುದರಲ್ಲಿ ಅರ್ಥವಿಲ್ಲ.

ಕೆಲವು ವಿಚಾರಗೋಷ್ಠಿಗಳಲ್ಲಿ ಮಹಿಳಾ ಸಂಬಂಧಿತ ಪ್ರಶ್ನೆಗಳ ಬಗೆಗೆ ಮಾತ್ರ ಮಹಿಳೆಯರಿಗೆ ವಿಷಯಗಳನ್ನು ಕೊಡುತ್ತಾರೆ. 'ಕಾರಂತರ ಕಾದಂಬರಿಗಳಲ್ಲಿ ಪ್ರಕೃತಿ' ಅಥವಾ 'ಕುವೆಂಪು ಕಾದಂಬರಿಗಳಲ್ಲಿ ಪರಿಸರ' ಇಂಥ ವಿಷಯಗಳ ಬಗ್ಗೆಯೂ ಲೇಖಕಿಯೊಬ್ಬಳು ಬರೆಯಬಲ್ಲವಳಾಗಿರುವಾಗ ಅವಳು ಮಹಿಳೆಯಾಗಿದ್ದಾಳೆ ಎಂಬ ಕಾರಣಕ್ಕೆ 'ಕಾರಂತರ ದೃಷ್ಟಿಯಲ್ಲಿ ಸ್ತ್ರೀ' – 'ಕುವೆಂಪು ಅವರ ಸ್ತ್ರೀ ಪಾತ್ರಗಳು' ಎಂಬ ವಿಷಯದ ಬಗ್ಗೆ ಬರೆಯುವಂತೆ ಅವಳನ್ನು ಕೇಳಿದರೆ ಸಹಜವಾಗಿಯೇ ಅವಳು ಪ್ರತಿಭಟನೆಯ ಕಿಡಿಯೊಂದನ್ನು ದಾಖಲಿಸಬೇಕಾಗುತ್ತದೆ. ಇಂದಿನ ಹೊಸ ಪೀಳಿಗೆಯ ವಿಮರ್ಶಕರು, ಸಾಹಿತ್ಯಾಸಕ್ತರು ಇಂಥ ಸೈದ್ಧಾಂತಿಕ ಹೋರಾಟದ ಬಗ್ಗೆ, ಒಳ್ಳೆಯ ಸಾಹಿತ್ಯದ ಬಗ್ಗೆ ತುಂಬಾ ಗೌರವವುಳ್ಳವರಾಗಿದ್ದನ್ನು ನಾನು ಗಮನಿಸಿದ್ದೇನೆ. ಕನ್ನಡದ ಓದುಗರು ಮತ್ತು ವಿಮರ್ಶಕರು ಯಾವಾಗಲೂ ಒಳಿತನ್ನ ಸಂಪೂರ್ಣವಾಗಿ ತಿರಸ್ಕರಿಸಿಲ್ಲ. ಕೆಲವೊಮ್ಮೆ ಹೊಸಬರು, ಮಹಿಳೆಯರು, ದಲಿತರು, ಬಂಡಾಯಗಾರರು ಏನು ಬರೆಯುತ್ತಿದ್ದಾರೆ ಎಂಬುದನ್ನು ಓದದೇ ಬೀಸು ಹೇಳಿಕೆಗಳನ್ನು ಸ್ಥಾಪಿತ ವಿಮರ್ಶಕರು ಕೊಡಬಹುದು. ಆ ಹೇಳಿಕೆಗೆ ಹೆಚ್ಚಿನ ಮಹತ್ವ ಕೊಡುವ ಅಗತ್ಯವಿಲ್ಲ. ಓದದೇ ಇದ್ದರೆ ನಷ್ಟ ಅವರಿಗೆ ; ಸಾಹಿತ್ಯಕ್ಕಲ್ಲ. ಇಂಥ ಬೀಸು ಹೇಳಿಕೆಗಳು ಸಾಹಿತ್ಯಸೃಷ್ಟಿಯ, ವಿಮರ್ಶೆಯ ಭಾಗವಾಗಿ ಬಂದಾಗ ಅದನ್ನು ಬರಹದ ಮೂಲಕವೇ ಸೃಷ್ಟ್ಯಾತ್ಮಕವಾಗಿ ಪ್ರತಿಭಟಿಸಬೇಕು. ಅದಕ್ಕೆ ವೇದಿಕೆಯನ್ನೂ ಸೃಷ್ಟಿಸಿಕೊಳ್ಳಬೇಕು.

ವಿ.ಪಾ : ಹೊಸದಾಗಿ ಬರೆಯುವ ತರುಣ ಕವಯಿತ್ರಿಯರ ಬಗ್ಗೆ ನೀವೇನಂತೀರಿ ?

**ಸ.ಉಷಾ :** ''ಅವರ ಬಗ್ಗೆ ಏನೂ ಅನ್ನುವುದಿಲ್ಲರಿ...'' ಅವರ ಕಾವ್ಯವನ್ನು ಹುಡುಕಿ ತರಿಸಿಕೊಂಡು ಓದುತ್ತೇನೆ. ಬಿಡಿ ಕವಿತೆ ಇಷ್ಟವಾದರೆ ಪ್ರತಿಕ್ರಿಯಿಸುತ್ತೇನೆ. ವಿಮರ್ಶಾ ಲೇಖನಗಳಲ್ಲಿ, ಇಂಥ ಸಂದರ್ಶನಗಳಲ್ಲಿ ಉಲ್ಲೇಖಿಸುತ್ತೇನೆ. ನೀವೇ ಕೇಳಿದಿರಲ್ಲ ಉಲ್ಲೇಖಿಸುವಂಥ ಕವಯಿತ್ರಿಯರು ಏಕೆ ಬಂದಿಲ್ಲ? ಎಂದು. ಇಂದಿನ ಕವಯಿತ್ರಿ ಎಪ್ಪತ್ತರ-ಎಂಬತ್ತರ ದಶಕಗಳ ಕವಯಿತ್ರಿಗಿಂತ ಬಹುದೂರ ನಡೆದು ಬಂದಿದ್ದಾಳೆ. ಅವಳು ಸ್ವಯಂ ತೇಜದ ರೇವತಿ; ಅಗಸ್ತ್ಯನ ಮರೆಯ ಅರುಂಧತಿಯಲ್ಲ. ಅನೇಕ ಒತ್ತಡಗಳ ನಡುವೆ ಟ್ರಾಫಿಕ್ ಸಿಗ್ನಲ್ಲಲ್ಲಿ ವಾಹನಗಳು ನಿಂತ ದಿವ್ಯ ಏಕಾಂತದ ಕ್ಷಣದಲ್ಲಿ ಕೆದರಿದ ಕೂದಲು ಉದುರದಿರಲೆಂದು ಅದಕ್ಕೆ ರೇಶ್ಮೆಯ ತಲೆವಸ್ತ್ರ ಕಟ್ಟಿ, ಹೆಲ್ಮೆಟ್ ಏರಿಸಿ ಸಿಗ್ನಲ್ ಸಿಗುವುದರೊಳಗೆ ಭೂತಾಕಾರದ ವಾಹನಗಳನ್ನು ಹಿಂದೆ ಹಾಕಿ, ಗೆರೆಯ ಹಿಂದೆ ಸಿದ್ಧಭಂಗಿಯಲ್ಲಿ ನಿಲ್ಲುತ್ತಾಳೆ. ಅವಳ ಪಿಲಿಯನ್ ಮೇಲೆ ಪುಟ್ಟ ಮಗು, ವೃದ್ಧಮಾವ, ಜ್ವರ ಬಂದು ಚೇತರಿಸಿಕೊಳ್ಳುತ್ತಿರುವ ಗಂಡ ಯಾರಾದರೂ ಇರಬಹುದು. ಅವಳು ತನ್ನ ಮೇಜಿನ ಮೇಲೆ ಹಾಕುವ ಗೆರೆ, ಆಕಾಶದಲ್ಲಿ ಹಾರುವ ಭೀಮಗಾತ್ರದ ವಿಮಾನದ ರೂಪುರೇಷೆ ಬದಲಿಸಬಹುದು. ಅವಳು ತನ್ನ ಪುರುಷ ನಿರಪೇಕ್ಷ ಪ್ರಪಂಚ ಪ್ರದಕ್ಷಿಣೆ ಬಗ್ಗೆ ಬರೆದು ಕನ್ನಡದ ಬರೆಹಕ್ಕೆ ತನ್ನದೇ ಆದ ವಿಶಿಷ್ಟ ಕಾಣಿಕೆ ಕೊಡುವ ಧೀಮಂತ ನೇಮಿ, ಉರಿವ ಚಪ್ಪರದಡಿಯಲ್ಲಿ ಬೆಳಗುವ ಹಿಮದ ಪದ್ಮ, ಅಕ್ಕನ ನೆನಪಿಗೆ ಹಿತ್ತಲಲ್ಲೆರಡು ಕದಳಿಗಿಡ ಸಾಕಿಕೊಳ್ಳುವ ತಂಗಿ, ಅಂತಃಪುರದ ಗೋಡೆಗಳ ಬಿಕ್ಕನ್ನು ಆಲಿಸಬಲ್ಲ ಸೂಕ್ಷ್ಮ ಶ್ರವಣ ಶಕ್ತಿಯ ಮೆಹಬೂಬಿ, ತುಂಟ ಬೀದಿಯ ಕಣ್ಣ ಮಿಟುಕನ್ನು ಅಂತರಂಗದ ಸನ್ನೆಗಳನ್ನು ಗ್ರಹಿಸುವ ಕವಿತೆ ಕನ್ನಡಿ ರೂಪ, ಕಕಾಕಿಕೀ ಕಾಗುಣಿತದ ಯಾಂತ್ರಿಕತೆಯಲ್ಲಿ ಕಾಣ್ಕೆ ಕಾಣಿಸಬಲ್ಲ ಪ್ರತಿಭೆ, ಸದಾ ಸೂಕ್ಷ್ಮಗ್ರಾಹಿ ಪುರುಷನನ್ನು ಗೌರವಿಸುವ ಅನೈಸ್‌ನಿನ್-

ಸಿದ್ಧಾಂತಗಳನ್ನು ತನ್ನ ಪ್ರಜ್ಞೆಯ ಅಂಗವಾಗಿಸಿಕೊಂಡು ಕಾವ್ಯ ಕರ್ಮದ ಕಸೂತಿಯನ್ನು ಇಂದಿನ ತರುಣ ಕವಯಿತ್ರಿ ಮಾಡುತ್ತಿದ್ದಾಳೆ. ಅವಳಿಂದ ಕನ್ನಡ ಕಾವ್ಯ ಪರಂಪರೆ ಕಲಿಯುವುದೂ ಇದೆ ಎಂಬುದು ನನ್ನ ಪ್ರಾಮಾಣಿಕ ಅಭಿಪ್ರಾಯ.

ವಿ.ಪಾ : ನಿಮಗೆ ಯಾರಾದರೂ ಶತ್ರುಗಳಿದ್ದಾರೆಯೇ ?

**ಸ.ಉಷಾ :** ನನ್ನ ಸ್ವಭಾವವೇ ನನ್ನ ಶತ್ರು. ಶತ್ರುವನ್ನು ನಾನು ಹೊರಗೆ ಹುಡುಕಿಕೊಂಡು ಹೋಗಬೇಕಿಲ್ಲ. ನನ್ನೊಳಗಿರುವ ಅಸಮತೋಲನ ಮತ್ತು ಗೊಂದಲಗಳಿಂದ ಶತ್ರುತ್ವ ಸೃಷ್ಟಿಯಾಗುತ್ತದೆ ಎಂಬುದು ಒಂದು ಹ್ರಸ್ವ ಉತ್ತರ. ಇದರಾಚೆಗೆ ಬದುಕಿನ ಎಲ್ಲ ತತ್ವಜ್ಞಾನಗಳು ಇವೆ.

ವಿ.ಪಾ : ಇಷ್ಟು ವರ್ಷಗಳ ಸಾಹಿತ್ಯಕ ವಸ್ತು, ಶೈಕ್ಷಣಿಕ ಬದುಕಿನ ನಂತರ ನೀವು ಏನನ್ನು 'ಸಾಧಿಸಲು' ಬಯಸುವಿರಿ ?

**ಸ.ಉಷಾ :** ನಾನು ಏನನ್ನೂ 'ಸಾಧಿಸಲು' ಬಯಸುತ್ತಿಲ್ಲ. ಸಾಹಿತ್ಯದ ಅಥವಾ ಶೈಕ್ಷಣಿಕ ಅಥವಾ ವೈಯಕ್ತಿಕ ಸಾಧನೆಗಳು ವ್ಯಕ್ತಿತ್ವ ವಿಕಸನದ ಹಾದಿಯಲ್ಲಿ ಮೈಲಿಗಲ್ಲುಗಳಷ್ಟೇ ಗಮ್ಯವಲ್ಲ. ನಾನು ಇನ್ನೂ ಉತ್ತಮ ಶಿಕ್ಷಕಿ, ಉತ್ತಮ ಪತ್ನಿ ತಾಯಿ, ಗೆಳತಿ, ಬರಹಗಾರ್ತಿ, ಗೃಹಿಣಿ ಆಗಬೇಕೆಂಬುದು ನನ್ನ ಬಯಕೆ. ಇದು ಶ್ರೇಷ್ಠತೆಯ ವ್ಯಸನವಲ್ಲ; ಜಾಹಿರಾತಿನ 'ಸೂಪರ್ ಉಮನ್' ಬಯಕೆಯೂ ಅಲ್ಲ. ಜೀವಂತಿಕೆಯ ಹಂಬಲ. ಸಹಜವಾಗಿ ನಾನು ನನ್ನ ಸುತ್ತಲಿನ ಸಮಾಜದ ವ್ಯಕ್ತಿಗಳೂ ಈ ಹಂಬಲಕ್ಕೆ ಪ್ರತಿಸ್ಪಂದಿಸಬೇಕೆಂದು ಬಯಸುತ್ತೇನೆ.

**ವಿಜಯಕಾಂತ ಪಾಟೀಲ**
ನ್ಯಾಯವಾದಿ, ಚಿಕ್ಕಾಂಶಿ, ಹೊಸೂರು - ೫೮೧ ೧೦೪, ಹಾವೇರಿ ಜಿಲ್ಲೆ

# ದಾಸ ಸಾಹಿತ್ಯದ ಸ್ವರೂಪ ಮತ್ತು ಸಾಧ್ಯತೆ

**ದಾಸರ ಹಾಡುಗಳನ್ನು ಕೇಳುತ್ತ ಕೇಳುತ್ತಲೇ ಪ್ರತಿಯೊಬ್ಬನೂ ತನ್ನ ಅಂತರಂಗವನ್ನು ತಾನೇ ಪರಿಶೀಲಿಸಿಕೊಳ್ಳುವಂತೆ, ವಿಮರ್ಶಿಸಿಕೊಳ್ಳುವಂತೆ ಮಾಡುವ ಶಕ್ತಿ ಈ ಸಾಹಿತ್ಯಕ್ಕಿದೆ. ದಾಸರು ಮಾಡಿದ್ದೇ ಹಾಗೆ. ತಮ್ಮ ಒಳಗನ್ನು ತಾವೇ ಒರಗೆ ತಿಕ್ಕಿ ಕೊಳೆಯನ್ನು ತೆಗೆದು ಹೊಳೆಯುವಂತೆ ಮಾಡಿದರು.**

ಸಾಹಿತ್ಯ ಲೋಕ ಕಂಡ ಎರಡು ಅಪರೂಪದ ಭಕ್ತಿ ಚಳುವಳಿಗಳೆಂದರೆ ವಚನ ಮತ್ತು ದಾಸ ಚಳುವಳಿಗಳು. ಇವು ಜನರ ಬದುಕನ್ನು ಹಸನಾಗಿಸುತ್ತ ಅವರ ಮನ-ಮನೆಗಳನ್ನು ಬೆಳಗಲು ವಿಶಿಷ್ಟವಾಗಿ ಪ್ರಯತ್ನಿಸಿದ ಸಾಹಿತ್ಯಿಕ ಪಂಥಗಳಾಗಿವೆ. ಜಿಡ್ಡುಗಟ್ಟಿದ ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಕಂಡುಂಡ ಮೇಲು-ಕೀಳು; ಬಡವ-ಬಲ್ಲಿದ ತಾರತಮ್ಯಗಳನ್ನು ಸರಿಪಡಿಸುತ್ತ, ಶೋಷಣೆಯ ವಿರುದ್ಧ ಸಿಡಿದೆದ್ದು ಮಾನವೀಯತೆಗಾಗಿ ಮಿಡಿಯುತ್ತ ದನಿಯಿಲ್ಲದವರಿಗೆ ಕೊರಳಾದವರು ವಚನಕಾರರು.

ಹನ್ನೆರಡನೆಯ ಶತಮಾನದಲ್ಲಿ ಬಂದ ಶರಣರು ಅಸಮಾನತೆಯ ವ್ಯವಸ್ಥೆಯನ್ನು ಪ್ರಶ್ನಿಸುತ್ತ ಸಮಾನತೆಯ ಸಮಾಜದ ಕನಸು ಕಾಣುತ್ತಾ ವೀರಶೈವ ಧರ್ಮದ ವಿಚಾರಗಳನ್ನು ಜನರ ಮನಸ್ಸಿನಲ್ಲಿ ಬಿತ್ತುವ ಕೆಲಸವನ್ನು ಮಾಡಿದರು. ನೆಲದ ಆಡುಭಾಷೆಯನ್ನು ಸಮರ್ಥವಾಗಿ ಬಳಸಿಕೊಂಡು ವಚನಗಳ ರಚನೆಗೆ ತೊಡಗಿದರು. ನೇರ ನಡೆ-ನುಡಿಗಳಿಂದ ನಾಡೇ ಬೆರಗಾಗುವಂತಹ ಸಾಹಿತ್ಯವನ್ನು ಸೃಷ್ಟಿಸಿ ಬದುಕು ಬರೆಹಗಳನ್ನು ಒಂದಾಗಿಸಿಕೊಂಡು ಸಾಗಿದರು. ವಚನಸಾಹಿತ್ಯ ಸೃಷ್ಟಿಯಾಗಿ ಅನೇಕ ಶತಮಾನಗಳೇ ಗತಿಸಿದ್ದರೂ ಇಂದಿಗೂ ಪ್ರಸ್ತುತ ಎನಿಸುವ ಅನೇಕ ಸಂಗತಿಗಳು ಅದರಲ್ಲಿವೆ. ಈ ಕಾರಣಕ್ಕಾಗಿಯೇ ವಚನ ಸಾಹಿತ್ಯ ಜಾಗತಿಕ ಮಟ್ಟದಲ್ಲಿ ಮಾನ್ಯವಾಗಿ ಇಂದಿಗೂ ಜೀವಂತವಾಗಿ ಉಳಿದಿದೆ. ಜಾಗತೀಕರಣದ ಇಂದಿನ ಸಂದರ್ಭದಲ್ಲಿ ನಮ್ಮ ಸಾಮಾಜಿಕ ಬದುಕು ಏನೆಲ್ಲ ತಲ್ಲಣಗಳಿಗೆ ಒಳಗಾಗಿ ಅನೇಕ ಸ್ಥಿತ್ಯಂತರಗಳನ್ನು ಪಡೆದುಕೊಂಡಿದ್ದರೂ ವಚನಸಾಹಿತ್ಯ ತನ್ನ ಅನನ್ಯತೆಯನ್ನು ಉಳಿಸಿಕೊಂಡಿದ್ದೇ ಅದರ ಹೆಚ್ಚುಗಾರಿಕೆಯಾಗಿದೆ.

ದಸ್ತಗೀರಸಾಬ್ ದಿನ್ನಿ

ವಚನ ಸಾಹಿತ್ಯದ ನಂತರ ವೈಷ್ಣವ ಧರ್ಮವನ್ನು ಪ್ರಚಾರ ಮಾಡುವುದರ ಜೊತೆಗೆ ಸಮಾಜ ಪರಿವರ್ತನೆ ಮಾಡುವ ಆಶಯಗಳನ್ನೊತ್ತುಕೊಂಡು ಬಂದ ದಾಸ ಪರಂಪರೆಯು ಈ ನೆಲದಲ್ಲಿ ಭಕ್ತಿಯ, ಅರಿವಿನ ಜ್ಞಾನದ ಬೀಜಗಳನ್ನು ಬಿತ್ತುವಲ್ಲಿ ತನ್ನ ಮಹತ್ವದ ಹೆಜ್ಜೆಗಳನ್ನಿಡುತ್ತ ಮುನ್ನಡೆದು ಬಂತು. ವಚನಕಾರರು ತಮ್ಮ ಅಭಿವ್ಯಕ್ತಿಗೆ ವಚನ ರೂಪವನ್ನು ಮಾಧ್ಯಮವಾಗಿಸಿಕೊಂಡರೆ, ದಾಸರು ಕೀರ್ತನೆಯನ್ನು ಮಾಧ್ಯಮವಾಗಿಸಿಕೊಂಡರು. ''ಜ್ಞಾನ ಭಕ್ತಿ ವೈರಾಗ್ಯದ ತವನಿಧಿಯಾದ ಹರಿದಾಸ ಸಾಹಿತ್ಯವು ಕನ್ನಡ ಸಾಹಿತ್ಯ ಚರಿತ್ರೆಯ ರಸಘಟ್ಟ. ಯಾವುದೇ ಒಂದು ಕೃತಿಯಾಗಲೀ, ಯಾವುದೇ ಒಂದು ಸಾಹಿತ್ಯವಾಗಲೀ ಮೌಲಿಕವಾಗಿ ಉಳಿಯಬೇಕಾದರೆ ಅದು ಮಾನವ ಪ್ರೀತಿಯನ್ನು ತನ್ನ ಧೋರಣೆಯನ್ನಾಗಿಸಿಕೊಳ್ಳಬೇಕು. ಶತಶತಮಾನಗಳಿಂದ ಜನತೆಯ ನಾಲಿಗೆಯ ಮೇಲೆ ನರ್ತಿಸಿದ ಹರಿದಾಸ ಸಾಹಿತ್ಯ ಅಂತಹ ಧೋರಣೆಯನ್ನು ಉಳಿಸಿಕೊಂಡು ಬಂದಿದೆ'' ಎನ್ನುವುದು ವಾಸ್ತವ ಸತ್ಯ.

ಹರಿದಾಸರು ರಚಿಸಿದ ಈ ಹಾಡುಗಳು ಇಂದಿಗೂ ಜನರ ಮನಸ್ಸಿನಲ್ಲಿ ಉಳಿದಿವೆ. ''ದಾಸರ ಹಾಡುಗಳನ್ನು ಕೇಳುತ್ತ ಕೇಳುತ್ತಲೇ ಪ್ರತಿಯೊಬ್ಬನೂ ತನ್ನ ಅಂತರಂಗ ವನ್ನು ತಾನೇ ಪರಿಶೀಲಿಸಿಕೊಳ್ಳುವಂತೆ, ವಿಮರ್ಶಿಸಿ ಕೊಳ್ಳುವಂತೆ ಮಾಡುವ ಶಕ್ತಿ ಈ ಸಾಹಿತ್ಯಕ್ಕಿದೆ. ದಾಸರು ಮಾಡಿದ್ದೇ ಹಾಗೆ. ತಮ್ಮ ಒಳಗನ್ನು ತಾವೇ ಒರೆಗೆ ತಿಕ್ಕಿ ಕೊಳೆಯನ್ನು ತೆಗೆದು ಹೊಳೆಯುವಂತೆ ಮಾಡಿದರು. ನುಡಿದಂತೆ ನಡೆದರು. ನಡೆ ನುಡಿ ಒಂದಾಗಿಸಿಕೊಂಡು ಬಾಳಿದರು. ಜನಸಾಮಾನ್ಯರೊಂದಿಗೆ ಬೆರೆತು ಅವರ ಸುಖ ದುಃಖಗಳಿಗೆ ಸ್ಪಂದಿಸಿ, ಅವರ ಬದುಕು ಉತ್ತಮ ವಾಗಲು ಸಹಾಯ ಮಾಡಿದರು. ಕುಳಿತಲ್ಲಿ ನಿಂತಲ್ಲಿ ಹಾಡು ಕಟ್ಟಿದರು. ಗುಂಪಿನ ನಡುವೆ ಹಾಡಿ ನರ್ತಿಸಿದರು.'' ಹೀಗಾಗಿ ಹರಿದಾಸರು ನಮಗೆ ಇಂದಿಗೂ ಬಹುಮುಖ್ಯವಾಗಿ ಕಾಣುತ್ತಾರೆ.

''ಕನ್ನಡದಲ್ಲಿ ಕೀರ್ತನೆ ಅಥವಾ ಪದ ಎಂಬುದೇನೂ ಹೊಸದಲ್ಲ. ಕನ್ನಡದ ಮಟ್ಟಿಗೆ ಪಾಡು, ಮೇಲ್ವಾಡು ಭಜನೆಗಳಿದ್ದವು. ಆಮೇಲೆ ಶರಣರು ಪದಗಳಲ್ಲಿ ಹಾಡಿದರು. ಅದೇ ಹರಿದಾಸರ ಬಾಯಲ್ಲಿ 'ಕೀರ್ತನೆ' ಎಂದರೆ ಹರಸ್ತುತಿ ಪರವಾದ ಹಾಡಾಯಿತು'' ಎಂದು ರಂ. ಶ್ರೀ. ಮುಗಳಿಯವರು ಹೇಳಿದರೆ, ಡಾ. ಎಲ್. ಬಸವರಾಜ ಅವರು ''ಶಿವ ಶರಣರು ಬರೆದ ಈ ಹಾಡುಗಳು ಪಲ್ಲವಿಯಿಂದ ಕೂಡಿ ಬೇರೆ ಬೇರೆ ರಾಗಗಳಲ್ಲಿ ಹಾಡಲು ಅನುವರಿತು ರಚಿತವಾದ ಗೇಯ ಕೃತಿಗಳು. ಇವು ಹರಿದಾಸರ ಕೀರ್ತನ ಪ್ರಕಾರಕ್ಕೆ ಮೂಲವೂ ಮಾದರಿಯವೂ ಆಗಿತ್ತೆಂದು'' ಅಭಿಪ್ರಾಯ ಪಡುವಲ್ಲಿ ನಿಜವೆನಿಸದೆ ಇರದು.

''ದಾಸ ಸಾಹಿತ್ಯವು ಕೀರ್ತನೆ, ಸುಳಾದಿ, ಉಗಾಭೋಗ ಈ ಮುಖ್ಯ ರೂಪಗಳಲ್ಲಿದೆ. ವಿಷಯಾನುಗುಣವಾದ ಈ ರೂಪವನ್ನು ಆಯ್ದುಕೊಳ್ಳುವ ರೀತಿಯಲ್ಲಿ ಅದು ಭಾವ ಗೀತೆಯ ಲಕ್ಷಣವನ್ನು ಸ್ವೀಕರಿಸಿದೆ. ಸ್ವಯಂಪೂರ್ಣವಾದ ಏಕಮೇವ ಭಾವದ ನಿರೂಪಣೆಯಿಂದಲೂ ಅದು ಭಾವಗೀತೆಯ ಸ್ವರೂಪ ತಾಳಿದೆ. ಕೀರ್ತನೆಯಲ್ಲಿ ರಾಗ ತಾಳ ಬದ್ಧವಾಗಿ ಪಲ್ಲವಿ, ಅನುಪಲ್ಲವಿ ನುಡಿಗಳ ಯೋಜನೆ ಇರುತ್ತದೆ. ಕೊನೆಯ ನುಡಿಯಲ್ಲಿ ದಾಸರ ಅಂಕಿತವಿರುತ್ತದೆ. ಇಲ್ಲಿ ದಾಸರು ತಮಗನಿಸಿದ ಭಾವವನ್ನು ದನಿ ತೆಗೆದು ಹಾಡುತ್ತಾ ಹೋದರು. ಹಾಡಿನಲ್ಲಿದ್ದ ಭಾವಕ್ಕೆ ಮಹತ್ವ ಕೊಟ್ಟರೇ ವಿನಃ ಅವರೆಂದೂ ರಾಗಗಳ ಬಗ್ಗೆ ತಲೆಕೆಡಿಸಿಕೊಳ್ಳಲು ಹೋಗಲಿಲ್ಲ.

ದಾಸರು ಇಲ್ಲಿ ನೀತಿ, ಭಕ್ತಿ, ಡಂಭಾಚಾರ, ಕರ್ಮಠತನ, ವಾತ್ಸಲ್ಯ, ಪ್ರಾಮಾಣಿಕತೆ, ಅಹಿಂಸೆ, ಅನ್ಯಾಯ, ಪಾಪ, ಶೋಷಣೆ, ಸಂಸಾರ, ಹಣ, ಮತ, ಕುಲ ಹೀಗೆ ಬದುಕಿನಲ್ಲಿ ಕಂಡುಂಡ ವೈವಿಧ್ಯಮಯ ವಿಷಯಗಳನ್ನು ತಮ್ಮ ಕೀರ್ತನೆಗಳಿಗೆ ವಸ್ತುವಾಗಿಸಿಕೊಂಡಿರುವುದು ಗಮನಾರ್ಹ. ಸಮಕಾಲೀನ ಸಂದರ್ಭಗಳ ಚಿತ್ರಣವನ್ನು ಕಣ್ಣಿಗೆ ಕಟ್ಟುವ ಹಾಗೆ ಹಾಡಾಗಿಸಿದ ದಾಸರಿಗೆ ಬದುಕು ಬರೆಹಗಳಲ್ಲಿ ಅಭೇದ ಕಾಣುವ ಬದ್ಧತೆ ಇತ್ತು. ಜೊತೆಗೆ ಶ್ರಮಸಂಸ್ಕೃತಿಯ ಬಗೆಗೆ ಅನನ್ಯ ಗೌರವವಿತ್ತು ಎನ್ನುವುದು ಮನವರಿಕೆಯಾಗುತ್ತದೆ.

ದಾಸರೆಂದರೆ ಪುರಂದರದಾಸರಯ್ಯ ಎಂದು ಕರೆಯಿಸಿಕೊಂಡ ಪುರಂದರದಾಸರು ಲೌಕಿಕ ಬದುಕಿಗೆ ಮಹತ್ವಕೊಡದೆ ಅಲೌಕಿಕ ಬದುಕನ್ನೇ ನೆಚ್ಚಿಕೊಂಡು ಬದುಕುತ್ತ ಸಮಾಜದಲ್ಲಿ ಕಂಡ ಅನ್ಯಾಯಗಳನ್ನು ನೇರವಾಗಿ ಖಂಡಿಸುತ್ತಾ ತಮ್ಮ ಕೀರ್ತನೆಗಳ ಮೂಲಕ ಛಾಟಿ ಏಟು ಕೊಟ್ಟವರು.

''ತನುವು ನೀರೊಳಗದ್ದಿ  
ಫಲವೇನು ? ತಮ್ಮ ಮನದಲ್ಲಿ  
ದೃಢಭಕ್ತಿಯಿಲ್ಲದ ಮನುಜರು  
ದಾನ ಧರ್ಮಗಳ  
ಮಾಡುವುದೇ ಸ್ನಾನ.  
ಜ್ಞಾನ ತತ್ವಗಳ ತಿಳಿವುದೇ ಸ್ನಾನ  
ಹೀನ ಪಾಪಂಗಳ ಬಿಡುವುದೇ ಸ್ನಾನ  
ಧ್ಯಾನದಿ ಮಾನವನ  
ನೋಳ್ಪುನೊದೆ ಸ್ನಾನ''

ಮನುಷ್ಯರ ಡಾಂಭಿಕ ಭಕ್ತಿಯನ್ನು ಅಲ್ಲಗಳೆಯುತ್ತಲೇ ನಿಜವಾದ ಸ್ನಾನದ ಬಗೆಗೆ, ಭಕ್ತಿಯ ಬಗೆಗೆ ತಿಳಿಸುವ ಪುರಂದರರು ಜ್ಞಾನಕ್ಕೂ ಮಹತ್ವ ಕೊಡುತ್ತಾರೆ. ಅವನಲ್ಲಿ ಅರಿವನ್ನು ಮೂಡಿಸುವ ಪ್ರಯತ್ನ ಮಾಡುತ್ತಾರೆ. 'ಅಲ್ಲಿದೆ ನಮ್ಮ ಮನೆ, ಇಲ್ಲಿ ಬಂದೆ ಸುಮ್ಮನೆ' ಎನ್ನುವ ವಿಶಾಲ ಮನೋಭಾವವೊಂದು ಅವರದೇ ಕೀರ್ತನೆಯೊಂದರಲ್ಲಿ ಮೂಡಿ ಬಂದಿದ್ದು ವಿವೇಕಿಗಳ ಕಣ್ಣು ತೆರೆಸುವಂತಿದೆ.

''ಕುಲ ಕುಲ ಕುಲವೆಂದು  
ಹೊಡೆದಾಡದಿರಿ, ನಿಮ್ಮ  
ಕುಲದ ನೆಲೆಯನೇನಾದರೂ ಬಲ್ಲಿರಾ  
ಕುಲ ಕುಲ ಕುಲವೆನ್ನುತಿಹರೆ  
ಕುಲ ಯಾವುದು  
ನೋಡಿ ಸತ್ಯಸಜ್ಜನರೇ''

ಎಂದು ಹೇಳುವ ಕನಕದಾಸರು ನೇರವಾಗಿಯೇ ಪ್ರಶ್ನೆ ಎಸೆಯುತ್ತಾರೆ. ಜಾತಿ ಜಾತಿಗಳಲ್ಲಿ ನಾ ಮೇಲು ನೀ ಮೇಲು ಎಂದು ಕಚ್ಚಾಡುವ ಇವತ್ತಿನ ಸಮಕಾಲೀನ

ಸಂದರ್ಭಕ್ಕೆ ಈ ಸಾಲುಗಳು ಕನ್ನಡಿ ಒಡ್ಡುತ್ತವೆ.

ರಾಮದಾಸರ ಪ್ರಕಾರ ಜಾತಿ ಎನ್ನುವುದು ಹುಟ್ಟಿನಿಂದ ನಿರ್ಧಾರವಾಗುವಂತಹುದಲ್ಲ, ಅವನವನ ಕರ್ಮಾಚರಣೆಗಳ ಪ್ರಕಾರ ಬರುವಂಥದ್ದು.

ನೀತಿಬಾಹಿರರೇ ಹೊಲೆಯರು
ಜಾತಿಭ್ರಷ್ಟರು
ಅವರಿವರ ಸುದ್ದಿಯಾಡುವವನು
ಪರಸ್ತ್ರೀಗೆ ಒಲಿಯುವವನು
ಹೀನರನ್ನು ಬಹುಮಾನಿಸಿ
ಜ್ಞಾನಿಗಳನ್ನು ಕಡೆಗಣಿಸುವವನು
ಗೇಣು ಹೊಟ್ಟೆಗಾಗಿ ಪರರ
ಗೇಣು ಮುರಿಯುವವನು
ಹೊಲೆಮಾದಿಗ''

ಹೀಗೆ ದಾರಿತಪ್ಪಿ ನಡೆದವರೇ ನೀಚ ಕುಲದಲ್ಲಿ ಜನಿಸಿದವರು ಎನ್ನುವ ರಾಮದಾಸರು ಮುಸ್ಲಿಂ ಧರ್ಮದಲ್ಲಿ ಜನಿಸಿ ಶ್ರೀರಾಮ ಅಂಕಿತದಿಂದ ಸಾವಿರಾರು ಕೀರ್ತನೆಗಳನ್ನು ಬರೆದವರು. ಕೋಮು ಸೌಹಾರ್ದತೆಗೆ ಅವರ ಬದುಕೇ ಒಳ್ಳೆಯ ಉದಾಹರಣೆ.

'ಎಲ್ಲಿಂದ ಬಂದಿದ್ದೆ ಎಲೆ ಖೋಡಿ, ನೀನೆಲ್ಲಿಗೆ ಹೋಗುತ್ತಿದ್ದಿ ತ್ವರೆ ಮಾಡಿ' ಎಂದು ಈ ಕ್ಷಣಿಕ ಬದುಕಿನ ನಶ್ವರತೆಯ ಬಗೆಗೆ ಎಚ್ಚರಿಸುತ್ತಲೇ ಅವನನ್ನು ನಿಜದ ಮನುಷ್ಯನನ್ನಾಗಿಸುವ ಕಡೆ ಮುಖ ಮಾಡುತ್ತಾರೆ.

ಮನುಷ್ಯನಲ್ಲಿ ಅರಿಷಡ್ವರ್ಗಗಳು ಇರಬಾರದು ಎಂದು ಅನೇಕ ಅನುಭಾವಿಗಳು ಹೇಳಿದರೆ ವಿಜಯದಾಸರು ಇರಬೇಕು ಎಂದು ಹೇಳುವುದರ ಮೂಲಕ ಹೊಸ ದೃಷ್ಟಿಕೋನವನ್ನು ಕೊಡುತ್ತಾರೆ:

''ನಿನ್ನ ನೋಡುವಲ್ಲಿ
ಕಾಮವೇ ಎನಗಿರಲಿ
ನಿನ್ನ ಬಿಡನೆಂಬೋ
ಲೋಭವೇ ಎನಗಿರಲಿ
ನಿನ್ನ ಚರಣದಲ್ಲಿ
ಮೋಹವೇ ಎನಗಿರಲಿ




ನಿನ್ನ ನೆನೆಸುವಲ್ಲಿ
ಮದವೇ ಎನಗಿರಲಿ''

ಕನಕದಾಸರು 'ನಾನು ನೀನು' ಎಂದು ಅಹಂಕಾರದಿಂದ ಮೆರೆಯುವ ಮನುಜರಿಗೆ :

''ನಾನು ನೀನು ಎನ್ನದಿರೋ
ಹೀನ ಮಾನವ
ಜ್ಞಾನದಿಂದ ನಿನ್ನ ನೀನು
ತಿಳಿದು ನೋಡಲೋ ಪ್ರಾಣಿ''

ಎಂದಿದ್ದಾರೆ. ಮನುಷ್ಯ ಎಷ್ಟೇ ತಿಳುವಳಿಕೆಯನ್ನು ಜ್ಞಾನವನ್ನು ಪಡೆದುಕೊಂಡಿದ್ದರೂ ಅವನಲ್ಲಿ ವಿನಯ ಬೇಕು. ಬಸವಣ್ಣನವರು 'ಎನಗಿಂತ ಕಿರಿಯರಿಲ್ಲ' ಎಂದು ಹೇಳುತ್ತಲೇ ದೊಡ್ಡವರೆನಿಸಿಕೊಂಡರು.

ಹೀಗೆ ಅನೇಕ ನುಡಿಗಳು ನಮ್ಮ ಸಾಮಾಜಿಕ ಬದುಕಿಗೆ ಮಾರ್ಗದರ್ಶನವನ್ನೀಯಲು, ಸತ್ಯವನ್ನು ಸಾರಲು ನಿಂತಂತೆ ಇವೆ. ಮನುಷ್ಯ ಇಂದು ನೆಮ್ಮದಿಯ ಬದುಕನ್ನು ಕಳೆದುಕೊಂಡಿದ್ದಾನೆ. ಇದಕ್ಕೆ ಕಾರಣ ಅವನು ಹಣದ ಬೆನ್ನತ್ತಿ ಸಾಗಿರುವುದು, ಜೊತೆಗೆ ಮಾನವೀಯ ಮೌಲ್ಯಗಳನ್ನು ಮರೆತಿರುವುದೇ ಇದಕ್ಕೆ ಕಾರಣವಾಗಿದೆ. ದಾಸ ಸಾಹಿತ್ಯವನ್ನು ಓದುತ್ತಾ ಹೋದ ಹಾಗೆಲ್ಲ ಅದು ಅನೇಕ ಅರ್ಥಗಳನ್ನು ಸಂದರ್ಭಕ್ಕೆ ತಕ್ಕ ಹಾಗೆ ಧ್ವನಿಸುತ್ತದೆ. ಮನುಷ್ಯ ಮನುಷ್ಯರಲ್ಲಿ ಉಂಟಾಗಿರುವ ಬಿರುಕುಗಳನ್ನು ಸರಿ ಪಡಿಸುತ್ತ ಜೀವದ ಪ್ರೀತಿಯನ್ನು ಲವಲವಿಕೆಯನ್ನು ಪ್ರಕಟಿಸುತ್ತದೆ. ದಾಸ ಸಾಹಿತ್ಯವು ತನ್ನ ಒಡಲಲ್ಲಿ ಅಡಗಿಸಿಕೊಂಡ ವಿಚಾರಗಳು ನಮ್ಮ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿವೆ.

ಹರಿದಾಸರು ಜಾತಿ, ಮತ, ಪಂಥಗಳನ್ನು ಮೀರಿ ಮಾನವತೆಯ ತಂತಿಯನ್ನು ಮೀಟುತ್ತಾ ಹೋದವರು. ಎಲ್ಲ ಆಸೆ ಆಮಿಷಗಳನ್ನು ಮೆಟ್ಟಿದವರು. ಹರಿದಾಸರನ್ನು ಯಾವುದೇ ಒಂದು ಧರ್ಮಕ್ಕೆ ಸೀಮಿತಗೊಳಿಸದೆ ಅಧ್ಯಯನ ಮಾಡುವುದು ಅಲ್ಲಿರುವ ಮೌಲಿಕ ವಿಚಾರಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡು ಸಾಗುವ ಕೆಲಸ ಎಂದಿಗಿಂತಲೂ ಇಂದು ಜರೂರಾಗಬೇಕಿದೆ. ವಚನಕಾರರು ದಾಸರು ಎಲ್ಲರಿಗೂ ಬೇಕು. ಹರಿದಾಸ ಸಾಹಿತ್ಯವನ್ನಾಗಲಿ, ವಚನ ಸಾಹಿತ್ಯವನ್ನಾಗಲಿ ಅಧ್ಯಯನ ಕ್ಕೊಳಪಡಿಸಿದಾಗ ಆಯಾ ಸಾಹಿತ್ಯಕ್ಕೆ ತನ್ನದೇ ಆದ ಮಿತಿಗಳಿರುತ್ತವೆ. ಆದರೆ ಅವುಗಳನ್ನೇ ದೊಡ್ಡದು ಮಾಡಬಾರದು. ದಾಸರು ಎಂತಹ ಬದುಕನ್ನು ಬಾಳಿಹೋದರು, ಅವರಲ್ಲಿ ಎಂತಹ ಮೌಲ್ಯಗಳಿದ್ದವು, ಅವರ ಧೋರಣೆ ಆಶಯಗಳೇನಿದ್ದವು ಎಂಬುದನ್ನು ತಿಳಿದುಕೊಂಡಾಗ ಮಾತ್ರ ದಾಸರು, ಶರಣರು ಅರ್ಥವಾಗಲು ಸಾಧ್ಯ.

ದಾಸ ಸಾಹಿತ್ಯ ಜನಪದ ಸಾಹಿತ್ಯಕ್ಕೆ ಹತ್ತಿರವಾದ ಸಾಹಿತ್ಯವಾಗಿದೆ. ನೆಲದ ಭಾಷೆಯನ್ನು ಸಮರ್ಥವಾಗಿ ಬಳಸಿಕೊಂಡ ಈ ಸಾಹಿತ್ಯ ದೇಶೀಯ ಸಂಸ್ಕೃತಿಯನ್ನು ತನ್ನಂತರಂಗದಲ್ಲಿ ಹುದುಗಿಸಿಕೊಂಡಿದೆ. ಮನುಷ್ಯ ಬದುಕಿನ ನಿಜ ದಾರಿಯ ಬಗೆಗೆ ಅರಿವನ್ನು ಮೂಡಿಸುವ ಭಕ್ತಿ ಜ್ಞಾನದ ದೀಪ ಹಚ್ಚಿ ಅವನ ಅಂತರಂಗದ ಕತ್ತಲೆಯನ್ನು ಕಳೆಯುವ ಪ್ರಾಮಾಣಿಕ ಪ್ರಯತ್ನ ಮಾಡಿ ಯಶಸ್ವಿಯಾಗಿದೆ. ಮೊದಲೇ ಹೇಳಿದ ಹಾಗೆ ಇದು ಸಾಮಾಜಿಕ ಚಳುವಳಿಯಾಗಿ ಮೂಡಿಬಂದದ್ದು. ಜನಸಾಮಾನ್ಯರ ನಡುವೆಯೇ ಹುಟ್ಟಿದ ಈ ಸಾಹಿತ್ಯ ಜನಪರ ಕಾಳಜಿಯುಳ್ಳ ಸಾಹಿತ್ಯವಾಗಿದೆ.

ದಾಸರು ಸಂಪ್ರದಾಯದೊಳಗಿದ್ದುಕೊಂಡೇ ಸಂಪ್ರದಾಯವನ್ನು ಪ್ರಶ್ನಿಸಿದ್ದು ಕೋಮುಸೌಹಾರ್ದತೆಗೆ ಮಿಡಿದ ಶ್ರೇಯಸ್ಸು ಇವರಿಗೆ ಸಲ್ಲುತ್ತದೆ. ಇವತ್ತು ನಾವು ಅನುಭವಿಸುತ್ತಿರುವ ತವಕ, ತಲ್ಲಣ, ಆತಂಕಗಳಿಗೆ, ನಮ್ಮ ಸಾಂಸ್ಕೃತಿಕ ಜಗತ್ತು ಎದುರಿಸುವ ಬಿಕ್ಕಟ್ಟುಗಳಿಗೆ ದಾಸ ಸಾಹಿತ್ಯವನ್ನು ಮುಖಾಮುಖಿಯಾಗಿಸಿಕೊಳ್ಳುವ ಪ್ರಯತ್ನಗಳು ಆಗಬೇಕಿದೆ. ಜೊತೆಗೆ ವಿವಿಧ ಮಗ್ಗುಲುಗಳಿಂದ ಅಧ್ಯಯನಕ್ಕೊಳಪಡಿಸುತ್ತ ಅನುಸಂಧಾನಗೊಳಿಸುವುದರ ಮೂಲಕ ನಮ್ಮ ಚಿಂತನಾಕ್ರಮವನ್ನು ಹೆಚ್ಚಿಸಿಕೊಳ್ಳಬೇಕಿದೆ. ಅಂತಹ ಸಾಧ್ಯತೆಗಳನ್ನು ನಮ್ಮದಾಗಿಸಿಕೊಳ್ಳಬೇಕಾದ ಸವಾಲು ನಮ್ಮ ಮುಂದಿದೆ.

ದಸ್ತಗೀರಸಾಬ್ ದಿನ್ನಿ
ಕನ್ನಡ ಉಪನ್ಯಾಸಕ, ಟ್ಯಾಗೋರ ಸ್ಮಾರಕ
ಪದವಿಪೂರ್ವ ಕಾಲೇಜು, ರಾಯಚೂರು




ಬಳ್ಳಾರಿಯಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ : ಬಳ್ಳಾರಿಯ ನಗರಸಭಾಧ್ಯಕ್ಷರಾದ ಶ್ರೀ ಜಿ. ಸೋಮಶೇಖರ ರೆಡ್ಡಿಯವರು ಜೂನ್ ೧೦ರಂದು ಪುಸ್ತಕ ಪ್ರದರ್ಶನ ಉದ್ಘಾಟಿಸಿದರು.

# ವಾಜಪೇಯಿ ಭಾಜಪ ಮತ್ತು ಮುಸ್ಲಿಂ ಜನತೆ

''ಇನ್ನು ೫೦ ವರ್ಷಗಳಲ್ಲಿ ಭಾರತದಲ್ಲಿನ ಮುಸ್ಲಿಂ ಜನಸಂಖ್ಯೆ ಹಿಂದೂಗಳ ಎರಡರಷ್ಟಾಗುತ್ತದೆ.''

''ಮುಸ್ಲಿಂ ಜನಾಂಗದಲ್ಲಿ ಕುಟುಂಬ ಯೋಜನೆ ಅನುಷ್ಠಾನಗೊಳಿಸದಿದ್ದಲ್ಲಿ ಭಾರತ ಮುಸ್ಲಿಂ ರಾಷ್ಟ್ರವಾಗುತ್ತದೆ.''

''ಮುಸ್ಲಿಮರ ದೇಹ ಭಾರತದಲ್ಲಿದ್ದರೆ ಅವರ ಆತ್ಮ, ನಿಷ್ಠೆ ಪಾಕಿಸ್ತಾನದಲ್ಲಿರುತ್ತದೆ.''

''ಹಿಂದೂ ರಾಷ್ಟ್ರ ಸ್ಥಾಪನೆಯಾಗದಿದ್ದಲ್ಲಿ ಭಾರತದಲ್ಲಿ ಹಿಂದೂಗಳಿಗೇ ಸ್ಥಾನವಿಲ್ಲವಾಗುತ್ತದೆ.''

''ಮುಸಲ್ಮಾನರನ್ನು ಅರಬ್ಬೀ ಸಮುದ್ರಕ್ಕೆ ಬಿಸಾಡಬೇಕು'' (ಬಾಳ ಠಾಕರೆ)

೧೯೮೪ರಿಂದೀಚೆಗೆ, ಅರ್ಥಾತ್ ಅಯೋಧ್ಯೆ ಚಳುವಳಿಯ ನಂತರದಲ್ಲಿ ಭಾರತೀಯ ಜನತಾ ಪಕ್ಷ, ಸಂಘಪರಿವಾರದ ನಾಯಕರುಗಳಿಂದ ಹೊರಹೊಮ್ಮಿದ ಇಂತಹ ಘೋಷಣೆಗಳ ಆಧಾರದ ಮೇಲೆಯೇ ಭಾಜಪ ಲೋಕಸಭೆಯಲ್ಲಿ ತನ್ನ ಸ್ಥಾನವನ್ನು ೨ ರಿಂದ ೧೨೦ಕ್ಕೆ ಹೆಚ್ಚಿಸಿಕೊಂಡಿರುವುದು ಎಲ್ಲರೂ ಕಂಡಿರುವ ಸತ್ಯ. ಇಂದಿಗೂ ಸಹ ಹಿಂದುತ್ವವೇ ಭಾಜಪದ ಮುಖ್ಯ ಕಾರ್ಯಕ್ರಮ ಎಂದು ವಾಜಪೇಯಿ ಇತ್ತೀಚೆಗೆ ಹೇಳಿಕೆ ನೀಡಿದ್ದಾರೆ. ಭಾಜಪದ ಈ ಹಿಂದುತ್ವವಾಗಲೀ ಸಾಂಸ್ಕೃತಿಕ ರಾಷ್ಟ್ರೀಯತೆ ಆಗಲೀ ಕೇವಲ ರಾಜಕೀಯ ಪ್ರೇರೇಪಣೆಯಿಂದ ಉದ್ಭವಿಸಿದ್ದಲ್ಲ. ಅಥವಾ ಈ ಪರಿಕಲ್ಪನೆಗಳು ೧೯೮೦ರಲ್ಲಿ ಭಾಜಪ ರಾಜಕೀಯ ಪಕ್ಷವಾಗಿ ಉದಯವಾದ ನಂತರ ಹುಟ್ಟಿದ್ದಲ್ಲ. ಈ ಎಲ್ಲಾ ಅಲ್ಪಸಂಖ್ಯಾತ ವಿರೋಧೀ ನೀತಿಗಳು, ಘೋಷಣೆಗಳೂ ಭಾಜಪದ ಹಳೆಯ ಅವತಾರವಾದ ಜನಸಂಘದಿಂದ ಹರಿದು ಬಂದಿರುವುದೇ ಆಗಿವೆ. ರಾಷ್ಟ್ರೀಯ ಸ್ವಯಂ ಸೇವಕ ಸಂಘ (ಆರ್.ಎಸ್.ಎಸ್.) ಜನಿಸಿದ ಕ್ಷಣದಿಂದಲೂ ಮುಸ್ಲಿಂ ವಿರೋಧೀ ನೀತಿಯು ಅದರ ಆಧಾರ ಸ್ತಂಭವಾಗಿದ್ದು, ಸಂಘಪರಿವಾರದ ನೇತಾರರಾದ ಸಾವರ್‌ಕರ್, ಗೋಳ್ವಾಲ್‌ಕರ್, ಹೆಡಗೇವಾರ್, ರಾಜುಭಯ್ಯ ಮುಂತಾದವರು ಈ ಪ್ರಕ್ರಿಯೆಗೆ ಪುಷ್ಟಿ ನೀಡುತ್ತಲೇ ಸಂಘವನ್ನು ಬೆಳೆಸಿದರು. ಆರ್.ಎಸ್.ಎಸ್. ಶಾಖಾಗಳಲ್ಲಿ ಭಾಗವಹಿಸಿದ ಯಾರಿಗೇ ಆದರೂ ಅದರ ಮುಸ್ಲಿಂ ವಿರೋಧೀ ಭಾವನೆಗಳು ಸ್ಪಷ್ಟವಾಗುತ್ತದೆ.

**ನಾ. ದಿವಾಕರ**

ಅಯೋಧ್ಯೆ ಚಳುವಳಿಯ ಸಂದರ್ಭದಲ್ಲಿ ಈ ನಾಯಕರು ಮಾಡಿದ ರೋಷಭರಿತ, ದ್ವೇಷಭರಿತ ಭಾಷಣಗಳು ಇಂದಿಗೂ ಜನತೆಯ ಕಿವಿಗಳಲ್ಲಿ ಮೊಳಗುತ್ತಿವೆ. ಅದ್ವಾನಿಯವರು ೧೯೯೦ರಲ್ಲಿ ಕೈಗೊಂಡ ರಥಯಾತ್ರೆಯ ಕಹಿ ನೆನಪುಗಳು ಇಂದಿಗೂ ಅಚ್ಚಳಿಯದೆ ಉಳಿದಿವೆ. ಮೀರತ್, ಸೂರತ್, ಮುಂಬೈ, ಅಹಮದಾಬಾದ್, ಭಾಗಲ್‌ಪುರ, ಕೋಲಾರ, ರಾಮನಗರ, ಶಿಡ್ಲಘಟ್ಟ, ಹುಬ್ಬಳ್ಳಿ ಮುಂತಾದ ಕೋಮು ದಂಗೆಗಳೂ ಹಠಾತ್ತನೆ ಉದ್ಭವಿಸಿದ್ದಲ್ಲ. ಅದ್ವಾನಿಯವರ ರಥಯಾತ್ರೆ, ಆವೇಶಭರಿತ ಭಾಷಣ, ಅಲ್ಪಸಂಖ್ಯಾತರ ಮೇಲಿನ ಇಲ್ಲಸಲ್ಲದ ಆರೋಪಗಳು, ಇಸ್ಲಾಂ ಬಗೆಗಿನ ಅಪಪ್ರಚಾರ, ಭಾರತೀಯ ಮುಸ್ಲಿಂ ಸಮುದಾಯದ ವಿರುದ್ಧ ಮಾಡಿದ ಅಪಪ್ರಚಾರ, ಇವೆಲ್ಲದರ ಪರಿಣಾಮವೇ ಈ ದಂಗೆಗಳು. ಈ ದಂಗೆಗಳಲ್ಲಿ ಮಡಿದ ಹಿಂದೂ ಮುಸಲ್ಮಾನರ ಸಂಖ್ಯೆ ಸಾವಿರಾರು. ತಮ್ಮ ವಿಷ ಬೀಜ ಬಿತ್ತನೆ ಕಾರ್ಯಕ್ರಮದಡಿಯಲ್ಲಿ, ಅರ್ಥಾತ್ ರಥಯಾತ್ರೆಯಲ್ಲಿ, ಅದ್ವಾನಿಯವರು ಹಿಂದೂಗಳ ಬಗೆಗಿಂತಲೂ ಮುಸಲ್ಮಾನರ ಬಗ್ಗೆಯೇ ಹೆಚ್ಚಾಗಿ ಮಾತನಾಡಿದ್ದು ಎಲ್ಲರಿಗೂ ತಿಳಿದ ವಿಷಯವೇ. ಸೆಕ್ಯುಲರಿಸಂ ಒಂದು ಪಾಶ್ಚಾತ್ಯ ಕಲ್ಪನೆ, ಅದು ನಮ್ಮ ದೇಶದ ಸಂಸ್ಕೃತಿಗೆ ಹೊಂದಿಕೊಳ್ಳುವುದಿಲ್ಲ, ಇದು ಎಡಪಂಥೀಯರ ಕುತಂತ್ರ, ಭಾರತದ ಸಂವಿಧಾನದಲ್ಲಿ ಸೆಕ್ಯುಲರಿಸಂ ಎಂಬ ಪದವೇ ಇರಬಾರದು ಎಂದೆಲ್ಲಾ ವಾದಿಸಲಾಗುತ್ತಿತ್ತು.

೧೯೯೬ರ ಚುನಾವಣೆಯಲ್ಲಿ ೧೬೧ ಸಂಸತ್ ಸ್ಥಾನಗಳನ್ನು ಗಳಿಸಿದ ನಂತರ, ಅಧಿಕಾರದ ರುಚಿ ಕಂಡ ಭಾಜಪ ಸ್ಪಷ್ಟವಾಗಿ ತನ್ನ ದ್ವಂದ್ವ ನೀತಿಯನ್ನು ಅನುಸರಿಸತೊಡಗಿತೆಂದು ಹೇಳಬಹುದು. ಬಾಬ್ರಿ ಮಸೀದಿಯು ಧ್ವಂಸವಾದ ನಂತರ ದೇಶದಾದ್ಯಂತ ನಡೆದ ಕೋಮುಗಲಭೆ ಹಿಂಸಾಚಾರಗಳು ಭಾಜಪಕ್ಕೆ ಸಂಸತ್ ಭವನದ ಮೆಟ್ಟಿಲುಗಳಾಗಿ ಪರಿಣಮಿಸಿದವು. ಆದರೆ ೧೯೯೬ರಲ್ಲಿ ಅಧಿಕಾರ ಗಳಿಸಲಾಗದ ಭಾಜಪಕ್ಕೆ ೧೯೯೮ರಲ್ಲಿ ಇತರೆ ಪಕ್ಷಗಳ ನೆರವು ಪಡೆದು ಸರ್ಕಾರ ರಚಿಸುವುದು ಅನಿವಾರ್ಯವಾಯಿತು. ಈ ಅವಧಿಯಲ್ಲಿ ಸಂಘಪರಿವಾರವು ತನ್ನ ಚಾಣಾಕ್ಷ ನೀತಿಯನ್ನು ಅನಾವರಣಗೊಳಿಸಿತು. ಅಂದಿನವರೆಗೂ ಇಡೀ ಸಂಘಪರಿವಾರದಿಂದ ಒಂದೇ ದನಿ ಹೊರಡುತ್ತಿತ್ತು. ಅದ್ವಾನಿ-ವಾಜಪೇಯಿ-ಆರ್.ಎಸ್.ಎಸ್. ನಾಯಕರ ಮಾತುಗಳನ್ನೇ ತಳಮಟ್ಟದ ಸಂಘದ ಕಾರ್ಯಕರ್ತನೂ ಪುನರುಚ್ಚರಿಸುವಷ್ಟು ಮಟ್ಟಿಗೆ ಏಕತಾನತೆಯನ್ನು ಸಂಘಪರಿವಾರ ಕಾಪಾಡಿಕೊಂಡು ಬಂದಿತ್ತು. ಆದರೆ ೧೯೯೮ರಲ್ಲಿ ಅಧಿಕಾರದ ರುಚಿ ಕಂಡ ಭಾಜಪ ಸಂಘಪರಿವಾರವು ಹೊಸ ತಂತ್ರಗಳನ್ನು ಹುಟ್ಟುಹಾಕಿದವು. ಭಾಜಪದಲ್ಲಿ ಮೃದು-ಹಠಮಾರಿ ಸ್ವಭಾವದವರ ಎರಡು ಬಣಗಳನ್ನು ಉದ್ದೇಶಪೂರ್ವಕವಾಗಿ ಸೃಷ್ಟಿಸಲಾಯಿತು. ವಾಜಪೇಯಿ ಮೃದು ಬಣದ ನಾಯಕರಾದರೆ, ಅದ್ವಾನಿ ಹಠಮಾರಿ ಬಣದ ನಾಯಕರಾದರು! ೧೯೯೬-೧೯೯೮ರ ಸಂಸತ್ತಿನ ಚರ್ಚೆಗಳಲ್ಲಿ ''ವಾಜಪೇಯಿ ಒಳ್ಳೆಯವರು, ಆದರೆ ಅವರು ಪ್ರತಿನಿಧಿಸುವ ಪಕ್ಷ ಸರಿಯಿಲ್ಲ'' ಎಂದು ಹೇಳಿದ ಅನೇಕರಲ್ಲಿ ಮಾಜಿ ಪ್ರಧಾನಿ ದೇವೇಗೌಡರೂ ಒಬ್ಬರು. ಆ ಸಮಯದಲ್ಲಿ ಮುದ್ರಣ ಹಾಗೂ ದೃಶ್ಯ ಮಾಧ್ಯಮಗಳೂ ಸಹ ಸಂಘಪರಿವಾರದ ಈ ಕುತಂತ್ರಕ್ಕೆ ತಾಳ ಹಾಕಿದವು. ಇದರ ಪರಿಣಾಮವಾಗಿ ಕಟ್ಟಾ ಆರ್.ಎಸ್.ಎಸ್. ಸದಸ್ಯರಾದ ವಾಜಪೇಯಿ, ತಾವು ನಿಷ್ಠಾವಂತ ಸ್ವಯಂಸೇವಕ ಎಂದು ಹೇಳಿಕೊಂಡೂ, ಉದಾರವಾದಿ ಮುಖವಾಡ ಧರಿಸಿ ಸೆಕ್ಯುಲರ್ ಹಣೆಪಟ್ಟಿ ಪಡೆಯುವಲ್ಲಿ ಯಶಸ್ವಿಯಾದರು. ಈ ಸನ್ನಿವೇಶವನ್ನು ತನ್ನ ರಾಜಕೀಯ ದುರುದ್ದೇಶಗಳಿಗಾಗಿ ಬಳಸಿಕೊಂಡ ಸಂಘಪರಿವಾರ ಸ್ವದೇಶಿ, ಜಾಗತೀಕರಣ, ರಾಮಮಂದಿರ ಮುಂತಾದ ವಿಚಾರಗಳಲ್ಲಿ ವಾಜಪೇಯಿಯನ್ನು ಖಂಡಿಸಲಾರಂಭಿಸಿದ್ದು, ವಾಜಪೇಯಿಯವರ ಉದಾರವಾದೀ ಮುಖವಾಡಕ್ಕೆ ಹೆಚ್ಚು ಮೆರುಗು ನೀಡಿತೆಂದು ಹೇಳಬಹುದು. ಮಾಧ್ಯಮಗಳಲ್ಲಿ ವಾಜಪೇಯಿಯವರ ಮೃದು ಹಿಂದುತ್ವ ಧೋರಣೆ ಸಹನೀಯ ಎಂಬಂತೆ ಚಿತ್ರಿಸಲಾಯಿತು. ಈ ಮೃದು ಹಿಂದುತ್ವಕ್ಕೆ ಸಮಾಜವಾದಿಗಳೂ ಸೇರಿದಂತೆ ಅನೇಕ ರಾಜಕೀಯ ನಾಯಕರುಗಳು ಬಲಿಯಾಗಿದ್ದಾರೆ. ತಮ್ಮ ಅಮೆರಿಕಾ ಪ್ರವಾಸದ ಸಮಯದಲ್ಲಿ ಅಲ್ಲಿನ ಹಿಂದೂಗಳನ್ನು ಉದ್ದೇಶಿಸಿ ಮಾತನಾಡುವಾಗ ವಾಜಪೇಯಿಯವರೇ ತಮ್ಮ ಮತ್ತು ಸಂಘಪರಿವಾರದ ನಡುವಿನ ಸಂಬಂಧದ ಬಗ್ಗೆ ಸ್ಪಷ್ಟವಾಗಿ ತಿಳಿಸಿ ತಾವು ಎಂದೆಂದಿಗೂ ಸಂಘದ ನಿಷ್ಠಾವಂತ ಸೇವಕನೇ ಎಂದು ಘೋಷಿಸಿದರೂ ಇಲ್ಲಿನ ಸೆಕ್ಯುಲರ್ ನಾಯಕರುಗಳಿಗೆ ಜ್ಞಾನೋದಯವಾಗಲಿಲ್ಲ. ಗುಜರಾತ್ ಗಲಭೆಗಳ ಬಗ್ಗೆ ಅವರ ನಿಲುವು, ಮೋದಿಯ ಸಮರ್ಥನೆ ಇವೆಲ್ಲವೂ ವಾಜಪೇಯಿಯವರ ಅಲ್ಪಸಂಖ್ಯಾತ ವಿರೋಧೀ ನಿಲುವನ್ನು ಸ್ಪಷ್ಟವಾಗಿ ನಿರೂಪಿಸುತ್ತವೆ. ಆದರೆ ರಾಜಕೀಯ ಕ್ಷೇತ್ರದಲ್ಲಿ ಭಾಜಪ ಅಧಿಕಾರದ ಗದ್ದುಗೆ ಹಿಡಿಯಬೇಕಾದರೆ ಇಂದಿನ ಪರಿಸ್ಥಿತಿಯಲ್ಲಿ ಅದು ಏಕಪಕ್ಷೀಯವಾಗಿ ಸಾಧಿಸಲಾಗುವುದಿಲ್ಲ. ಈ



ಅಂಶವನ್ನು ಯೋಚಿಸಿಯೇ ಶ್ರೀಮಾನ್ 'ಸತ್ಯವಾದಿ'ಗಳು ಎನ್.ಡಿ.ಎ. ಬಲಪಡಿಸುವ ಪ್ರಯತ್ನದಲ್ಲಿ ತೊಡಗಿದ್ದರು. ಕಳೆದ ಐದು ವರ್ಷಗಳ ಅಧಿಕಾರಾವಧಿಯಲ್ಲಿ, ತಾವು ಕೇವಲ ಸಂಘದ ನಿಷ್ಠಾವಂತ ಸೇವಕನಾಗಿದ್ದರೆ ಪ್ರಧಾನಿಯಾಗಲು ಸಾಧ್ಯವಿಲ್ಲ ಎಂಬ ಸತ್ಯಾಂಶವನ್ನು ಅರಿತ ವಾಜಪೇಯಿಯವರು ೨೦೦೪ರ ಚುನಾವಣೆಗಳ ಹಿನ್ನೆಲೆಯಲ್ಲಿ ಮುಸ್ಲಿಂ ಜನತೆಯನ್ನು ಓಲೈಸುವುದರಲ್ಲಿ ನಿರತರಾಗಿದ್ದರು. ವಾಜಪೇಯಿ ಅಥವಾ ಭಾಜಪ ಸಂಘಪರಿವಾರದ ಈ ಶೀರ್ಷಾಸನವನ್ನು ಈ ಹಿನ್ನೆಲೆಯಿಂದಲೇ ವಿಶ್ಲೇಷಿಸಬೇಕಾಗುತ್ತದೆ.

ಇತ್ತೀಚೆಗೆ ದೆಹಲಿಯ ಜುಮಾಮಸೀದಿಯ ಶಾಹಿ ಇಮಾಂ ಸೈಯದ್ ಅಹಮದ್ ಬುಖಾರಿ ಭಾಜಪಕ್ಕೆ ಮತನೀಡುವಂತೆ ಭಾರತೀಯ ಮುಸ್ಲಿಮರಿಗೆ ಆದೇಶ ನೀಡಿದ್ದು (ದೈನಿಕ್ ಭಾಸ್ಕರ್‌ನಲ್ಲಿ ಬಂದ ವರದಿ) ಅಚ್ಚರಿಯ ಅಂಶವೇನಲ್ಲ. ದೈನಿಕ್ ಭಾಸ್ಕರ್ ಸಂಘಪರಿವಾರದ ನಿಕಟವರ್ತಿಗಳಿಗೆ ಪ್ರಿಯವಾದ ಪತ್ರಿಕೆ. ಈ ಹೇಳಿಕೆ ಅಷ್ಟೇನೂ ಪರಿಣಾಮಕಾರಿಯಾಗದಿದ್ದರೂ, ಆಘಾತಕಾರಿಯಂತೂ ಆಗಿತ್ತು. ಆದರೂ ಈ ಸುದ್ದಿ ದೈನಿಕ ಭಾಸ್ಕರದಲ್ಲಿ ಪ್ರಕಟವಾಗಿರುವುದು ಸಂಘಪರಿವಾರದ ಪಿತೂರಿಯನ್ನು ನಿರೂಪಿಸುತ್ತದೆ. ಭಾರತೀಯ ಜನತಾ ಪಕ್ಷ ಪುನಃ ಅಧಿಕಾರಕ್ಕೆ ಬಂದಲ್ಲಿ ಮುಸಲ್ಮಾನರಿಗೆ ಶಿಕ್ಷಣ, ಉದ್ಯೋಗ, ನ್ಯಾಯ, ಒದಗಿಸುತ್ತದೆ ಎಂಬ ಬುಖಾರಿಯವರ ಬಾಲಿಶ ಹೇಳಿಕೆಗೆ ಭಾಜಪ ಸಂಘಪರಿವಾರವೂ ಪ್ರತಿಕ್ರಿಯಿಸದ್ದುದು ಸೋಜಿಗದ ಸಂಗತಿಯೇ. ಸತ್ಯಾಂಶವೆಂದರೆ ಭಾಜಪದ ನಾಯಕರುಗಳೇ ಬುಖಾರಿಯನ್ನು ಮುಸ್ಲಿಮರ ಗುತ್ತೇದಾರ, ಎಂದೆಲ್ಲಾ ಹೀಯಾಳಿಸಿದ್ದಾರೆ. ಖೋಟಾ ಸೆಕ್ಯುಲರ್ ಪಕ್ಷಗಳಿಗೆ ವೋಟ್ ಬ್ಯಾಂಕ್ ಗಳಿಸಿಕೊಡುವುದರಲ್ಲಿ ಬುಖಾರಿ ನಿಸ್ಸೀಮ ಎಂದು ಭಾಜಪ ನಾಯಕರು ಲೇವಡಿ ಮಾಡಿದ್ದೂ ಉಂಟು. ನಜ್ಮಾ ಹೆಪ್ತುಲ್ಲಾ, ಆರಿಫ್ ಮಹಮದ್ ಖಾನ್ ಮುಂತಾದ ನಾಯಕರೂ ಈಗ ಭಾಜಪದ ಪಟ್ಟಿಯಲ್ಲಿದ್ದಾರೆ. ಈ ಪ್ರಕ್ರಿಯೆಗೆ ಪೂರಕವಾಗಿ ಕೆಲವು ಪತ್ರಿಕೆಗಳ ಮುಸ್ಲಿಂ ಸಂಪಾದಕರೂ ಸಹ, "ಕಾಂಗ್ರೆಸ್, ಸಮಾಜವಾದಿ ಪಕ್ಷಗಳು ಮುಸಲ್ಮಾನರನ್ನು ಕೇವಲ ಮತ ಗಳಿಸಲು ಶೋಷಣೆ ಮಾಡುತ್ತಿವೆ, ಆದ್ದರಿಂದ ಮುಸ್ಲಿಂ ಜನತೆ ಈಗ ಆ ಪಕ್ಷಗಳ ಹಿಡಿತದಿಂದ ಹೊರಬರುವುದು ಅವಶ್ಯ" ಎಂದೂ ಪ್ರತಿಪಾದಿಸಿದ್ದುಂಟು.

ಭಾಜಪ ಬೆಂಬಲಿಸುವ ಮುಸ್ಲಿಂ ನಾಯಕರುಗಳಿಗೆ ಅವರದೇ ಆದ ಕಾರಣಗಳೂ ಇವೆ. ಉತ್ತರ ಪ್ರದೇಶದಲ್ಲಿ ಎರಡು ತಿಂಗಳ ಹಿಂದೆ "ಅಟಲ್ ಬಿಹಾರೀ ವಾಜಪೇಯಿ ಹಿಮಾಯತ್ ಸಮಿತಿ" ಎಂಬ ಮುಸ್ಲಿಂ ಸಂಘಟನೆ ಆರಂಭಗೊಂಡಿತ್ತು. ಈ ಸಮಿತಿಯು ವಾಜಪೇಯಿಯವರ ಗೆಲುವಿಗಾಗಿ ಮಸೀದಿಗಳಲ್ಲಿ ಪ್ರಾರ್ಥನೆ ಸಲ್ಲಿಸುವುದೇ ಅಲ್ಲದೆ ವಾಜಪೇಯಿ ಪರ ಪ್ರಚಾರದಲ್ಲಿ ನಿರಂತರವಾಗಿ ತೊಡಗಿತ್ತು. ವಾಜಪೇಯಿಯವರ ಆಡಳಿತಾವಧಿಯಲ್ಲಿ ಈ ದೇಶದ ಮುಸಲ್ಮಾನರಿಗೆ ಯಾವುದೇ ರೀತಿಯ ಹಾನಿಯಾಗಿಲ್ಲವೆಂದರು ಹಿಮಾಯತ್ ಸಮಿತಿಯ ಅಧ್ಯಕ್ಷ ಖ್ವಾಜಾ ಇಫ್ತೀಕರ್ ಅಹಮದ್. ಒಂದು ಕಾಲದಲ್ಲಿ ಭಾಜಪದ ನಾಯಕರು ಮುಸ್ಲಿಮರ ತುಷ್ಟೀಕರಣದ ಅಂಶಗಳೆಂದು ಹೀಯಾಳಿಸುತ್ತಿದ್ದ ಎಲ್ಲಾ ರೀತಿ ರಿವಾಜುಗಳನ್ನೂ ವಾಜಪೇಯಿ ಸರ್ಕಾರ ಹಾಗೆಯೇ ಉಳಿಸಿಕೊಂಡು ಬಂದಿತು. ಹಜ್ ಯಾತ್ರೆಯ ಸಬ್ಸಿಡಿಯನ್ನು ಏರಿಸಲಾಯಿತು. ಹಜ್ ಯಾತ್ರಿಗಳು ಹೆಚ್ಚು ಕೇಂದ್ರಗಳಿಂದ ಪ್ರಯಾಣ ಆರಂಭಿಸಲು ಅನುಕೂಲ ಮಾಡಿಕೊಡಲಾಯಿತು. ರಾಷ್ಟ್ರೀಯ ಅಲ್ಪಸಂಖ್ಯಾತ ಸಮಿತಿ ಜೀವಂತವಾಗಿದೆ. ಗುಜರಾತ್‌ನ ಪ್ರಕರಣವನ್ನು ಹೊರತುಪಡಿಸಿದರೆ ಮುಸ್ಲಿಮರಿಗೆ ಯಾವುದೇ ತೊಂದರೆ ಆಗಿಲ್ಲ ಎಂದು ಭಾಜಪ ಹಿಂಬಾಲಕರ ಅಂಬೋಣ. ಕೇವಲ ಕೆಲವು ವರ್ಷಗಳ ಹಿಂದೆ ಭಾಜಪ ಸಂಘಪರಿವಾರದ ನಾಯಕರು ಮದರಸಗಳನ್ನು ಭಯೋತ್ಪಾದಕತೆಯ ಕೇಂದ್ರಗಳೆಂದೂ, ಅಲ್ಲಿ ಶಸ್ತ್ರಾಸ್ತ್ರ ಸಂಗ್ರಹಿಸಿ ಸಶಸ್ತ್ರ ಹೋರಾಟಕ್ಕೆ ತರಬೇತಿ ನೀಡಲಾಗುತ್ತದೆ ಎಂದೂ, ಮದರಸಗಳನ್ನು ವಶಪಡಿಸಿಕೊಳ್ಳಬೇಕೆಂದೂ ಆಗ್ರಹಿಸುತ್ತಿದ್ದುದುಂಟು. ಪಾಕಿಸ್ತಾನದ ಐಎಸ್ಐ ಏಜೆಂಟರುಗಳಿಗೆ ಮದರಸಗಳು ಆಶ್ರಯ ತಾಣಗಳೆಂದೂ ಭಾಜಪ ನಾಯಕರು ಹೇಳಿದ್ದುಂಟು. ಆದರೆ ಚುನಾವಣಾ ಸಂದರ್ಭದಲ್ಲಿ ವಾಜಪೇಯಿಯವರು ಮದರಸಗಳನ್ನು ಪ್ರಶಂಸಿಸಲಾರಂಭಿಸಿದ್ದರು. ತಾವು ಅಧಿಕಾರಕ್ಕೆ ಬಂದಲ್ಲಿ ಎರಡು ಕೋಟಿ ಉರ್ದು ಶಿಕ್ಷಕರನ್ನು ನೇಮಿಸುವುದಾಗಿ ಭರವಸೆ ನೀಡಿದ್ದರು!

ಗುಜರಾತ್ ಹತ್ಯಾಕಾಂಡಗಳ ನಂತರದಲ್ಲಿ ಇಡೀ ದೇಶವೇ ನರೇಂದ್ರ ಮೋದಿಯನ್ನು ಉಗ್ರವಾಗಿ ಖಂಡಿಸುತ್ತಿದ್ದಾಗ ವಾಜಪೇಯಿ ಮೋದಿಯನ್ನು ಸಮರ್ಥಿಸಿದ್ದರು. ಗುಜರಾತ್ ನ್ಯಾಯಾಲಯದಲ್ಲಿ ತಮಗೆ ನ್ಯಾಯ ದೊರೆಯದಿದ್ದಾಗ ಜಹೀರಾಳಂತಹವರು ಸರ್ವೋಚ್ಚ ನ್ಯಾಯಾಲಯದ ಮೊರೆ ಹೊಕ್ಕಾಗ ವಾಜಪೇಯಿಯವರು ನೊಂದ ಜನತೆಗೆ ಸಾಂತ್ವನ ಹೇಳುವ ಬದಲು ಮೋದಿಯವರ ಪಕ್ಷ ಆಡಳಿತವನ್ನು ಹಾಡಿ ಹೊಗಳುತ್ತಿದ್ದರು. ನರೇಂದ್ರ ಮೋದಿ ಸೃಷ್ಟಿಸಿದ್ದ ಮುಸ್ಲಿಂ ವಿರೋಧಿ ಹಿಂದೂ ಭಯೋತ್ಪಾದಕತೆಯ ಲಾಭ ಪಡೆಯಲು ಸಂಘಪರಿವಾರ ನಡೆಸಿದ್ದ ಸಂಚಿಗೆ ವಾಜಪೇಯಿ ಹಸಿರು ನಿಶಾನೆ ತೋರಿಸಿ ಪರಿವಾರಕ್ಕೆ ತಮ್ಮ ನಿಷ್ಠೆ ವ್ಯಕ್ತಪಡಿಸಿದ್ದರು. ಈ ಹಿಂದೆ ಎಂದೂ ದೇಶದ ಅಲ್ಪಸಂಖ್ಯಾತರಲ್ಲಿ ಇಷ್ಟೊಂದು ಭೀತಿ, ಪರಕೀಯ ಭಾವನೆ ಉದ್ಭವಿಸಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲೂ ವಾಜಪೇಯಿಯವರು ಮೋದಿಯವರನ್ನು ಖಂಡಿಸದೆ ಸಮರ್ಥಿಸಿದ್ದು ಅವರ ರಾಜಕೀಯ ಠಕ್ಕುತನವನ್ನು ತೋರಿಸುತ್ತದೆ. ವಾಜಪೇಯಿಯವರು ಕೇವಲ ಮುಸ್ಲಿಂ ಮತಗಳನ್ನು ಗಳಿಸಬೇಕೆಂದೇ ಈ ಹೊಸ ರಾಗ ಹಾಡುತ್ತಿದ್ದರೆಂದು ಈ ವಿದ್ಯಮಾನಗಳಿಂದ ಸ್ಪಷ್ಟವಾಗುತ್ತದೆ.

ಪರೋಕ್ಷವಾಗಿ ಇಷ್ಟೆಲ್ಲಾ ಮುಸ್ಲಿಂ ವಿರೋಧಿ ನೀತಿಗಳನ್ನು ಅನುಸರಿಸುತ್ತಿದ್ದರೂ ಎಲ್ಲೋ ಒಂದು ಕಡೆ ವಾಜಪೇಯಿಯವರ ಉದಾರವಾದಿ ಹಿಂದುತ್ವದ, ಮೃದು ಹಿಂದುತ್ವದ ಮುಖವಾಡವು ಮಧ್ಯಮ ವರ್ಗದ ಕೆಲವು ಮುಸ್ಲಿಮರನ್ನು ಭಾಜಪದೆಡೆಗೆ ಸೆಳೆಯುವುದರಲ್ಲಿ ಯಶಸ್ವಿಯಾಯಿತು. ಭಾರತೀಯ ಪ್ರಜಾತಂತ್ರದಲ್ಲಿ ಒಂದು ರಾಜಕೀಯ ಪಕ್ಷವಾಗಿ ಭಾಜಪಕ್ಕೆ ಈ ಹಾದಿ ಅನುಸರಿಸುವ ಹಕ್ಕಿದೆ, ನಿಜ. ಹಿಂದೆ ಕಾಂಗ್ರೆಸ್ ಮಾಡುತ್ತಿದ್ದ, ಈಗಲೂ ಮಾಡುತ್ತಿರುವ ಕೆಲಸವನ್ನೇ ಭಾಜಪ ಮಾಡುತ್ತಿದೆ. ಪ್ರಸ್ತುತ ರಾಜಕೀಯದಲ್ಲಿ ಇದೇನೂ ಅತಿಶಯವಲ್ಲ. ಆದರೆ ಇಲ್ಲಿ ಉದ್ಭವಿಸುವ ಪ್ರಶ್ನೆ ಎಂದರೆ ಮುಸ್ಲಿಮರನ್ನು ಓಲೈಸುವ ಕ್ರಮ ಕೇವಲ ಮೊನ್ನಿನ ಲೋಕಸಭಾ ಚುನಾವಣೆಗಳಿಗೆ ಸೀಮಿತವಾದದ್ದೋ ಅಥವಾ ನಿರಂತರವಾಗುವುದೋ ಎಂಬುದು. ಮುಸ್ಲಿಂ ಜನಾಂಗದೊಡನೆ ಭಾಜಪದ ಸಂಬಂಧ ಹೊಸ ಐತಿಹಾಸಿಕ ತಿರುವು ಪಡೆದಿದೆಯೇ? ೧೯೮೭ರಲ್ಲಿ ಪಾಲಂಪುರದಲ್ಲಿ ಕೈಗೊಂಡ ನಿರ್ಣಯವನ್ನು ಭಾಜಪ ಬದಲಿಸುವುದೇ? ಭಾಜಪ ತನ್ನ ಚಹರೆ ಬದಲಿಸಿದೆಯೇ? ಅಥವಾ ಮುಸ್ಲಿಂ ಜನತೆ ತಮ್ಮ ಅಭಿಪ್ರಾಯ ಬದಲಿಸಿರುವುದೇ?

ಈ ಎಲ್ಲಾ ಪ್ರಶ್ನೆಗಳಿಗೆ ಸಂಘಪರಿವಾರದ ರಾಜಕಾರಣದಲ್ಲೇ ಉತ್ತರ ದೊರಕುತ್ತದೆ. ತನ್ನ ಆರು ವರ್ಷದ ಆಡಳಿತಾವಧಿಯಲ್ಲಿ ಭಾಜಪವು ಭಾರತೀಯ ರಾಷ್ಟ್ರೀಯವಾದಕ್ಕೆ ಹಿಂದುತ್ವವನ್ನೇ ಕೇಂದ್ರ ಬಿಂದುವಾಗಿಸಿತ್ತು. ಗುಜರಾತ್ ಗಲಭೆಗಳ ನಂತರ ಮುಸ್ಲಿಂ ಸಮುದಾಯದಲ್ಲೂ ಸಹ ಭೀತಿಯ ವಾತಾವರಣ ಸೃಷ್ಟಿಯಾಗಿದ್ದು, ಬಹುಸಂಖ್ಯಾತರ ವಿರುದ್ಧ ಸಿಡಿದು ನಿಲ್ಲುವುದು ದುಸ್ತರ ಎಂದು ಮನವರಿಕೆಯಾಗಿದೆ. ಇದು ಭೀತಿಯ ಪರಿಣಾಮವೇ ಹೊರತು ಸ್ನೇಹದ ಫಲವಲ್ಲ ಎಂಬುದು ಗಮನಾರ್ಹ ಅಂಶ. ಒಂದೆಡೆ ಅಲ್ಪಸಂಖ್ಯಾತರಲ್ಲಿ ಭೀತಿ ಭಯದ ವಾತಾವರಣ ಸೃಷ್ಟಿಯಾಗಿದ್ದರೆ ಇನ್ನೊಂದೆಡೆ ವಾಜಪೇಯಿ ಸರ್ಕಾರ ಎಲ್ಲಾ ಸರ್ಕಾರೀ ಕ್ಷೇತ್ರಗಳಲ್ಲೂ ಸಂಘಪರಿವಾರದ ಕಾರ್ಯಕರ್ತರನ್ನು ತುಂಬಿಬಿಟ್ಟಿದೆ. ರಾಜ್ಯಾಂಗ, ಕಾರ್ಯಾಂಗ, ನ್ಯಾಯಾಂಗ, ಸಾರ್ವಜನಿಕ ಕ್ಷೇತ್ರ, ಪೊಲೀಸ್, ಮಿಲಿಟರಿ, ಎಲ್ಲೆಡೆಯಲ್ಲೂ ಸಂಘಪರಿವಾರದ ಪ್ರಚಾರ ಕಾರ್ಯ ನಿಶ್ಚಿಂತೆಯಿಂದ ನಡೆಯುತ್ತಿದೆ. ಹೀಗಾಗಿ ಮುಸ್ಲಿಂ ಜನತೆಯನ್ನು ಅಧಿಕಾರ ಬಲದಿಂದ ನಿಯಂತ್ರಿಸುವ ಕುತಂತ್ರದಲ್ಲಿ ಭಾಜಪ ಸಾಕಷ್ಟು ಸಫಲವಾಗಿದೆ. ಉತ್ತರ ಪ್ರದೇಶದಲ್ಲಿ ಆರಂಭಗೊಂಡಿರುವ "ರಾಷ್ಟ್ರವಾದೀ ಮುಸ್ಲಿಂ ಆಂದೋಲನ – ಒಂದು ಹೊಸ ದಾರಿ" ಎಂಬ ಸಂಘಟನೆ ಭಾಜಪ ಸಂಘಪರಿವಾರದ ಈ ಕುತಂತ್ರಕ್ಕೆ ಇಂಬು ನೀಡುತ್ತಿದೆ. ಕೆಲವು ವರದಿಗಳನ್ವಯ ಈ ಸಂಘಟನೆಯು ಶಿಳ ಸಮ್ಮೇಳನಗಳನ್ನು ನಡೆಸಿದ್ದು, ಆರ್.ಎಸ್.ಎಸ್. ನಿಂದಲೂ ಪ್ರಶಂಸೆ ಗಳಿಸಿದೆ. ಇದರ ಒಂದು ಸಭೆಗೆ ಆರ್.ಎಸ್.ಎಸ್. ನಾಯಕ ಸುದರ್ಶನ್ ಸಹ ಭೇಟಿ ನೀಡಿದ್ದರೆಂದು ಹೇಳಲಾಗುತ್ತಿದೆ. ಈ ಸಂಘಟನೆಯು ೩೭೦ನೆಯ ವಿಧಿ, ಅಯೋಧ್ಯೆ ರಾಮಮಂದಿರ, ಗೋಹತ್ಯೆಗಳ ಬಗ್ಗೆ ಸಂಘಪರಿವಾರದ ನಿಲುವನ್ನೇ ತಾಳುತ್ತದೆ. ಈ ವಿದ್ಯಮಾನಗಳ ಪರಿಣಾಮವಾಗಿ ಮುಸ್ಲಿಂ ಸಮುದಾಯ ಕ್ರಮೇಣ ಬದಲಾಗುತ್ತಿದ್ದು ಸಂಘಪರಿವಾರದ ನಿಯಂತ್ರಣಕ್ಕೆ ಬರುತ್ತಿದೆ, ಎಂದು ಊಹಿಸಲಾಗುತ್ತದೆ.

ಒಂದೆಡೆ ಕಾಂಗ್ರೆಸ್ ಪಕ್ಷದ ಗೋಸುಂಬೆ ರಾಜಕೀಯ ಮುಸಲ್ಮಾನರನ್ನು ಕಂಗೆಡಿಸಿದ್ದರೆ, ಇನ್ನೊಂದೆಡೆ ಸೆಕ್ಯುಲರ್ ಪಕ್ಷಗಳೆಂದು ಹೇಳಿಕೊಳ್ಳುವ ಜನತಾದಳ, ಸಮಾಜವಾದಿ ಪಕ್ಷ, ಬಿಎಸ್‌ಪಿ ಮುಂತಾದ ಪಕ್ಷಗಳೂ ಮುಸ್ಲಿಂರ ಮತ ಗಳಿಸುವ ದೃಷ್ಟಿಯಿಂದ ಮಾತ್ರ ತಮ್ಮ ಸಂಕುಚಿತ ರಾಜಕೀಯ ನಡೆಸುತ್ತಿರುವುದು ಕಂಡುಬರುತ್ತಿದೆ. ಒಂದು ಅಲ್ಪಸಂಖ್ಯಾತ ಜನಾಂಗದ ನೈಜ ಸಮಸ್ಯೆಗಳನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸಿ ಪರಿಹಾರ ಕಡುಹಿಡಿಯುವ ನಿಟ್ಟಿನಲ್ಲಿ ಬಹುತೇಕ ಪಕ್ಷಗಳು ನಿಷ್ಠೆಯಿಂದ ಕಾರ್ಯ ನಿರ್ವಹಿಸಿಲ್ಲ. ಪ್ರಸ್ತುತ ಜಾಗತೀಕರಣ ಸನ್ನಿವೇಶದಲ್ಲಿ ಮುಸ್ಲಿಮರು ಮಾತ್ರವಲ್ಲದೆ ದಲಿತರೂ ಬಡಜನತೆಯೂ ಅತಂತ್ರ ಸ್ಥಿತಿ ಎದುರಿಸುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಬಹುಕಾಲದ ಅವಕಾಶವಾದೀ ರಾಜಕೀಯಕ್ಕೆ ಪರ್ಯಾಯವಾಗಿ ಒಂದು ಪ್ರಜಾತಾಂತ್ರಿಕ ರಾಜಕೀಯ ವೇದಿಕೆಯನ್ನು ರೂಪಿಸುವ ಅಗತ್ಯತೆಯಿದೆ.

■ ನಾ. ದಿವಾಕರ

# ಗರತಿ ಗಯ್ಯಾಳಿ

**ಗೊಂ**ದಲಪುರದ ಸುದೀರ್ಘ ಇತಿಹಾಸದಲ್ಲಿ ಇಷ್ಟು ಗೊಂದಲದ, ಇಂಥ ಕುತೂಹಲದ, ಪರಿಸ್ಥಿತಿ ಹಿಂದೆಂದೂ ಉಂಟಾದುದಿಲ್ಲ. ಯಾರು ಎಲ್ಲಿ ಭೇಟಿಯಾದರೂ ತಗ್ಗಿದ ದನಿಯಲ್ಲಿ ಕೆಲವೊಮ್ಮೆ ಚೇಷ್ಟೆಗಾಗಿ, ಮತ್ತೆ ಕೆಲವು ಬಾರಿ ಅತ್ಯಂತ ಗಂಭೀರವಾಗಿ ಈ ಕುರಿತೇ ಮಾತಿಗೆ ಪ್ರಾರಂಭಿಸುತ್ತಿದ್ದರು. ಚರ್ಚೆಯ ಮೂಲಕ ಇತರರ ಮನಸ್ಸಿನಲ್ಲಿರುವುದನ್ನು ಅಂದಾಜು ಮಾಡುತ್ತಿದ್ದರು. ಭಿನ್ನಾಭಿಪ್ರಾಯ ತಲೆದೋರಿದಾಗ ಕೆಲಸದ ನೆಪ ಮಾಡಿಕೊಂಡು ಮೆಲ್ಲಗೆ ಅಲ್ಲಿಂದ ಜಾರಿಕೊಳ್ಳುತ್ತಿದ್ದರು. ಸಂದರ್ಭಕ್ಕೆ ತಕ್ಕಂತೆ ತಮ್ಮ ನಿಲುವನ್ನು ಬದಲಾಯಿಸುವ, ಮೃದುಗೊಳಿಸುವ ಅಥವಾ ಎದುರಾಳಿಗೆ ತಮ್ಮ ಮನಸ್ಸಿನ ಆಳ-ಅಗಲ ತೋರದೆ ಸಾರಿಸಿಬಿಡುವ ಖದೀಮತನವೂ ಅವರಿಗೆ ಸಿದ್ಧಿಸಿತ್ತು!

ಗೊಂದಲಪುರದ ಗ್ರಾಮ ಪಂಚಾಯಿತಿ ಚುನಾವಣೆಯ ದೆಸೆಯಿಂದ ಊರೇ ಎರಡಾಗುವ ಸನ್ನಿವೇಶ. ಪಂಚಾಯಿತಿ ಸದಸ್ಯತ್ವ ಮಹಿಳೆಯರಿಗೆ ಮೀಸಲು. ಸಿದ್ದಣ್ಣನ (ಸಿದ್ದೇಶ್ವರಾನಂದಜಿ) ಹೆಂಡತಿ ಚೆಲುವಕ್ಕ ಸ್ಪರ್ಧೆಯಿಲ್ಲದೆ ಆರಿಸಿಬರುವ ಪರಿಸ್ಥಿತಿಯೂ ಇತ್ತು.

ಆದರೆ, ಗುಲ್ಲೂರಿನಿಂದ ಈರಾಂಜಣಿ ಊರಿಗೆ ಬಂದಾಗ ಪರಿಸ್ಥಿತಿ ಹಠಾತ್ ಬದಲಾಯಿತು. ಬಂಗಾರಿಯ ಹೋಟೆಲಿನಲ್ಲಿ ಮೆಣಸಿನಕಾಯಿ ಬಜ್ಜಿ ಕುರುಕುತ್ತ ಊರಿನ ವಿದ್ಯಮಾನವನ್ನು ಗ್ರಹಿಸಿದ ಆತ ಗೊಂದಲಪುರದ ರಂಗು ಬದಲಾಗಲು ಕುಮ್ಮಕ್ಕು ನೀಡಿದ.

''ಅಲ್ಲಾಕಣ್ ಬಂಗಾರಕ್ಕ! ನಿಂಗೇನಾಗಿತ್ತು ದಾಡಿ? ನೀನಾದ್ರೆ ನಾಕಕ್ಷರ ಕಲ್ತಿದ್ದಿ. ನಾಕ್ ಜನ ಬಲ್ಲೆ, ನಾಕ್ ಜನ್‌ದೊಂದ್ಗೆ ಮಾತಾಡ್‌ಬಲ್ಲೆ. ಆ ಚೆಲುವಕ್ಕ ಕೂಲಿ ಎಂಗ್ಸು. ಪಂಚಾಯ್ತಿ ಮೆಂಬ್ರಾಗಿ ಏನ್ ಮಾಡುಕ್ಕಾಗುತ್ತೆ ಅವ್ಳ್ ಕೈನಲ್ಲಿ? ಸುಮ್ನೆ ನನ್ ಮಾತ್ಕೇಳು. ನಿಲ್ಲು ಎಲೆಕ್ಷನ್ಗೆ. ನಾನೇ ಮನೆ ಮನೆಗೋಗಿ ಪ್ರಚಾರ ಮಾಡ್ತೀನಿ. ಒಟಾಕ್ಸಿ ಗೆಲ್ಲಿಸ್ತೀನಿ!'' ಎಂದು ತಿದಿ ಒತ್ತಿದ.

ಪಂಚಾಯ್ತಿ ಸದಸ್ಯ ಸ್ಥಾನಕ್ಕೆ ಚೆಲುವಕ್ಕ v/s ಬಂಗಾರಿಯ ಜಿದ್ದಾಜಿದ್ದಿನ ಪೈಪೋಟಿ ಪ್ರಾರಂಭವಾಯಿತು.

ಈ ಹೊಸ ತಿರುವಿನಿಂದ ಇಡೀ ಗೊಂದಲಪುರ ರೋಮಾಂಚನ ಅನುಭವಿಸಿತೆನ್ನಬೇಕು. ಯಜಮಾನ ಗುರುವಜ್ಜ ಬೇವಿನಕಟ್ಟೆಗೆ ಬಂದರೆ ಮುಗಿಯಿತು. ದುಂಬ, ತರಲೆತಿಪ್ಪ, ಮಾದೇವ ಮುಂತಾದ ಕೆಲಸಗಳ್ಳರು ಊರಿನ ಇತ್ತೀಚಿನ ವರದಿ ತರುತ್ತಿದ್ದರು. ತನ್ನ ಸೊಸೆಯನ್ನು ಬಯ್ಯಲೆಂದೇ ಕಟ್ಟೆಗೆ ಬರುತ್ತಿದ್ದ ಸಾಕಜ್ಜ ಮತ್ತಷ್ಟು ಹಗರಣಗಳನ್ನು ವರದಿ ಮಾಡುತ್ತಿದ್ದಳು. ಮಾಂತಪ್ಪ, ಸಿದ್ದೇಶ್ವರಾನಂದಜಿ, ಈರಬದ್ರ, ಸಿಂಗ್ರಿ ಮತ್ತೆ ಈರಾಂಜಣಿ ಮುಂತಾದವರು ಗೆಸ್ಟ್‌ಗಳಾಗಿ ಚುನಾವಣಾ ಸಮೀಕ್ಷೆ ನಡೆಸಲು ಸಹಕರಿಸುತ್ತಿದ್ದರು. ಟಿವಿ ಚಾನೆಲ್‌ಗಳಲ್ಲಿ ಬರುವ ಲೋಕಾಭಿರಾಮ, ಪಂಚಾಯ್ತಿ ಕಟ್ಟೆ, ಮುಖಾಮುಖಿ, ವೀ ದಿ ಪೀಪಲ್, ಡಿಫೈನಿಂಗ್ ಮೊಮೆಂಟ್, ವಾಕ್ ದಿ ಟಾಕ್ – ಮುಂತಾದ ಕಾರ್ಯಕ್ರಮಗಳಿಗೆ ಗೊಂದಲಪುರದ ಜನರ ದೈನಂದಿನ ನಡವಳಿಕೆಗಳೇ ಸ್ಫೂರ್ತಿ ಎಂಬ ಬಗ್ಗೆ ಗುಲ್ಲೂರಿನ ವಿದ್ವಾಂಸರೊಬ್ಬರು ಮಹಾಪ್ರಬಂಧ ಬರೆದಿದ್ದಾರಂತೆ! ಇರಲಿ ಈ ವಿಷಯ.

ಚೆಲುವಕ್ಕ ಸದಸ್ಯೆಯಾಗಲು ಸಮ್ಮತಿಸಿದ್ದು ಊರಿಗೆ ಹೊಸದಾಗಿ ಬಂದಿರುವ ಮೇಡಮ್ಮನ ಪ್ರೇರಣೆಯಿಂದ. ಜೊತೆಗೆ ಈಗ ಎಸ್ಸೆಲ್ಸಿ ಓದುತ್ತಿರುವ ಮಗ ರಾಮನ ಒತ್ತಾಯದಿಂದ. ಕೂಲಿ ನಾಲಿಗೆ ಹೋದಾಗಲೂ ಮೆಂಬರಾಗಿ ಏನೇನು ಮಾಡಲು ಸಾಧ್ಯ ಎಂಬುದರ ಕಡೆಗೇ ಅವಳ ಧ್ಯಾನ. ರಾಮನಿಂದ ಪಾಠ ಹೇಳಿಸಿಕೊಂಡು ಸಹಿ ಮಾಡುವುದನ್ನು ಕಲಿತದ್ದಲ್ಲದೆ ಅಕ್ಷರ ಜೋಡಿಸಿ ಓದುವುದನ್ನೂ ಕಲಿತಿದ್ದಳು. ಆಕೆಯ ಪರವಾಗಿ ಬಿರುಸಿನ ಪ್ರಚಾರ ಮಾಡಿದ್ದು ರಾಮ ಮತ್ತು ಒಡನಾಡಿಗಳು. ಸಿದ್ದೇಶ್ವರಾನಂದಜಿ ಸಹ ಗುಟ್ಟಾಗಿ ಚೆಲುವಕ್ಕನ ಪರವಾಗಿ ಕ್ಯಾನ್ವಾಸ್ ಮಾಡುತ್ತಿರುವ ಗುಮಾನಿಯೂ ಇತ್ತು!

ಬಂಗಾರಿಯ ಗುಡಿಸಲು ಹೋಟೆಲಿನಲ್ಲಿ ಜನರ ಗುಜುಗುಂಪು! ಅಲ್ಲಿಗೆ ಬರುವವರೆಲ್ಲ ಆಕೆಯನ್ನು ಉಬ್ಬಿಸುವವರೆ! ಮತದಾರರನ್ನು ಒಲಿಸಿಕೊಳ್ಳಲು ಅದಕ್ಕಿಂತ ಒಳ್ಳೆಯ ಸ್ಥಳ ಬೇಕೇ? ಚುನಾವಣೆ ಕುರಿತು ಬಿಸಿಬಿಸಿ ಚರ್ಚೆ ನಡೆಯುತ್ತಿತ್ತು. ತಿಂಡಿ ತಿಂದು ಟೀ ಕುಡಿದದ್ದು ಸಹ ಮರೆತು ಹೋಗುವಷ್ಟು ಸೀರಿಯಸ್ ಚರ್ಚೆ. ಬಂಗಾರಿ ಸಾಲ ನೀಡುವ ವಿಷಯದಲ್ಲಿ ಈಗ ಸ್ವಲ್ಪ ಲಿಬರಲ್ ಆಗಿರುವುದನ್ನು, ಹಿಂದಿನಂತೆ ಹೆಚ್ಚಾಗಿ ಮುಖ ಗಂಟಿಕ್ಕುವುದಿಲ್ಲ ಎಂಬುದನ್ನು ಜನರೂ ಗಮನಿಸಿದ್ದರು! ಅಲ್ಲದೆ ಬಂಗಾರಿ ಈಗ ಬೆಳಗ್ಗೆ ಎಲ್ಲರಿಗಿಂತಲೂ ಮುಂಚೆ ಎದ್ದು ಗುಂಡೇಶ್ವರನ ಬಂಡೆಗೆ ಸುತ್ತು ಹಾಕಿ ಬರುತ್ತಿದ್ದಳು. ಮಾಂತಪ್ಪ ಸಿದ್ದಪ್ಪಾಜಿ ಗುಡಿ ಬಾಗಿಲು ತೆರೆದ ಕೂಡಲೇ ಮೊದಲನೇ ಭಕ್ತೆ ಆಕೆಯೇ ಆಗಿರುತ್ತಿದ್ದಳು.

ಚುನಾವಣೆಗೆ ಸಂಬಂಧಿಸಿದ ಬಹಳ ಸ್ವಾರಸ್ಯಕರವಾದ, ಕುತೂಹಲಕಾರಿಯಾದ ವಿಷಯವೆಂದರೆ ಅಭ್ಯರ್ಥಿಗಳಿಬ್ಬರ ಮುಖಾಮುಖಿ. ಗುಂಡಯ್ಯನ ಬಂಡೆಯ ದಾರಿಯಲ್ಲಿ ನಡೆದ ಆ ಮುಖಾಮುಖಿಯ ಸಂದರ್ಭದಲ್ಲಿ ಯಾರೂ ಹತ್ತಿರದಲ್ಲಿರಲಿಲ್ಲವಂತೆ. ಹಾಗಾಗಿ ಈ ಪ್ರಕರಣ ಇತಿಹಾಸದಲ್ಲಿ ಯಥಾವತ್ ದಾಖಲಾಗುವುದು ತಪ್ಪಿಹೋಯಿತೆನ್ನಬಹುದು! ಗೊಂದಲಪುರದಲ್ಲಿ ಹರಡಿದ ವದಂತಿಯ ಪ್ರಕಾರ



ಚೆಲುವಕ್ಕ ಸ್ಪರ್ಧೆಯಿಂದ ಹಿಂದೆ ಸರಿಯಬೇಕೆಂದು ಬಂಗಾರಿ ಬೆದರಿಕೆ ಹಾಕಿದಳಂತೆ, ಏನಾದರೂ ನಿನ್ನನ್ನು ಸೋಲಿಸದೇ ಬಿಡುವುದಿಲ್ಲ ಎಂದು ಧಮಕಿ ಹಾಕಿದಳಂತೆ! 'ಬೊಂಬಾಯಿ' ಬಾಯಿಯ ಬಂಗಾರಿ ದಬಾಯಿಸಿದರೂ ಚಾಲೆಂಜ್ ಮಾಡಿದರೂ, ಚೆಲುವಕ್ಕ ಬೆಪ್ಪಿಯಂತೆ ಬಾಯೇ ತೆರೆಯಲಿಲ್ಲವಂತೆ! ಬಂಗಾರಿ ಎಂಥಾದ್ದೋ ಪ್ರತಿಗ್ನೆ ಮಾಡಿದಳಂತೆ, ಏನೋ ಶಪಥ ಮಾಡಿದಳಂತೆ. ಈ ಚಾಲೆಂಜ್, ಪ್ರತಿಗ್ನೆ, ಬೆದರಿಕೆ – ಏನೆಂದು ತಿಳಿಯದೆ ಗೊಂದಲಪುರ ವಾಸಿಗಳ ಪೈಕಿ ಅನೇಕರು ತಲೆ ಸಿಡಿದೇ ಹೋಗಬಹುದೆಂದು ಗಾಬರಿಗೊಂಡರು.

ಈ ಮುಖಾಮುಖಿ ಪ್ರಕರಣ ಕೆಲವರ ಪಾಲಿಗೆ ಮೋಜಿನ ವಿಷಯವಾದದ್ದು ಸುಳ್ಳಲ್ಲ.

ಈರಾಜಣ್ಣ ಎರಡು ಮೂರು ಬಾರಿ ಗುಲ್ಲೂರಿನಿಂದ ಓಡಿಬಂದು ಬಂಗಾರಿಯ ಪರ ಪ್ರಚಾರ ಮಾಡಿದ. ಚೆಲುವಕ್ಕನ ಮನ ಒಲಿಸಿ ಸ್ಪರ್ಧೆಯಿಂದ ಹಿಂದೆಗೆಯುವಂತೆ ಮಾಡಲೂ ಪ್ರಯತ್ನಿಸಿದ.

ಬಂಗಾರಿ ಮುಖಾಮುಖಿ ಸಂದರ್ಭದಲ್ಲಿ ಎಂಥಾ ಪ್ರತಿಜ್ಞೆ ಮಾಡಿರಬಹುದು ಎಂಬುದು ಕೆಟ್ಟ ಕುತೂಹಲವಾಗಿ ಎಲ್ಲರನ್ನೂ ಕಾಡಿಸತೊಡಗಿತು. ತಮಗೆ ತೋಚಿದಂತೆ ಕಲ್ಪಿಸಿಕೊಂಡು, ಅದಕ್ಕೆ ಸ್ವಲ್ಪ ಹೆಚ್ಚೇ ಉಪ್ಪುಕಾರ ಹಚ್ಚಿ ಪ್ರಚಾರ ಮಾಡತೊಡಗಿದರು. ಗುಲ್ಲೂರಿನಿಂದ ಪ್ರಕಟವಾಗುವ 'ಗಾಳಿಗುಳ್ಳೆ' ಪತ್ರಿಕೆಯ ವರದಿಗಾರ 'ತಲೆತಿರುಕ' ಗುಲ್ಲೂರು ಗ್ರಾಮ ಪಂಚಾಯಿತಿ ಚುನಾವಣೆ ಬಗ್ಗೆ ಬರೆದ ವರದಿಗೆ 'ಗರತಿಯ ಮೌನ - ಗಯ್ಯಾಳಿಯ ಪ್ರತಿಜ್ಞೆ!' – ಎಂಬ ಶೀರ್ಷಿಕೆ ನೀಡಿ ಈ ಪ್ರಕರಣಕ್ಕೆ ಘಮಘಮ ಒಗ್ಗರಣೆ ಹಾಕಿದ.

ಬಂಗಾರಿ ಊರಿನ ಪುರುಷ ಮತದಾರರ ಮೇಲೆ ಭಾರಿ ಭರವಸೆ ಇಟ್ಟುಕೊಂಡಿದ್ದಳು. ಊರಿನ ಮಹಿಳಾಮಣಿಗಳನ್ನು ತನ್ನತ್ತ ಸೆಳೆದುಕೊಳ್ಳಲು ಪ್ರಯತ್ನ ನಡೆಸಿದ್ದಳು. ಆದರೆ, ಆಕೆಯ ಬಜ್ಜಿ ಬೋಂಡಾ ತಿಂದು ಬಾಯ್ತುಂಬ ಹೊಗಳಿದವರೇ ಕೈಕೊಟ್ಟಿದ್ದರು!

ಪ್ರಕರಣ ಸ್ವಲ್ಪ ಹಳತಾದ ನಂತರ, ಬಂಗಾರಿಯ ಬರಿಗೊರಳು ಕಂಡವರು, ಮುಖಾಮುಖಿ ಸಂದರ್ಭದಲ್ಲಿ ಮಾಡಿರಬಹುದಾದ ಪ್ರತಿಗ್ನೆ ಏನಿರಬಹುದೆಂದು ಊಹಿಸಿಕೊಂಡು ಮತ್ತೆ ತಲೆ ಚಚ್ಚಿಕೊಳ್ಳುವಂತಾಯಿತು.

ತೀರಾ ವಯಸ್ಸಾದ ಕೆಲವು ಮುದುಕಿಯರು 'ಗಂಡುಳ್ಳವ್ರು ಗಂಡ್ ಮಗ ಎತ್ರೆ, ಮುಂಡೆಗ್ಯಾಕವ್ವ ಮುಕ್ಕರ್ತ'- ಎಂಬ ಗೊಂದಲಪುರದ ಹಳೆಯ ಗಾದೆಯೊಂದನ್ನು ನೆನಪು ಮಾಡಿಕೊಂಡರಂತೆ.

'ಲೇ ಚಲುವಿ, ನಿನ್ ಯೋಗ್ತೆ ಏನು, ನನ್ ಯೋಗ್ತೆ ಏನು. ಒಳ್ಳೆ ಮಾತ್ನಲ್ಲಿ ವಾಪಸ್ ತಗಂಡ್ಕೋ ಸರಿ. ಇಲ್ದಿದ್ರೆ ನೀನು ಊರಲ್ಲೇ ಇಲ್ದಂಗ್ ಮಾಡ್ತೀನಿ. ಅಂಗೂ ನೀನೇನಾರ ಗೆದ್ಬುಟ್ರೆ ಈ ತಾಳಿ ಕಿತ್ತು ತಿಪ್ಪೆಗೆಸೀತಿನಿ!' ಎಂದು ಮೂದಲಿಸಿರಬಹುದು ಎಂಬುದೇ ಅಂಥವರ ಅನುಮಾನ.

**ಬೀರಣ್ಣ**, ಗೊಂದಲಪುರ

# ನನ್ನ ಭೂತ ನನ್ನ ಹೆಗಲ ಮೇಲೆ ನಿಂತಿದೆ



ಇದು ಸಂಸ್ಕೃತಿಯ ಗೆಲುವೊ ಅಥವಾ ಸೋಲೊ ?
ನನ್ನ ಭೂತದ ಭಾರ ಇನ್ನೂ ನನ್ನ ಹೆಗಲ ಮೇಲೆ ನಿಂತಿದೆ
ಇಂದಿಗೂ ನಾ ಓಡಿ ಅದ ತಬ್ಬಿಕೊಂಡರೆ
ನನ್ನೆದೆಯಲ್ಲಿ ದಟ್ಟಡವಿ ಮೂಡಿ
ಹಣೆಯ ಮೇಲೆ ಕೊಂಬುಗಳು ಚಿಗುರುತ್ತವೆ.

ಭೂತದ ನೆರಳು ನನ್ನ ಮೇಲೆ ಬೀಳುತ್ತಿರುತ್ತದೆ.
ನಾ ಕಂಡ ಆ ನೆತ್ತರಿನ ಯುಗಗಳನ್ನೇಕೆ ಮುಚ್ಚಿಡಲಿ ?
ಹಲ್ಲುಗಳು ರಕ್ತದಲ್ಲಿ ಮುಳುಗೆದ್ದಂತೆ ಕಾಣುತ್ತವೆ.

ನನ್ನೊಬ್ಬನ ಬದುಕಿನ ಅಸ್ತಿತ್ವಕ್ಕಾಗಿ
ನನ್ನ ಜೊತೆ ಪ್ರೀತಿ-ವೈರ ಎರಡೂ
ಇರದವರನ್ನು ಬೇಟೆಯಾಡುತ್ತೇನೆ
ಅವರ ಮೇಲೆರಗುತ್ತೇನೆ.

ನನ್ನ ದೇಹವೆಂದರೆ ಬರೀ ಹೊಟ್ಟೆ, ಹೃದಯ-ಬುದ್ಧಿಗಳಲ್ಲ
ಕೈಯೊಳಗೆ ಬೆಂಕಿ ಹಿಡಿದು ಎಷ್ಟೋ ಅವತಾರಗಳು ಮುಂದೆ ಬಂದವು
ಈ ಭೂತದ ಕಲೆಯ ತೊಳೆಯಲಾಗದೆ ಕೈ ಚೆಲ್ಲಿ ನಿಂತವು.

ಹಣೆಯ ಮೇಲೆ ಸಭ್ಯತೆಯ ಬಣ್ಣ ಬಳಿದುಕೊಂಡರೂ
ಅನಾಗರಿಕತೆಯ ಆ ಕಪ್ಪು ಮಸಿ ದೂರವಾಗಲಿಲ್ಲ
ಹಳ್ಳಿಗಳ ಬೆಳೆಸಿದೆವು ನಗರಗಳ ಹುಟ್ಟು ಹಾಕಿದೆವು
ಆದರೆ ಅಡವಿಯ ಸಂಬಂಧವಿನ್ನೂ ಕಳೆಯಲಿಲ್ಲ
ಯಾವುದಾದರೊಂದು ತಿರುವಿನಲ್ಲಿ ಮನದಾಳದ ನೋವು ರೆಕ್ಕೆ ಬಿಚ್ಚಿದರೆ
ಅಲ್ಲೊಂದು ಮುಗ್ಧ ಬೇಟೆ ಕಾಣುತ್ತದೆ.

ಯಾಕೋ ಗೊತ್ತಿಲ್ಲ, ದೌರ್ಬಲ್ಯ ಸವಾರಿ ಮಾಡುತ್ತದೆ
ಮರದಡಿಗೆ ಜೋತುಬಿದ್ದ ಹರಿದ ಬಳ್ಳಿಯೊಂದು
ಮತ್ತೆ ಚಿಗುರತೊಡಗುತ್ತದೆ
ನನ್ನ ಕಾಲುಗಳ ನಡುವೆ ದಬ್ಬಿ ಹಿಡಿದು ನೆಗೆದರೂ
ಶತಮಾನಗಳಿಂದೇರಿದ ಎತ್ತರದಿಂದ ಒಮ್ಮೆಲೇ
ಬಿದ್ದು ಬಿಡುತ್ತೇನೆ.

ಇದು ಸಂಸ್ಕೃತಿಯ ಗೆಲುವೋ ಅಥವಾ ಸೋಲೋ
ನನ್ನ ಭೂತದ ಭಾರ ಇನ್ನೂ ನನ್ನ ಹೆಗಲ ಮೇಲಿದೆ.

ಮೂಲ : ಕೈಫಿ ಆಜ್ಮಿ ಕನ್ನಡಕ್ಕೆ : ವಿಭಾ

# ಜನಪ್ರಿಯ ವಿಜ್ಞಾನ ವಾಙ್ಮಯ ರಚನೆಯಲ್ಲಿ ಸಾಹಿತ್ಯದ ಪಾತ್ರ

ಜಿ. ಟಿ. ನಾರಾಯಣರಾವ್

> ನನ್ನ ಖಚಿತ ಅಭಿಪ್ರಾಯವನ್ನು ಮುಂದಿನ ಸೂತ್ರವಾಕ್ಯ ಬಿಂಬಿಸುತ್ತದೆ: ಸಾಹಿತ್ಯರಹಿತ ವಿಜ್ಞಾನ ಕುಂಟು, ವಿಜ್ಞಾನರಹಿತ ಸಾಹಿತ್ಯ ಕುರುಡು. ಸಾಹಿತ್ಯ-ವಿಜ್ಞಾನ ಸಾಮರಸ್ಯವೇ ಋಜುಜೀವನದ ಭದ್ರ ಬುನಾದಿ.

ಆಧುನಿಕ ವಿಜ್ಞಾನದ ಸ್ಫೋಟ ಪಾಶ್ಚಾತ್ಯ ದೇಶಗಳಲ್ಲಿ ಘಟಿಸಿತು (೧೯-೨೦ನೆಯ ಶತಮಾನ). ಸಹಜವಾಗಿ ಅಲ್ಲಿಯ ಪರಂಪರೆಗೆ ಅನುಸಾರವಾಗಿ ಆಯಾ ಭಾಷೆಗಳೂ ವಿಜ್ಞಾನ ಸಂವಹನ ಮಾಧ್ಯಮಗಳಾಗಿ ವರ್ಧಿಸಿದುವು. ಹೀಗೆ ವೈಜ್ಞಾನಿಕ ಚಿಂತನೆ ಮತ್ತು ಪರಿಕಲ್ಪನೆ ಆವಶ್ಯಕತಾನುಸಾರ ಸಮಸಮವಾಗಿಯೇ ಬೆಳೆದುವು. ಅಂದರೆ, ಸಾಹಿತ್ಯ-ವಿಜ್ಞಾನ ಕೊಡು-ಕೊಳು ಪ್ರಕ್ರಿಯೆ ಸಂದರ್ಭೋಚಿತವಾಗಿ ನಡೆಯಿತು, ಮತ್ತು ಉಭಯ ಪ್ರಕಾರಗಳೂ ನಳನಳಿಸಿದುವು.

ವಿಜ್ಞಾನ ಎಂದರೇನು ? ವ್ಯಕ್ತಿಯ ಕುತೂಹಲಭರಿತಮತಿ ನಿಸರ್ಗದ ಯಾವುದೋ ವಿದ್ಯಮಾನ ಅಥವಾ ಘಟನೆಯಿಂದ ಆಕರ್ಷಿತವಾಗುತ್ತದೆ. ಇದು ಕಾರ್ಯ. ಇದನ್ನು ಆಗಗೊಳಿಸುವ ಹಿನ್ನೆಲೆ ಕಾರಣವೊಂದಿರಬೇಕು, ಅದನ್ನು ತಾನು ಶೋಧಿಸಬೇಕು, ತನ್ಮೂಲಕ ನಿಸರ್ಗಯಂತ್ರ ಕುರಿತು ಕಿಂಚಿತ್ತಾದರೂ ಒಳನೋಟ ಗಳಿಸಬೇಕು ಮುಂತಾದ ಪ್ರೇರಣೆಗಳು ಆತನಲ್ಲಿ ಮೊಳೆಯುತ್ತವೆ. ಈ ಧಾಟಿಯಲ್ಲಿ ಮುನ್ನಡೆದು ಆ ಘಟನೆ ಬಗ್ಗೆ ಕಾರ್ಯ-ಕಾರಣ ಸಂಬಂಧ ಪತ್ತೆ ಮಾಡಿದಾಗ ಆತನಲ್ಲಿ ಮಿನುಗುವ ಅರಿವೇ ವಿಜ್ಞಾನ.

ಇದರ ಪ್ರಯೋಜನವೇನು ? ಮೊದಲನೆಯದು ಆನಂದ. ಬಳಿಕ ಈ ಅರಿವನ್ನು ಪುನಃ ನಿಸರ್ಗಕ್ಕೆ ಅನ್ವಯಿಸಿ ಬದುಕನ್ನು ಸುಗಮಗೊಳಿಸಬಹುದು. ವಿಜ್ಞಾನದ ಈ ಅನ್ವಿತ ಮುಖಕ್ಕೆ ತಂತ್ರವಿದ್ಯೆ (ಟೆಕ್ನಾಲಜಿ) ಎಂದು ಹೆಸರು. ಸರಳ ಸಂಚಾರ ಸಾಧನಗಳಾದ ಎತ್ತಿನ ಗಾಡಿ, ಸೈಕಲ್ ಮತ್ತು ಬಸ್, ಮನೆ ಬೆಳಗುವ ವಿದ್ಯುತ್ತು, ಮುದ್ರಣಯಂತ್ರ, ಗಣಕ, ಆಕಾಶಯಾನ ಎಲ್ಲವೂ ತಂತ್ರವಿದ್ಯೆ ನಮಗೆ ಒದಗಿಸಿರುವ ಸೌಕರ್ಯದ ಫಲಗಳು. ತಂತ್ರವಿದ್ಯಾರಹಿತ ಜೀವನವನ್ನು ಇಂದು ಊಹಿಸಲೂ ಸಾಧ್ಯವಾಗದು.

ಅಂದಮೇಲೆ ಜನಸಾಮಾನ್ಯರ ಮನ ಮನೆಗಳಲ್ಲಿ ವಿಜ್ಞಾನದ – ಅದಕ್ಕಿಂತ ಮಿಗಿಲಾಗಿ ತಂತ್ರವಿದ್ಯೆಯ – ರೋಚಕ ಸಾಹಸ, ಉಲ್ಕಾ ಸದೃಶ ಅಭಿವೃದ್ಧಿ, ಮಾರಕ ಅಪಾಯಗಳು, ಭವಿಷ್ಯ ಸಾಧ್ಯತೆಗಳು ಮುಂತಾದವನ್ನು ತಾವು ತಿಳಿದು, ಸಾಧ್ಯವಾದರೆ, ಕೆಲವನ್ನಾದರೂ ತಮ್ಮ ನಿತ್ಯಜೀವನದಲ್ಲಿ ಅಳವಡಿಸಿಕೊಳ್ಳಬೇಕು ಎಂಬ ಆಶಯ ಕೊನರುವುದು ಸಹಜ. ವಿಜ್ಞಾನದ ತಾಂತ್ರಿಕ ಪರಿಭಾಷೆಯಾಗಲೀ ಸಮೀಕರಣ ಆಲೇಖಗಳಾಗಲೀ ಜಟಿಲ ಗಣನೆಗಳಾಗಲೀ ಕಲಿತಿರದ ಇಂಥ ನೈಜ ಆಸಕ್ತರಿಗೆ ಅದರ ವರಗಳನ್ನು ಶ್ರುತಪಡಿಸುವುದು ಹೇಗೆ ? ಇದು ಸಮಾಜದ ಕರ್ತವ್ಯವಲ್ಲವೇ ?

ಹೌದು. ಏಕೆಂದರೆ ಜ್ಞಾನ-ವಿಜ್ಞಾನ ನಿಂತ ನೀರಾಗಬಾರದು :

*ಹಳೆನೀರು ಹೊರಹರಿದು ಹೊಸನೀರು ಬರಬೇಕು*
*ಕೊಳೆಕಳೆದ ಎಳೆಜೀವ ನಳನಳಿಸುತಿರಬೇಕು*
*ಕಳವಳವ ನೀಗಿ ಹರಿಸದಲಿ ಸಾಗಲು ಸದಾ*
*ಇಳೆಯ ತತ್ತ್ವವನರಿತು ಮುನ್ನಡೆಯೊ ಅತ್ರಿಸೂನು*

ವಿಜ್ಞಾನದ ಕೆಲವು ಸಾಧನೆಗಳನ್ನು ಗಮನಿಸಬಹುದು : ವಿಶ್ವವೆಂದರೆ ನಾವಿರುವ ಭೂಮಿ ಮಾತ್ರವಲ್ಲ, ಭೂಮಿ ಸದಸ್ಯಗ್ರಹವಾಗಿರುವ ಸೌರವ್ಯೂಹವಲ್ಲ, ಸೂರ್ಯನ ನೆಲೆಯಾದ ಆಕಾಶಗಂಗೆಯೂ ಅಲ್ಲ, ಇತ್ಯಾದಿ ಮೂಲಭೂತ ತಥ್ಯಗಳು, ಸಕಲ ವಿಜ್ಞಾನಗಳ ಮಾತೃ ಎಂಬ ಗೌರವಕ್ಕೆ ಸಕಾರಣವಾಗಿಯೇ ಭಾಜನವಾಗಿರುವ, ಖಗೋಳ ವಿಜ್ಞಾನದ ಕೊಡುಗೆ. ಇಂಥ ಬೃಹದ್ವಿಶ್ವವನ್ನು ನಿಯಂತ್ರಿಸುವ ಆಂತರಿಕ ವಿಧಿನಿಯಮಗಳೇನಾದರೂ ಇವೆಯೇ ? ತೋರ್ಕೆಗೆ ತೀರ ಸರಳವಾದ ಈ ಪ್ರಶ್ನೆಗೆ ಕಾಲದಿಂದ ಕಾಲಕ್ಕೆ ಲಭಿಸಿರುವ ಉತ್ತರಗಳು ವಿಜ್ಞಾನದ ವಿವಿಧ ವಿಭಾಗಗಳ ಜನನಕ್ಕೆ ಕಾರಣವಾಗಿವೆ: ಭೌತ - ಜೀವವಿಜ್ಞಾನಗಳು, ವೈದ್ಯಕೀಯ, ಆಕಾಶಯಾನ, ಗಣಕವಿಜ್ಞಾನ ಇತ್ಯಾದಿ. ನಿಸರ್ಗ ಎಂದೂ ಯಾರಿಗೂ ಎಲ್ಲಿಯೂ ಅಳತೆಗೆಟುಕದ ಆನೆ. ಇತ್ತ ಮನುಕುಲದ ಆದಿಯಿಂದ ಈ ತನಕ ಬಂದಿರುವ ಹಾಗೂ ಭವಿಷ್ಯದಲ್ಲಿ ಬರಲಿರುವ ಸಮಸ್ತ ವಿಜ್ಞಾನಿಗಳೂ ಜನ್ಮಾಂಧರು. ಈ ಕುರುಡರಿಗೆ ಆನೆಯ ಸಮ್ಯಗ್ದರ್ಶನ ಎಂದೂ ಸಿದ್ಧಿಸದು. ಡಿವಿಜಿಯವರ ಸೂಕ್ತಿ ಈ ಅಂಶವನ್ನು ಸೊಗಸಾಗಿ ಬಿಂಬಿಸುತ್ತದೆ :

*ಸಂದೇಹವೀಕ್ಶತಿಯೊಳಿನ್ನಿಲ್ಲವೆಂದಲ್ಲ*
*ಇಂದು ನಂಬಿಹುದೆ ಮುಂದೆಂದುಮೆಂದಲ್ಲ*
*ಕುಂದು ತೋರ್ದಂದದನು ತಿದ್ದಿಕೊಳೆ ಮನಸುಂಟು*
*ಇಂದಿಗೀ ಮತವುಚಿತ ಮಂಕುತಿಮ್ಮ*

ಯಾವ ವಿಜ್ಞಾನಿಯೂ ನಿರ್ವಾತದಲ್ಲಿ ಕೆಲಸವೆಸಗಲಾರ. ಮೊದಲು, ತನ್ನ ಆವಿಷ್ಕಾರಗಳು ಸಮಾನಮನಸ್ಕರಲ್ಲಿ ಏನು ಪ್ರತಿಕ್ರಿಯೆ ಉಂಟುಮಾಡುತ್ತವೆ ಎಂದು ತಿಳಿಯುವ ಬಯಕೆ ಆತನಿಗುಂಟು. ಸಂಶೋಧನ ಪ್ರಬಂಧಗಳ ಮೂಲಕ ಈ ಕ್ರಿಯೆ ನಡೆಯುತ್ತದೆ. ಇಲ್ಲಿ ಒಪ್ಪಿಗೆ ಪಡೆದವನ್ನು ಜನಸಾಮಾನ್ಯರಿಗೆ ತಿಳಿಸಬೇಕೆಂಬ ಸಹಜ ಕುತೂಹಲ ಆತನಲ್ಲಿ ಅಥವಾ ಆತನ ಅನುಚರರಲ್ಲಿ ಮೊಳೆಯುತ್ತದೆ. ಇಲ್ಲಿಯ ಸಂವಹನ ಮಾಧ್ಯಮ ಜನಪ್ರಿಯ ಭಾಷೆಯಾಗಬೇಕೇ ವಿನಾ ತಾಂತ್ರಿಕ ಪರಿಭಾಷೆಯಲ್ಲ. ಹೀಗೆ ಆವಶ್ಯಕತೆಯ ಅನಿವಾರ್ಯ ಶಿಶುವಾಗಿ ಜನಪ್ರಿಯ ವಿಜ್ಞಾನ ವಾಙ್ಮಯ ರೂಪುಗೊಳ್ಳುತ್ತದೆ.

೨೦ನೆಯ ಶತಮಾನದ ಪೂರ್ವಾರ್ಧದ ಪರ್ವದಿನಗಳಂದು ಇಂಗ್ಲೆಂಡ್ ಮತ್ತು ಯೂರೋಪ್ ಖಂಡದ ವಿವಿಧ ದೇಶಗಳಲ್ಲಿ ಮೂಲಭೂತ ಸಂಶೋಧನೆಗಳ ಮಹಾಪೂರವೇ ಹರಿದು ವಿಜ್ಞಾನದಿಗಂತ ಊಹಾತೀತವಾಗಿ ವಿಸ್ತರಣೆಗೊಂಡಿತು. ಗತಯುಗಗಳ ಕಲ್ಪನಾವಿಲಾಸಗಳನ್ನು ಮೀರಿ ವರ್ತಮಾನ ಕಾಲದ ವಾಸ್ತವ ಸಾಧನೆಗಳು ದಿನದಿನ ಎಂಬಂತೆ ಹೊಸ ಚೆರಗನ್ನು ಬೀರಿದುವು. ಇವೆಲ್ಲವುಗಳ ಸಾರವಾಗಿ ವಿಜ್ಞಾನ ಸೌಧದ ಮೂರು ಆಧಾರಸ್ತಂಭಗಳು (ಆದ್ಯುಕ್ತಿಗಳು) ಸ್ಪಷ್ಟವಾದುವು :

೧. ನಿಸರ್ಗದಲ್ಲಿ ಕ್ರಮವಿದೆ.
೨. ಈ ಕ್ರಮವನ್ನು ಗುರುತಿಸಿ, ಅರಿತು, ಅರ್ಥವಿಸಿ, ವ್ಯಾಖ್ಯಾನಿಸುವ ಸಾಮರ್ಥ್ಯ ಮಾನವ ಮತಿಗಿದೆ.
೩. ''ಭಗವಂತ ಎಂದೂ ದಾಳ ಒಗೆಯುವುದಿಲ್ಲ.''

ಮೂರನೆಯ ಆದ್ಯುಕ್ತಿ ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) ಅವರ ಉದ್ಗಾರ. ಇಲ್ಲಿಯ ರೂಪಕ ಭಾಷೆಯಲ್ಲಿ ''ಭಗವಂತ'' ನಿಸರ್ಗವನ್ನೂ ''ದಾಳ'' ಜೂಜು ಅಥವಾ ಕಪಟದ್ಯೂತವನ್ನೂ ಪ್ರತೀಕಿಸುತ್ತವೆ. ಸಾರಾಂಶವಿಷ್ಟು: ನಿಸರ್ಗದ ಶಿಶುವಾದ ಮನುಷ್ಯ ತನ್ನ ತಾಯಿಯೊಂದಿಗೆ ಆಡುವ ಆಟವೇ ವಿಜ್ಞಾನ; ಇದರಲ್ಲಿ ನಿಸರ್ಗದ ಪಾತ್ರ ಪೂರ್ತಿ ನಿರ್ವಿಕಾರ, ನಿರಪೇಕ್ಷ ಮತ್ತು ನಿಷ್ಕಪಟ; ಮುಪ್ಪಿನ ಷಡಕ್ಷರಿ ಹಾಡಿರುವಂತೆ –

*ಅವರವರ ದರುಶನಕೆ ಅವರವರ ವೇಷದಲಿ*
*ಅವರವರಿಗೆಲ್ಲ ಗುರು ನೀನೊಬ್ಬನೆ*
*ಅವರವರ ಭಾವಕ್ಕೆ ಅವರವರ ಪೂಜೆಗಂ*
*ಅವರವರಿಗೆಲ್ಲ ಶಿವ ನೀನೊಬ್ಬನೆ !*

ಈ ''ಅವರವರ'' ಸಾಲಿನಲ್ಲಿ ಅಗ್ರಮಾನ್ಯರು ಜೀನ್ಸ್, ರಸಲ್, ಎಡಿಂಗ್ಟನ್, ಕಾಲ್ಡರ್, ಗ್ಯಾಮೊ, ವೆಲ್ಸ್, ಅಸಿಮೊವ್ ಮೊದಲಾದ ಶ್ರೇಷ್ಠ ಸಂಶೋಧಕರು. ಐನ್‌ಸ್ಟೈನ್ ಕೂಡ ಸೇರಿದ್ದಾರೆ. ಮುಖ್ಯವಾಗಿ ಇಂಗ್ಲಿಷಿನಲ್ಲಿ ಜನಪ್ರಿಯ ವಿಜ್ಞಾನ ವಾಙ್ಮಯ ರಚಿಸಿ (೧೯೪೦ರ ದಶಕ), ಇಂಗ್ಲಿಷ್ ಭಾಷೆಗೆ ನೂತನ ಆಯಾಮ ನೀಡಿದ ಹಿರಿಯರಿವರು. ಇವರೆಲ್ಲರೂ ನೂತನ ಸಂಶೋಧನೆಗಳ ಸಾರಸರ್ವಸ್ವವನ್ನು ತಾಂತ್ರಿಕ ಪರಿಭಾಷೆಯಲ್ಲಿ ಸ್ವಾಂಗೀಕರಿಸಿ

ಜನಪ್ರಿಯ ಭಾಷೆಯಲ್ಲಿ ಅದನ್ನು ಪುನಾರೂಪಿಸಿದ ಸೃಜನಶೀಲ ಲೇಖಕರು, ಮತ್ತು ಇಂಥ ಒಂದು ಜನಕೈಂಕರ್ಯದ ಬಗ್ಗೆ ಅಪಾರ ವಿಶ್ವಾಸ ತಳೆದಿದ್ದವರು.

ವಿಜ್ಞಾನದ ಜಟಿಲ ಪರಿಕಲ್ಪನೆಗಳನ್ನು ಜನಪ್ರಿಯ ಶೈಲಿಯಲ್ಲಿ ನಿರೂಪಿಸಲು ಒಬ್ಬ ಲೇಖಕನಿಗೆ ಸಾಹಿತ್ಯ ಕುರಿತಂತೆ ಸೃಜನಶೀಲ ಪ್ರಭುತ್ವ ಅಗತ್ಯ. ನಿಜಕ್ಕೂ ಒಬ್ಬ ಸಾಹಿತಿಗಿಂತ ಹೆಚ್ಚಿನದು ಇದಾಗಿರಬೇಕು.

ಸೂತ್ರರೂಪದಲ್ಲಿ ಹೇಳುವುದಾದರೆ, ಒಬ್ಬ ಜನಪ್ರಿಯ ವಿಜ್ಞಾನ ಲೇಖಕ ಚತುರ್ಥಾಂಶಗಳ ಸಂಯುಕ್ತವಾಗಿರಬೇಕು : ೧. ವಿಷಯ ಪ್ರಾವೀಣ್ಯ – ಆತ ತಾಕತ್ತಿನ ತಾಣದಿಂದ ಬರೆಯ ತಕ್ಕದ್ದು. ೨. ಭಾಷಾಪ್ರಭುತ್ವ – ಭಾಷೆಯ ಸಾಧ್ಯತೆ ಸೀಮಿತತೆಗಳನ್ನು ನಿರಪೇಕ್ಷವಾಗಿ ಗ್ರಹಿಸಿ ಅದರ ಜಾಯಮಾನಕ್ಕೆ ಒಪ್ಪುವಂತೆ ಹೊಸ ಪ್ರಯೋಗಗಳನ್ನು ಮಾಡಲು ಮತ್ತು ಭಾಷೆಗೆ ಹೊಸ ಆಯಾಮ ನೀಡಲು ಆತ ಶಕ್ತನಾಗಿರತಕ್ಕದ್ದು. ೩. ಪರಿಪೂರ್ಣ ನಿಷ್ಠೆ– ತಾನು ಕೈಗೊಂಡ ಕರ್ತವ್ಯ ಕುರಿತು ಉತ್ಸಾಹ-ಉಲ್ಲಾಸಗಳ ಸಾಕಾರಮೂರ್ತಿ ಆತನಾಗಿರತಕ್ಕದ್ದು. ೪. ಸಮಕಾಲೀನ ಪ್ರಜ್ಞೆ – ಆತನಿಗೆ ವರ್ತಮಾನ ವಿಜ್ಞಾನದ ಸ್ಥಿತಿ-ಗತಿ ಬಗ್ಗೆ ಅರಿವು ಇರತಕ್ಕದ್ದು.

ಈ ಯಾವುದೇ ಒಂದರಲ್ಲಿ ಭರವಸೆ ಇಲ್ಲದಾತ ಜನಪ್ರಿಯ ವಿಜ್ಞಾನ ನಿರ್ಮಾಣ ಕಾರ್ಯ ದಿಂದ ದೂರವಿರುವುದು ಸರ್ವಕ್ಷೇಮ. ಆದರೆ ವಾಸ್ತವದಲ್ಲಿ ಹೀಗಾಗುತ್ತಿಲ್ಲ: ಅಗ್ಗದ ಇಂಗ್ಲಿಷ್ ಪುಸ್ತಕ ಅಥವಾ ಪಾಕ್ಷಿಕಗಳಿಂದ ಅರೆಬೆಂದ ಭಾವನೆಗಳನ್ನು ಅಪರಿಪೂರ್ಣವಾಗಿ ಗ್ರಹಿಸಿ, ತಮ್ಮ ಸೀಮಿತ ಕನ್ನಡ ಜ್ಞಾನದ ಮಿತಿಯೊಳಗೆ ಅವನ್ನು ಮನಬಂದಂತೆ ಹೊಸೆದು, ಬೇಕಾಬಿಟ್ಟಿ ಮುದ್ರಿಸಿ ''ಕನ್ನಡದ ಸೇವೆ'' ಒಪ್ಪಿಸುವುದೇ ನಿಯಮವಾಗಿದೆ! ಉದ್ದೇಶ ? ಪ್ರಚಾರ, ಪ್ರಶಸ್ತಿ, ಬಡ್ತಿ, ವಿದೇಶಯಾನ ಇತ್ಯಾದಿ. ಇವು ಕಲ್ಪನಾವಿಲಾಸಗಳಲ್ಲ, ಬದಲು, ೧೯೪೫ರಿಂದಲೂ ವಿಜ್ಞಾನ ಬೋಧನೆ-ಸಾಹಿತ್ಯ ನಿರ್ಮಾಣ ಕ್ರಿಯೆಯಲ್ಲಿ ಪ್ರತ್ಯಕ್ಷ ಭಾಗಿಯಾಗುತ್ತಿರುವ ನನ್ನ ಪ್ರತ್ಯಕ್ಷ ಅನುಭವದಿಂದ ಆಯ್ದ ಕೆಲವೇ ಹರಳುಗಳು.

ಇಂಥ ''ಸೇವೆಗಳ'' ದುಷ್ಫಲ ಐದು ಬಗೆಯದು : ೧. ಕಪ್ಪು ಹಣ ಬಿಳಿ ಹಣವನ್ನು ವಿಸ್ಥಾಪಿಸುತ್ತದೆ (ಗ್ರೆಷಾಮನ ನಿಯಮ);ಪ ೨. ಶುದ್ಧ ವಾಙ್ಮಯ ಜನಪ್ರಿಯವಾಗದೇ ಸೊರಗುತ್ತದೆ; ೩. ಕನ್ನಡ ಭಾಷೆ ತನ್ನ ನಿಖರತೆಯನ್ನು ಕಳೆದುಕೊಳ್ಳುತ್ತದೆ; ೪. ಅನ್ಯ ಭಾಷೆಗಳಲ್ಲಿ ಪ್ರಕಟವಾಗುವ ಉತ್ಕೃಷ್ಟ ಗ್ರಂಥಗಳ ಕನ್ನಡಾನುವಾದಗಳು ತೀರ ಪೇಲವ ಮತ್ತು ಕೃತಕವಾಗಿರುತ್ತವೆ; ೫. ನವಲೇಖಕರು ಈ ಕ್ಷೇತ್ರಕ್ಕೆ ಕಾಲಿಡಲು ಅಂಜುತ್ತಾರೆ.

ಕನ್ನಡ ಜನಪ್ರಿಯ ವಿಜ್ಞಾನ ವಾಙ್ಮಯದ ಹರಿಕಾರರಾಗಿದ್ದು ಹೊಸ ಹಾದಿ ನಡೆದು ರೂಪಿಸಿದ ಆರ್. ಎಲ್. ನರಸಿಂಹಯ್ಯ (೧೯೦೨-೭೯), ಸಿ. ಎನ್. ಶ್ರೀನಿವಾಸ ಅಯ್ಯಂಗಾರ್ (೧೯೦೧-೭೨) ಮೊದಲಾದವರ ಹೆಸರು ಮತ್ತು ಕೃತಿ ಇಂದಿನ ಬಹುತೇಕ ತಾರಾಮೌಲ್ಯಯುತ (ಸ್ಟಾರ್-ವೇಲ್ಯೂ ಇರುವ) ಲೇಖಕರಿಗೆ ತೀರ ಅಪರಿಚಿತ, ಆ ಮಹನೀಯರು ಮಾಡಿದ ಪ್ರಯೋಗಗಳು ಅನುಪಯುಕ್ತ, ಸ್ವಂತ ಪ್ರಯೋಗ ಮಾಡಲು ವ್ಯವಧಾನವಿಲ್ಲ! ಏಕೆಂದರೆ (ಸರ್ವಜ್ಞನ ಕ್ಷಮೆ ಕೋರಿ) –

ಅಚ್ಚು ಸಾಲೆಗಳುಂಟು ವೆಚ್ಚಕ್ಕೆ ಹೊನ್ನುಂಟು
ಮೆಚ್ಚುವಾ ವಂದಿಮಾಗಧರ ದಂಡುಂಟು
ಕಿಚ್ಚು ಹಚ್ಚೆಂದ ಸ್ವರ್ಗಕ್ಕೆ ಸರ್ವಜ್ಞ

ನನ್ನ ವೃತ್ತಿ ಜೀವನದ ವೇಳೆ ಇಬ್ಬರು ಭಾರತೀಯ ನೊಬೆಲ್ ಪ್ರಶಸ್ತಿ ಪುರಸ್ಕೃತರನ್ನು ಅವರವರ ನೆಲೆಗಳಲ್ಲೇ ಬೇರೆಬೇರೆಯಾಗಿ ಭೇಟಿಮಾಡಿ ಸುದೀರ್ಘ ಸಂದರ್ಶನ ಪಡೆಯುವ ಸುಯೋಗ ನನಗೊದಗಿತ್ತು: ಚಂದ್ರಶೇಖರ ವೆಂಕಟರಾಮನ್ (೧೮೮೮-೧೯೭೦) – ಬೆಂಗಳೂರಿನಲ್ಲಿ (೧೯೬೮); ಮತ್ತು ಸುಬ್ರಹ್ಮಣ್ಯನ್ ಚಂದ್ರಶೇಖರ್ (೧೯೧೦-೯೫) – ಚಿಕಾಗೋದಲ್ಲಿ(೧೯೯೫). ಇಬ್ಬರ ಮಾತೃಭಾಷೆಯೂ ತಮಿಳು. ನಮ್ಮ ಮಾತು ಕಥೆ ವೇಳೆ ನಾನು ಉಭಯರನ್ನೂ ಪ್ರತ್ಯೇಕವಾಗಿ ಕೇಳಿದ ಒಂದು ಪ್ರಶ್ನೆ: ''ಪಾಶ್ಚಾತ್ಯ ಮಹಾ ವಿಜ್ಞಾನಿಗಳು ಕಲಿತದ್ದು, ಚಿಂತಿಸಿದ್ದು ಮತ್ತು ತಮ್ಮ ಸಂಶೋಧನ ನಿಬಂಧಗಳನ್ನು ರಚಿಸಿದ್ದು ಅವರವರ ತಾಯಿ ನುಡಿಗಳಲ್ಲಿ ಅಥವಾ ಅಲ್ಲೇ ಅರಳಿದ್ದ ಗ್ರೀಕ್, ಲ್ಯಾಟಿನ್ ಮುಂತಾದ ಅಭಿಜಾತ ಭಾಷೆಗಳಲ್ಲಿ. ನೀವಾದರೋ ಇಂಥ ಸೃಜನಶೀಲ ಶೋಧನೆ ಮಾಡಿದ್ದು ಪರಭಾಷೆ ಇಂಗ್ಲಿಷಿನಲ್ಲಿ. ಈ ಪರಕೀಯ ಮಾಧ್ಯಮದ ಕಾರಣವಾಗಿ ನಿಮ್ಮ ಪ್ರತಿಭಾವಿಕಾಸಕ್ಕೆ ಏನಾದರೂ ಅಡಚಣೆ ಉಂಟಾಯಿತೇ ? ನಿಮ್ಮ ಮಾತೃಭಾಷೆಯಲ್ಲೇ ಓದಿ ಸಂಶೋಧನೆಗೈದಿದ್ದರೆ ಇನ್ನಷ್ಟು ಅಧಿಕ ಕಾರ್ಯ ಸಾಧಿಸಬಹುದಿತ್ತು ಎಂಬ ಭಾವನೆ ನಿಮಗೆಂದಾದರೂ ಬಂದುದುಂಟೇ ?''

ರಾಮನ್ ನುಡಿದರು: ''ತಾತ್ತ್ವಿಕವಾಗಿ ನಿಮ್ಮ ಪ್ರಶ್ನೆ ಸರಿಯಾಗಿದೆ. ಆದರೆ ನನ್ನ ಓರಗೆ ಯವರಿಗೆ, ಅಂದಿನ ದಾಸರಾಷ್ಟ್ರ ಭಾರತದಲ್ಲಿ, ಬೇರೆಯ ಆಯ್ಕೆ ಇರಲಿಲ್ಲ. ಈಚೆಗಿನ ವರ್ಷ ಗಳಲ್ಲಿ (೧೯೫೦ರ ದಶಕದಿಂದೀಚೆಗೆ), ವಿಶೇಷವಾಗಿ, ನನ್ನ ಸುತ್ತಮುತ್ತಲಿನ ಸಾಮಾನ್ಯ ಮಂದಿಯೊಂದಿಗೆ ವಿಜ್ಞಾನ ವಿಷಯಗಳನ್ನು ಕುರಿತು ಮಾತಾಡುವಾಗ, ಮತ್ತು ಪಾಶ್ಚಾತ್ಯರಿಗೆ ತಮ್ಮ ಭಾಷೆ ಬಗ್ಗೆ ಇರುವ ಅಭಿಮಾನ ಗಮನಿಸುವಾಗ, ತಮಿಳಿನಲ್ಲೋ ಕನ್ನಡದಲ್ಲೋ ನಾನು ಕಲಿತು ಮಾತಾಡಿ ಪ್ರಕಟಿಸಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಅನ್ನಿಸಿದ್ದುಂಟು.''

ಚಂದ್ರಶೇಖರ್, ''ಹೌದು, ಮೈಖೇಲ್ ಫ್ಯಾರಡೇ (೧೭೯೧-೧೮೬೭) ಇಂಗ್ಲೆಂಡಿಗ, ಬಡವ. ಅಂದಿನ ಬೋಧನ ಮಾಧ್ಯಮವಾದ ಲ್ಯಾಟಿನ್ ಭಾಷೆಗೆ ಆತನಿಗೆ ಪ್ರವೇಶ ವಿರಲಿಲ್ಲ. ಅವನ ವೃತ್ತಿ ವೇಳೆ ಅವನಿಗೆ ಇಂಗ್ಲಿಷಿನಲ್ಲಿ ಮುದ್ರಣಗೊಂಡಿದ್ದ ಒಂದು ವಿಜ್ಞಾನ ಲೇಖನ ಆಕಸ್ಮಾತ್ತಾಗಿ ದೊರೆಯಿತು ! ಓದಿದ, ಗ್ರಹಿಸಿದ, ಮಿಕ್ಕುದು ಈಗ ಇತಿಹಾಸ ! ನಾನು ಮದ್ರಾಸಿನಲ್ಲಿ ಓದುತ್ತಿದ್ದಾಗ ಎಲ್ಲವೂ ಇಂಗ್ಲಿಷ್‌ಮಯ. ಬ್ರಿಟಿಷ್ ಆಧಿಪತ್ಯ. ಜನ ಒಪ್ಪಿದರು. ವಿದ್ಯಾರ್ಥಿಗಳಾದ ನಾವು ಈ ನಿಲುವನ್ನು ಪ್ರಶ್ನಿಸಲೇ ಇಲ್ಲ. ಸೈದ್ಧಾಂತಿಕವಾಗಿ ಮಾತೃಭಾಷೆಯೇ ಸರ್ವಶ್ರೇಷ್ಠ ಎಂಬುದನ್ನು ರಷ್ಯಾ, ಜಪಾನ್ ಮೊದಲಾದ ದೇಶಗಳು ತೋರಿಸಿಕೊಟ್ಟಿವೆ. ಐತಿಹಾಸಿಕ ಕಾರಣಗಳಿಂದಾಗಿ ಇಂಗ್ಲಿಷಿಗೆ ಅತಿಶಯ ಪ್ರಾಮುಖ್ಯ ಬಂದಿದೆಯೇ ವಿನಾ ಅದರ ಯಾವುದೇ ಆಂತರಿಕ ತ್ರಾಣದಿಂದ ಅಲ್ಲ.''

ಈ ಕೊನೆಯ ಭಾವನೆಯನ್ನು ಗಮನಿಸಬೇಕು : ಯಾವುದೇ ಭಾಷೆಯ ತ್ರಾಣ ಅದನ್ನು ಬಳಸುವ ಜನರಿಂದ ಅದಕ್ಕೆ ಒದಗುತ್ತದೆ, ಹೊರತು, ಅದರಲ್ಲಿ ನಿಹಿತವಾಗಿರುವ ವಿಶಿಷ್ಟ ಗುಣದಿಂದ ಅಲ್ಲ.

ಚಂದ್ರಶೇಖರ್ ಸ್ವಹಸ್ತದಲ್ಲಿ ಬರೆದ ಒಂದು ಇಂಗ್ಲಿಷ್ ಸಂದೇಶವನ್ನು ನನಗೆ ಕೊಟ್ಟರು. ಅದರ ಪೂರ್ಣ ಪಾಠ : ''ವಿಜ್ಞಾನಾನುಶೀಲನೆಯನ್ನು ಹೆಚ್ಚಾಗಿ ಪರ್ವತಾರೋಹಣಕ್ಕೆ ಹೋಲಿಸು ವುದುಂಟು – ಸಾಕಷ್ಟು ಎತ್ತರದ ಬೆಟ್ಟಗಳನ್ನೂ ಅಷ್ಟೇನು ಎತ್ತರದವಲ್ಲದ ಗುಡ್ಡಗಳನ್ನೂ ಹತ್ತುವುದು. ಆದರೆ ನಮ್ಮ ಪೈಕಿ ಯಾರು ತಾನೇ ಆಕಾಶ ನೀಲವಾಗಿದ್ದು, ಮಾರುತ ನಿಸ್ಪಂದ ವಾಗಿರುವಾಗ, ಹಿಮಾಲಯ ಏರಿ, ಶಿಖರ ತಲುಪಿ, ಅನಂತಕ್ಕೆ ವ್ಯಾಪಿಸಿಕೊಂಡಿರುವ ಮಂಜಿನ ಜ್ವಲಂತ ಪರಿಶುಭ್ರತೆಯಲ್ಲಿ, ಸಮಗ್ರ ಹಿಮಾಲಯ ಶ್ರೇಣಿಯನ್ನೇ ಸರ್ವೇಕ್ಷಿಸಲು ಕಲ್ಪನೆಯಲ್ಲಾದರೂ ಹವಣಿಸಿಯಾನು ? ನಿಸರ್ಗ ಮತ್ತು ನಮ್ಮ ಸುತ್ತಲಿನ ವಿಶ್ವ ಕುರಿತಂತೆ ತತ್ಸದೃಶದರ್ಶನ ಲಭಿಸೀತೆಂದು ನಾವು ಯಾರೂ ಆಶಿಸಲಾರೆವು. ಆದರೆ ತಳದ ಕಣಿವೆಯಲ್ಲಿ ನಿಂತು, ಕಾಂಚನಜುಂಗಾಶೃಂಗಕ್ಕೆ ಆರೋಹಿಸುತ್ತ ಬರುವ ಸೂರ್ಯನನ್ನು ಪ್ರತೀಕ್ಷಿಸುವು ದರಲ್ಲಿ ಹೀನವಾದುದಾಗಲೀ ದೀನವಾದುದಾಗಲೀ ಏನೂ ಇಲ್ಲ'' (ಮೂಲ ಇಂಗ್ಲಿಷಿನಲ್ಲಿದೆ)

ಈಗ (೨೦೦೪) ಕನ್ನಡನಾಡಿನಲ್ಲಿ ಆಗಬೇಕಾದದ್ದೇನು ? ೧. ಕರ್ನಾಟಕದಲ್ಲಿ ಸರ್ವ ಶಿಕ್ಷಣ ಮತ್ತು ಸಮಗ್ರ ಆಡಳಿತ ಮಾಧ್ಯಮ ಕನ್ನಡವಾಗತಕ್ಕದ್ದು. ೨. ಇಂಗ್ಲಿಷ್ ಭಾಷೆಯನ್ನು ಕಡ್ಡಾಯವಾಗಿ ಕಲಿಸಬೇಕು. ಕನ್ನಡದಲ್ಲಿ ಆಗ ವಿಜ್ಞಾನವನ್ನೂ ಒಳಗೊಂಡಂತೆ ಪಠ್ಯ ಪುಸ್ತಕ, ಆಕರಗ್ರಂಥ, ಅನುವಾದ ಕೃತಿ, ತಾಂತ್ರಿಕ ನಿಯತಕಾಲಿಕೆ ಮುಂತಾದವು ಪ್ರಕಟವಾಗುತ್ತವೆ, ಮತ್ತು ಅವುಗಳಿಗೆ ಸ್ಥಿಮಿತ ಬೇಡಿಕೆ ಇರುತ್ತದೆ. ೩. ವಿಜ್ಞಾನ ಲೇಖನ ಕ್ರಿಯೆಗೆ ಪ್ರೀತಿಯಿಂದ ಮುಂಬರುವವರಿಗೆ – ಇವರು ವಿಜ್ಞಾನದ ವಿದ್ಯಾರ್ಥಿಗಳಾಗಿರಲೇಬೇಕು, ಸಾಹಿತ್ಯ ವಿದ್ಯಾರ್ಥಿ ಗಳಿಗೆ ಇದು ಸಾಧ್ಯವಾಗದು – ಅಭಿಜಾತ ಕನ್ನಡದಲ್ಲಿ ಸಮರ್ಪಕ ಶಿಕ್ಷಣ ನೀಡಬೇಕು. ಕೇವಲ ಕನ್ನಡದ ವಿದ್ಯಾರ್ಥಿ ಅಥವಾ ಮಾತೃಭಾಷೆ ಕನ್ನಡ ಎಂಬ ಕಾರಣದಿಂದ ಈ ಸಾಮರ್ಥ್ಯ ಒದಗುವುದಿಲ್ಲ. ೪. ಇಂಥ ಒಂದು ಸರಸ್ವತೀ ಕೈಂಕರ್ಯದಲ್ಲಿ ಯೋಗ್ಯತೆ, ನಿಷ್ಠೆ ಮತ್ತು ನಂಬಿಕೆ ಇರುವವರನ್ನು ಮಾತ್ರ ಇದಕ್ಕೆ ಆಯಬೇಕು. ೫. ಮೇಲಿನ ನಾಲ್ಕು ಮುಖ್ಯ ಆವಶ್ಯಕತೆಗಳ ಜೊತೆಗೆ, ಲೇಖನಕ್ರಿಯೆಯ ವೇಳೆ ತಾವು ಅನುಭವಿಸಿದ ಆನಂದವನ್ನು ಸಮಾಜಕ್ಕೆ ಹಿಂತಿರು ಗಿಸುವುದು ತಮ್ಮ ಕರ್ತವ್ಯ ಎಂಬ ಪ್ರಜ್ಞೆ ಇರುವವರು ಮಾತ್ರ, ಈ ಕೆಲಸ ನಿರ್ವಹಿಸಲು ಶಕ್ತರು.

ಚಿಕ್ಕಂದಿನಿಂದಲೇ ಸಾಹಿತ್ಯ-ಸಂಗೀತ-ವಿಜ್ಞಾನತ್ರಯವನ್ನು ಪ್ರೀತಿಯಿಂದ ಅಭ್ಯಸಿಸಿ (ನಾನು ಗಣಿತ ಎಂ.ಎ. ಪದವೀಧರ) ಕಾಲೇಜು ಉಪನ್ಯಾಸಕನಾಗಿ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಗಣಿತ ಮತ್ತು ಖಗೋಳ ವಿಜ್ಞಾನಗಳನ್ನು ಬೋಧಿಸಿದ್ದೇನೆ, ಉಭಯ ಮಾಧ್ಯಮಗಳಲ್ಲಿಯೂ ಜನಪ್ರಿಯ ಮತ್ತು ತಾಂತ್ರಿಕ ಕೃತಿಗಳನ್ನು ರಚಿಸಿದ್ದೇನೆ, ರಚಿಸುತ್ತಲೂ ಇದ್ದೇನೆ, ಇಂಗ್ಲಿಷಿನಿಂದ ಕನ್ನಡಕ್ಕೆ ವಿಜ್ಞಾನ ಕೃತಿಗಳನ್ನು ಅನುವಾದಿಸಿದ್ದೇನೆ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ವಿಶ್ವಕೋಶದ ವಿಜ್ಞಾನ ಸಂಪಾದಕನಾಗಿದ್ದೆ (೧೯೭೯-೮೬), ನವಕರ್ನಾಟಕ ಇಂಗ್ಲಿಷ್-ಕನ್ನಡ ಪದವಿವರಣಕೋಶದ (ಪ್ರಕಟಣೆ ೨೦೦೦) ಪ್ರಧಾನ ಸಂಪಾದಕನಾಗಿದ್ದೆ. ನನ್ನ ಖಚಿತ ಅನುಭವ ಮತ್ತು ನಂಬಿಕೆ ಇದು : ನಮ್ಮತೆ ನವುರುಗಳಲ್ಲಿ ಪ್ರಪಂಚದ ಯಾವ ಭಾಷೆಯ ಮುಂದೆಯೂ ಕನ್ನಡ ತಲೆ ತಗ್ಗಿಸಬೇಕಾಗಿಲ್ಲ. ಇದನ್ನು ಅನುಭವದಿಂದ ಕಂಡುಕೊಂಡು ಅನುಷ್ಠಾನಿಸುವ ಅಸ್ಮಿತೆ ನಮಗಿರಬೇಕು ಮಾತ್ರ.

ನನ್ನ ಖಚಿತ ಅಭಿಪ್ರಾಯವನ್ನು ಮುಂದಿನ ಸೂತ್ರವಾಕ್ಯ ಬಿಂಬಿಸುತ್ತದೆ : ಸಾಹಿತ್ಯರಹಿತ ವಿಜ್ಞಾನ ಕುಂಟು, ವಿಜ್ಞಾನರಹಿತ ಸಾಹಿತ್ಯ ಕುರುಡು. ಸಾಹಿತ್ಯ-ವಿಜ್ಞಾನ ಸಾಮರಸ್ಯವೇ ಋಜುಜೀವನದ ಭದ್ರ ಬುನಾದಿ.

**ಜಿ. ಟಿ. ನಾರಾಯಣರಾವ್**
ನಂ. ೮, ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ, ಮೈಸೂರು - ೫೭೦ ೦೦೯

# ಕಾಮ್ರೇಡ್ ಇ. ಕೆ. ನಾಯನಾರರಿಗೆ

# ಲಾಲ್ ಸಲಾಂ!



ನಾಯನಾರ್ ಅವರದು ಸರಳ ಹಾಗೂ ಪಾರದರ್ಶಕ ಬದುಕು. ಹತ್ತು ವರ್ಷಗಳ ಕಾಲ ಅವರು ಮುಖ್ಯಮಂತ್ರಿಯಾಗಿದ್ದರೂ ಅವರ ಪತ್ನಿ ತಮ್ಮ ಅಧ್ಯಾಪಿಕೆಯ ವೃತ್ತಿಯನ್ನು ತೊರೆಯಲಿಲ್ಲ. ನಾಯನಾರವರ ಎಲ್ಲಾ ಹೋರಾಟಗಳಿಗೆ ಬೆನ್ನೆಲುಬಾಗಿ ನಿಂತಿದ್ದವರು ಶ್ರೀಮತಿ ಶಾರದಾ ನಾಯನಾರ್.

ಬಡವರ, ದೀನ ದಲಿತರ, ರೈತಾಪಿ ಜನರ ಧ್ವನಿಯಾಗಿದ್ದ ನಾಯನಾರರು ಮುಖ್ಯಮಂತ್ರಿ ಗಾದಿಯನ್ನು ಏರಿದ ತಕ್ಷಣ ನಿರುದ್ಯೋಗ ಭತ್ಯೆ ಹಾಗೂ ಕರ್ಷಗಪೆನ್ಶನ್ (ರೈತರಿಗೆ ನಿವೃತ್ತಿ ವೇತನ)ನ್ನು ಕೊಡಮಾಡಿದರು.

'ಕಮ್ಯುನಿಸ್ಟರು ನಗುವುದಿಲ್ಲ' ಎಂಬ ಸಾಮಾನ್ಯ ಆರೋಪಕ್ಕೆ ನಾಯನಾರರು ಅಪವಾದವಾಗಿದ್ದರು. ಅವರು ಸದಾ ಹಸನ್ಮುಖಿ. ಮಾತುಗಳಲ್ಲಿ ಹಾಸ್ಯದ ಲೇಪವಿರುತ್ತಿತ್ತು. ಎಡಪಂಥೀಯ ವಿಚಾರಧಾರೆಯನ್ನು ಅವರು ಜನರಿಗೆ ಹೇಳುತ್ತಿದ್ದುದು ಬಹಳ ಸರಳ, ಸುಂದರ ಭಾಷೆಯಲ್ಲಿ. ಉಳಿದ ವಿಚಾರವಾದಿ ಚಿಂತಕರಂತೆ ಅವರು ತಮ್ಮ ಚಿಂತನೆಗಳನ್ನು ಕಠಿಣ ಶಬ್ದಗಳಲ್ಲಿ ಹೇಳುತ್ತಿರಲಿಲ್ಲ. ಕೇರಳ ಜನತೆಯ ಭಾಷೆಯಲ್ಲಿ ಹೇಳುವುದಾದರೆ ನಾಯನಾರರದು 'ಹೃದಯದ ಭಾಷೆ'.

ತಮಗೆ ತೋಚಿದ್ದನ್ನು ಯಾವ ಎಗ್ಗೂ ಇಲ್ಲದೆ, ನಿರ್ಭಿಡೆಯಾಗಿ ಹೇಳಿಬಿಡುತ್ತಿದ್ದ ನಾಯನಾರರು ಕೆಲವೊಮ್ಮೆ ಮಾಧ್ಯಮಗಳನ್ನು ಎದುರು ಹಾಕಿಕೊಳ್ಳುವುದಿತ್ತು. ಅವು ಸಂಘ ಪರಿವಾರದ ಕಾರ್ಯಕ್ರಮಗಳನ್ನು ಕುಂಬಳಕಾಯಿ ಅಕ್ಷರಗಳಲ್ಲಿ ಪ್ರಕಟಿಸಿ, ಎಡಪಂಥೀಯರ ಕಾರ್ಯಕ್ರಮಗಳನ್ನು ಮೂಲೆಗುಂಪು ಮಾಡಿದರೆ ನಾಯನಾರರು ಕೆಂಡಾಮಂಡಲವಾಗುತ್ತಿದ್ದರು. ಆದರೆ ಯಾವುದೇ ಪತ್ರಕರ್ತನು ನಾಯನಾರರನ್ನು ಎದುರುಹಾಕಿಕೊಳ್ಳುತ್ತಿರಲಿಲ್ಲ ವೆಂಬುದೂ ಅಷ್ಟೇ ಸತ್ಯ. ಏಕೆಂದರೆ ಅವರ ಬದುಕಿನಂತೆ ಅವರ ಮನಸ್ಸು ಪಾರದರ್ಶಕ, ನಿಷ್ಕಳಂಕ, ನಿರ್ಮಲ.

ಇ. ಕೆ. ನಾಯನಾರರು ಹುಟ್ಟಿದ್ದು (೧೯೧೯ ಡಿಸೆಂಬರ್ ೯) ಕಣ್ಣೂರು ಸಮೀಪದ ಕಲ್ಯಾಸ್ಸೇರಿಯ ಒಂದು ಜಮೀನ್ದಾರಿ ಕುಟುಂಬದಲ್ಲಿ. ವಿದ್ಯಾರ್ಥಿಯಾಗಿದ್ದಾಗಲೇ ಅವರು ಕಾಂಗ್ರೆಸ್ ಪಕ್ಷ ಸೇರಿ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. ಕಾಂಗ್ರೆಸ್ ಪಕ್ಷದೊಳಗೆ ಕೆಲವರು ಸೋಷಲಿಸ್ಟ್ ಪಕ್ಷವನ್ನು ಸ್ಥಾಪಿಸಹೊರಟಾಗ ಅದರಿಂದ ಆಕರ್ಷಿತರಾದ ನಾಯನಾರರು ಅವರೊಂದಿಗೆ ಗುರುತಿಸಿಕೊಂಡರು. ಸ್ವತಃ ಜಮೀನ್ದಾರಿ ಕುಟುಂಬದಿಂದ ಬಂದಿದ್ದರೂ ಜಮೀನ್ದಾರಿ ಪದ್ಧತಿಯನ್ನು ತೀವ್ರವಾಗಿ ವಿರೋಧಿಸುತ್ತಿದ್ದರು. ಬಹುಶಃ ಅದರಿಂದಲೇ ಏನೋ ಅವರು ಎಡಪಂಥದ ವಿಚಾರಧಾರೆಗೆ ಬಹುವಾಗಿ ಆಕರ್ಷಿತರಾದರು.

೧೯೪೦ರಲ್ಲಿ ಆರೋಮತ ರೈತ ಹೋರಾಟ ಅವರು ಭಾಗವಹಿಸಿದ ಮೊದಲ ಚಳುವಳಿ. ಕೇರಳದ ನೀಲೇಶ್ವರದ ಬಳಿಯ ಕಯ್ಯೂರಿನ ರೈತ ಹೋರಾಟದಲ್ಲಿ ಪರೋಕ್ಷವಾಗಿ ಭಾಗವಹಿಸಿದ ನಾಯನಾರರು ಗಲ್ಲುಶಿಕ್ಷೆಗೆ ಒಳಪಟ್ಟ ಮೂರನೆಯ ಆರೋಪಿ. ಈ ಹೋರಾಟವನ್ನು ಕುರಿತು ನಿರಂಜನರು ತಮ್ಮ 'ಚಿರಸ್ಮರಣೆ' ಕಾದಂಬರಿಯನ್ನು ಬರೆದಿದ್ದರು. ಅದು, ಮಲಬಾರಿನ ಬೇರೆ ಬೇರೆ ಕಡೆಗಳಲ್ಲಿ ಜಾರಿಯಲ್ಲಿದ್ದ ಜಮೀನ್ದಾರಿ ಪದ್ಧತಿಯು ಶ್ರೀಸಾಮಾನ್ಯ ಹಾಗೂ ರೈತ ಕಾರ್ಮಿಕರನ್ನು ಬಹುವಾಗಿ ಶೋಷಿಸುತ್ತಿದ್ದ ಕಾಲ. ಇದರ ವಿರುದ್ಧ ಅಲ್ಲಲ್ಲಿ ಪ್ರತಿಭಟನೆಗಳು, ರ್‍ಯಾಲಿಗಳು ನಡೆಯುತ್ತಲಿದ್ದವು. ಅವನ್ನು ಹತ್ತಿಕ್ಕಲು ಸರಕಾರ ಪೊಲೀಸರಿಗೆ ಗ್ರಾಮ ಗ್ರಾಮಗಳ ಮೇಲೆ ದಾಳಿಯಿಡಲು ಆಜ್ಞೆ ಹೊರಡಿಸಿತು. ಪೊಲೀಸರು ಗ್ರಾಮಸ್ಥರನ್ನು ಬೆದರಿಸಿ ಹೆದರಿಸಿ ಹಿಂಸಿಸುತ್ತಿದ್ದರು. ಇದರಿಂದ ಹೋರಾಟ ಮತ್ತಷ್ಟು ತೀವ್ರವಾಯಿತೇ ಹೊರತು ತಹಬಂದಿಗೆ ಬರಲಿಲ್ಲ. ಇಡೀ ಮಲಬಾರು ಪ್ರದೇಶದಲ್ಲಿ ಕಯ್ಯೂರಿನ ರೈತ ಸಂಘ ಪ್ರಬಲವಾಗಿತ್ತು. ರೈತ ಸಂಘಕ್ಕೆ ಬೆಂಬಲವಾಗಿ ಕಮ್ಯುನಿಸ್ಟ್ ಪಕ್ಷವು ನಿಂತಾಗ ಚಳವಳಿಗೆ ಹೊಸ ಸ್ಥೈರ್ಯ ಮೂಡಿಬಂತು. ೧೯೪೧ ಮಾರ್ಚ್ ೧೨ರಂದು ರೈತ ಸಂಘ ಮತ್ತು ಕಮ್ಯುನಿಸ್ಟ್ ಪಕ್ಷಗಳು ಜಂಟಿಯಾಗಿ ಒಂದು ಬೃಹತ್ ಮೆರವಣಿಗೆಯನ್ನು ನಡೆಸಿದುವು. ಸರಕಾರ ಸಹಜವಾಗಿಯೇ ಇದನ್ನು ಸಹಿಸಲಿಲ್ಲ. ಪೊಲೀಸರ ದಾಳಿ ಮತ್ತೆ ತೀವ್ರಗೊಂಡಿತು. ಇದನ್ನು ಪ್ರತಿಭಟಿಸಲು ಹಳ್ಳಿ ಹಳ್ಳಿಗಳೇ ಸಂಘಟಿತರಾಗಿ ಮಾರ್ಚ್ ೨೮, ೧೯೪೩ರಂದು ಸರಕಾರದ ದೌರ್ಜನ್ಯವನ್ನು ಖಂಡಿಸಿ ಬೃಹತ್ ಮೆರವಣಿಗೆ ನಡೆಸಿದವು. ಮೆರವಣಿಗೆ ಘೋಷಣೆಗಳೊಂದಿಗೆ ಸಾಗುತ್ತಿದ್ದಂತೆಯೇ ಕಯ್ಯೂರಿನಲ್ಲಿ ತಳವೂರಿದ್ದ ಪೊಲೀಸನೊಬ್ಬ ಪ್ರತಿಭಟನೆಕಾರರ ನಡುವೆ ಸಿಕ್ಕಿಬಿದ್ದ. ಜನ ಅವನನ್ನು ಗೇಲಿ ಮಾಡಿ ನಕ್ಕರು. ಮೆರವಣಿಗೆಯಲ್ಲಿ ಅವನನ್ನು ಮುಂದೆ ನಿಲ್ಲಿಸಿ ಕೆಂಬಾವುಟವನ್ನು ಅವನ ಕೈಗಿತ್ತು ಸರಕಾರದ ವಿರುದ್ಧ ಧಿಕ್ಕಾರ ಕೂಗಲು ಒತ್ತಾಯಿಸಿದರು. ಭಯಭೀತನಾದ ಪೊಲೀಸಿನವನು ಬಾವುಟವನ್ನು ಕೆಳಕ್ಕೆ ಬಿಸಾಡಿ ಓಡತೊಡಗಿದ. ಕೆಲವರು ಅವನನ್ನು ಬೆನ್ನಟ್ಟಿದರು. ಅವನು ಮತ್ತಷ್ಟು ಹೆದರಿ ಸಮೀಪದ ತೇಜಸ್ವಿನಿ ನದಿಗೆ ಜಿಗಿದ. ಈಜು ಬರುತ್ತಿದ್ದರೂ ಭಯದಿಂದ ಅವನ ಕೈಕಾಲುಗಳು

ದಿನಾಂಕ ೧೯.೫.೨೦೦೪ರಂದು ನಿಧನರಾದ ಕೇರಳದ ಮಾಜಿ ಮುಖ್ಯಮಂತ್ರಿ ಮಾರ್ಕ್ಸಿಸ್ಟ್ ಕಮ್ಯುನಿಸ್ಟ್ ಪಕ್ಷದ ಹಿರಿಯನಾಯಕ ಇ. ಕೆ. ನಾಯನಾರ್ ಅವರದು ಹೋರಾಟದ ಬದುಕು. ಕೇರಳದಲ್ಲಿ ಅತಿ ಹೆಚ್ಚು ಕಾಲ ಮುಖ್ಯಮಂತ್ರಿಯಾಗಿದ್ದ ಹೆಗ್ಗಳಿಕೆ ಅವರದು. ಈ ಉನ್ನತ ಹುದ್ದೆಗೇರಲು ಅವರು ನಡೆದುಬಂದ ದಾರಿ ರತ್ನಗಂಬಳಿಯದ್ದಾಗಿರಲಿಲ್ಲ. ಹಲವಾರು ಹೋರಾಟಗಳ ಕಠಿಣ ಹಾದಿಯಾಗಿತ್ತು.

**ಕೆ. ಕೆ. ಗಂಗಾಧರನ್**

ಅಲುಗಾಡಲಿಲ್ಲ. ಈಜಲು ಸಾಧ್ಯವಾಗದೆ ಆತ ಹೊಳೆಯಲ್ಲಿ ಮುಳುಗಿ ಸತ್ತ.

ಪೊಲೀಸನ ಸಾವು ಕಯ್ಯೂರಿನ ಸುತ್ತಮುತ್ತಲೂ ಪ್ರಕ್ಷುಬ್ಧ ವಾತಾವರಣವನ್ನು ಸೃಷ್ಟಿಸಿತು. ಪೊಲೀಸಿನವರ ದಾಳಿ ಮತ್ತು ಹಿಂಸೆಗಳು ಮತ್ತಷ್ಟು ಹೆಚ್ಚಿದವು. ಈ ಮೊಕದ್ದಮೆಯಲ್ಲಿ ಮಂಗಳೂರಿನ ಸೆಷನ್ಸ್ ಜಡ್ಜ್ ಐವರನ್ನು ಗಲ್ಲಿಗೆ ಏರಿಸುವಂತೆ ತೀರ್ಪು ನೀಡಿದರು. ಈ ಐವರ ಪೈಕಿ ನಾಲ್ಕು ಮಂದಿಯನ್ನು ಕಣ್ಣೂರಿನ ಜೈಲಿನಲ್ಲಿ ದಿನಾಂಕ ೨೯.೩.೪೩ರಂದು ಗಲ್ಲಿಗೇರಿಸಲಾಯಿತು. ಆದರೆ ಮೂರನೆಯ ಆರೋಪಿ ಕೃಷ್ಣ ನಾಯರರು (ಇ. ಕೆ. ನಾಯನಾರರು) ಪೊಲೀಸರ ಕಣ್ಣಿಗೆ ಮಣ್ಣೆರಚಿ ಭೂಗತರಾದರು.

ಸ್ವಾತಂತ್ರ್ಯಾನಂತರ ಆರೋಪಿಗಳ ಎಲ್ಲಾ ಮೊಕದ್ದಮೆಗಳನ್ನು ಸ್ವತಂತ್ರ ಭಾರತದ ಸರಕಾರ ಹಿಂದಕ್ಕೆ ಪಡೆದಾಗ ನಾಯನಾರರು ಈಚೆಗೆ ಬಂದರು. ಕೆಲಕಾಲ 'ಕೇರಳ ಕೌಮುದಿ' ಪತ್ರಿಕೆಯಲ್ಲಿ ಪ್ರೂಫ್ ರೀಡರ್‌ರಾಗಿ, ವರದಿಗಾರರಾಗಿ ಕೆಲಸ ನಿರ್ವಹಿಸಿದರು. ಮುಂದೆ ಪಕ್ಷದ ಮುಖವಾಣಿ 'ದೇಶಾಭಿಮಾನಿ' ಪತ್ರಿಕೆಯಲ್ಲಿ ಕೆಲಸ. ಪ್ರಗತಿಪರ ಚಿಂತನೆಯ ಹಲವಾರು ಲೇಖನಗಳನ್ನು ನಾಯನಾರರು 'ದೇಶಾಭಿಮಾನಿ'ಯಲ್ಲಿ ಬರೆದರು. ಬರವಣಿಗೆಯಲ್ಲೂ ಅವರು ಸರಳ ಭಾಷೆಯನ್ನು ಬಳಸುತ್ತಿದ್ದುದು ಹೆಚ್ಚು ಜನರನ್ನು ತಲುಪಲು ಕಾರಣವಾಯಿತು. ಕೆಲವು ಲೇಖನಗಳು ಕಾಂಗ್ರೆಸ್ ಸರಕಾರದ ಕೆಂಗಣ್ಣಿಗೂ ಗುರಿಯಾದವು.

ಪಕ್ಷದ ೧೯೪೮ರ 'ಕಲ್ಕತ್ತಾ ಥೀಸಿಸ್'ನ ನಂತರ ಭಾರತ ಸರಕಾರ ಕಮ್ಯುನಿಸ್ಟ್ ಪಕ್ಷದ ಮೇಲೆ ನಿಷೇಧ ಹೇರಿದಾಗ ಪುನಃ ನಾಯನಾರರು ಭೂಗತರಾದರು. ಸ್ವಲ್ಪಕಾಲದ ನಂತರ ಸರಕಾರ ನಿಷೇಧಾಜ್ಞೆಯನ್ನು ಹಿಂದಕ್ಕೆ ಪಡೆಯಿತು. ಪುನಃ ನಾಯನಾರರು 'ದೇಶಾಭಿಮಾನಿ' ಪತ್ರಿಕೆಯಲ್ಲಿ ಸೇರ್ಪಡೆಯಾದರು. ಇಂಡಿಯಾ-ಚೈನಾ ಯುದ್ಧದ ವೇಳೆಯಲ್ಲಿ ಸರಕಾರ ನಾಯನಾರರನ್ನು ಚೈನಾದ ಬೇಹುಗಾರರೆಂದು ಶಂಕಿಸಿ ಜೈಲಿಗೆ ಹಾಕಿತು.

ದಿವಂಗತ ನಾಯನಾರರು ಅತ್ಯುತ್ತಮ ಲೇಖಕ ಕೂಡ. ಕೇರಳದ ಪ್ರಗತಿಪರ ಲೇಖಕರ ಸಂಘವನ್ನು ಕಟ್ಟಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಸರಳಭಾಷೆಯಲ್ಲಿ ಹಲವಾರು ವೈಚಾರಿಕ ಲೇಖನಗಳನ್ನು ಬರೆದಿದ್ದಾರೆ. ತಮ್ಮ ಆತ್ಮಕತೆಯೂ ಸೇರಿದಂತೆ ಸುಮಾರು ನಲವತ್ತು ಪುಸ್ತಕಗಳನ್ನು ಅವರು ಬರೆದಿದ್ದರೆ, 'ದೇಶಾಭಿಮಾನಿ' ಅವರ ನೆಚ್ಚಿನ ಪತ್ರಿಕೆಯಾಗಿತ್ತು. 'ದಿ ಹಿಂದೂ' ಅವರ ಮೆಚ್ಚಿನ ಇಂಗ್ಲಿಷ್ ಪತ್ರಿಕೆ.

ನಾಯನಾರರು ಕೇರಳದ ರಾಜಕೀಯ ರಂಗದ ಧ್ರುವತಾರೆ!

**ಕೆ. ಕೆ. ಗಂಗಾಧರನ್**
ಸಿಟಿ ಆರ್.ಎಂ.ಎಸ್., ರೈಲ್ವೆ ನಿಲ್ದಾಣದ ಬಳಿ, ಬೆಂಗಳೂರು -೨೩

# ಗಾಂಧೀಜಿ

ಗಾಡಾಂಧಕಾರದ ಭರತಭೂಮಿಯ
ಸಂದಿಗೊಂದಿಯಲಿ
ಸೂರ್ಯನ ಬೆಳಕು ತಾರದಿದ್ದರೂ
ಚಂದಿರನ ಬೆಳಕು ತರಲು ತಡಕಾಡಿದವನು ।೧।

ಬೂಟುಗಳ ತುಳಿತಕ್ಕೆ ಮೈಕೊಟ್ಟರೂ
ಹ್ಯಾಟುಗಳ ಆಟಕ್ಕೆ ಗೂಟ ಬಡಿದವನು
ಲಾಠಿ, ಬಂದೂಕುಗಳ ಮೀಟಿ ನಿಂತವನು
ಕೋಟಿ ಕನಸುಗಳ ಭಾರತವ ಕಟ್ಟಿದವನು ।೨।

ಥೇಟು ಹುಚ್ಚನ ಹಾಗೆ ಅಂಗಿಯಿಲ್ಲದೆ।
ಬರಿಮೈ ತೆರೆದುಕೊಂಡು ಬಯಲಾದ ಬೈರಾಗಿ
ಸತ್ಯ ಅಹಿಂಸೆಗಳ ಸಾಕ್ಷಿಯಾಗಿ ತಪಗೈದ ಯೋಗಿ ।೩।

ನಗುವಲ್ಲೇ ಜಗವ ಬೆಚ್ಚಿ ಬೀಳಿಸಿದ
ಮಹಾತ್ಮ ನೀ ಆಗಿರಲು ಪರಮಾತ್ಮ
ಹಗಲು ರಾತ್ರಿ ನೇಯುತ್ತಿರಬೇಕು ನಿನ್ನಾತ್ಮ! ।೪।

ಖಾದಿಗೊಂದು ಮೌಲ್ಯ ತಂದು
ಕೊಟ್ಟವನು
ಗಾದಿ ಏರದೇ ಗಾವುದ ಗಾವುದ ದೂರ
ದೂರ ದೂರ ನಿಂತವನು!
ರಾಟಿಯ ಮೇಲೊಂದು ಕೋಟಿ
ಉದ್ಯೋಗ ಚಕ್ರ ತಿರುಗಿಸಿದಿ
ಬತ್ತಲಾದ ಭಾರತದ ಬಯಲಿಗೊಂದು
ಬಟ್ಟೆ ತೋರಿಸಿದಿ ।೫।

ಗಾಡಾಂಧಕಾರದ ಭರತಭೂಮಿಯ
ಸಂದಿಗೊಂದಿಯಲಿ
ಸೂರ್ಯನ ಬೆಳಕು ತಾರದಿದ್ದರೂ
ಚಂದಿರನ ಬೆಳಕು ತರಲು
ತಡಕಾಡಿದವನು ।೬।

ಗವಿಸಿದ್ದ ಎನ್. ಬಳ್ಳಾರಿ



# ಗ್ರಹಗಳ ಪಲಾಯನ



**ಮೊ**ನ್ನೆ ಮೊನ್ನೆಯವರೆಗೂ ಸಂಜೆಯ ಆಕಾಶದಲ್ಲಿ ಬೆಳಗುತ್ತಿದ್ದ ಶುಕ್ರ ಸೂರ್ಯನ ಮುಂದೆ ಹಾದು ಬೆಳಗಿನ ಆಕಾಶಕ್ಕೆ ಓಡಿತಲ್ಲವೇ ? ಈಗ ಉಳಿದ ಗ್ರಹಗಳ ಸರದಿ. ಹೀಗೆ ಓಡುವಾಗ ಅವು ಪರಸ್ಪರ 'ಗುಡ್‌ಬೈ' ಹೇಳುವ ನೋಟ ಸಂಜೆಯಲ್ಲಿ ಈ ತಿಂಗಳಲ್ಲಿ ದೊರಕಲಿದೆ.

ಸಂಜೆಯ ಆಕಾಶದಲ್ಲಿ ಸುಲಭವಾಗಿ ಗುರುತಿಸಬಹುದಾದ ಚುಕ್ಕೆಯೇ ಗುರುಗ್ರಹ. ಪಶ್ಚಿಮದಲ್ಲಿ ಕಾಣುವ ಇದು ದಿನೇ ದಿನೇ ಅಂಚಿಗೆ ಸರಿಯುವುದು. ಪಶ್ಚಿಮ ದಿಗಂತದ ಅಂಚಿನಲ್ಲಿ ಕಾಣುವ ಬುಧ ತಿಂಗಳುದ್ದಕ್ಕೂ ಕಾಣುವುದಾದರೂ ಸಂಧ್ಯಾ ಪ್ರಕಾಶದ ಬೆಳಕಿನಲ್ಲಿ ಹುಡುಕುವುದು ಕಷ್ಟವೇ. ಜುಲೈ ೨೭ರಂದು ಅದರ ಎತ್ತರ ಗರಿಷ್ಠವಾದಾಗ ನಿಮ್ಮ ಪ್ರಯತ್ನ ಖಂಡಿತ ಸಫಲವಾಗುತ್ತದೆ. ಈ ತಿಂಗಳಲ್ಲಿ ಬುಧ ಗ್ರಹದೊಡನೆ ಸಮಾಗಮವಾಗುವ ಗ್ರಹಗಳೆಂದರೆ ಮಂಗಳ ಮತ್ತು ಗುರು. ಜುಲೈ ೧೦ರಂದು ಮಂಗಳ ಮತ್ತು ಬುಧ ಗ್ರಹಗಳ ನಡುವೆ ಕೇವಲ ಅರ್ಧ ಚಂದ್ರದಷ್ಟು ಅಂತರವಿರುತ್ತದೆ. ಆದರೆ ಮಂಗಳ ಬುಧಕ್ಕಿಂತ ನೂರುಪಟ್ಟು ಕ್ಷೀಣವಾಗಿರುವುದರಿಂದ ಈ ಹಸ್ತಲಾಘವವನ್ನು ನೋಡಲು ದುರ್ಬೀನು ಬೇಕೇ ಬೇಕು. ಇದಾದ ನಂತರ ಮಂಗಳ ನೋಡಲು ಸಿಗುವುದಿಲ್ಲ ಎನ್ನಬಹುದು. ಇನ್ನೊಂದು ಗ್ರಹ ಶನಿ ಈಗಾಗಲೇ ಸಂಧ್ಯಾ ಪ್ರಕಾಶದಲ್ಲಿ ಮರೆಯಾಗಿ ಹೋಗಿದೆ. ಇದನ್ನು ನೋಡಲು ಇನ್ನೊಂದು ತಿಂಗಳು ಕಾಯಲೇಬೇಕು. ಗುರು ಗ್ರಹ ಕೂಡ ಪಶ್ಚಿಮದ ಅಂಚಿಗೆ ಓಡುತ್ತಿದೆ.

ಬೆಳಗಿನ ಜಾವದಲ್ಲಿ ಕಾಣುವ ಶುಕ್ರ ಜುಲೈ ೧೩-೧೫ರ ಅವಧಿಯಲ್ಲಿ ರೋಹಿಣಿಯ ಪಕ್ಕ ಹಾದು ಹೋಗುತ್ತದೆ. ಅದೇ ದಿನಗಳಲ್ಲಿ ಬಾಲಚಂದ್ರವೂ ಅದರ ಪಕ್ಕದಲ್ಲೇ ಕಾಣುವುದು. ಅಮಾವಾಸ್ಯೆಯ ನಂತರ ಸಂಜೆಯಲ್ಲಿ ಕಾಣುವ ಬಾಲಚಂದ್ರ ೧೯ರಂದು ಬುಧ ಗ್ರಹದ (ಮತ್ತು ಮಂಗಳ ಗ್ರಹದ) ಪಕ್ಕದಲ್ಲಿ ೨೧ರಂದು ಗುರುಗ್ರಹದ ಪಕ್ಕದಲ್ಲಿ ಕಾಣುವುದು. ಹೀಗೆ ಚಂದ್ರನ ಸಹಾಯದಿಂದ ಗ್ರಹಗಳನ್ನು ಗುರುತಿಸಬಹುದು.

ಎರಡರಂದು ಹುಣ್ಣಿಮೆ. ಅಂದು ಚಂದ್ರನ ಪಕ್ಕದಲ್ಲಿರುವ ಅಕ್ವಿಲಾ ಪುಂಜದ ನಕ್ಷತ್ರವೇ ಶ್ರವಣ. ಆದ್ದರಿಂದ ಈ ತಿಂಗಳ ಹೆಸರು ಶ್ರಾವಣ. ಆದರೆ ಈ ನಕ್ಷತ್ರ ಚಂದ್ರನಿಂದ ಸಾಕಷ್ಟು ದೂರದಲ್ಲಿದೆಯಲ್ಲವೇ ? ತಿಂಗಳ ಕೊನೆಯ ದಿನವೂ ಹುಣ್ಣಿಮೆ. ಅಂದು ಚಂದ್ರನ ಸ್ಥಾನವನ್ನು ಗಮನಿಸಿ. ಆಗಲೂ ಶ್ರವಣ ನಕ್ಷತ್ರದ ಪಕ್ಕವೇ ಚಂದ್ರನ ಸ್ಥಾನ. ಹೀಗೆ 'ಅಧಿಕ ಮಾಸ'ದ ಅಗತ್ಯ ಆಕಾಶದಲ್ಲಿ ಸ್ಪಷ್ಟವಾಗಿ ಕಾಣುತ್ತದೆ.

ಜುಲೈ ೨೭ರಂದು ಡೆಲ್ಟಾ ಅಕ್ವಾರಿಡ್ಸ್ ಎಂಬ ಹೆಸರಿನ ಉಲ್ಕಾವೃಷ್ಟಿಯ ಚಟುವಟಿಕೆ ಗರಿಷ್ಠವಾಗಿರುತ್ತದೆ.

ಸೂರ್ಯನಿಂದ ಭೂಮಿಯ ದೂರ ಗರಿಷ್ಠವಾಗಿರುವುದು ಜುಲೈ ಐದರಂದು. ೧೫೨, ೧೪೧, ೦೩೪ ಕಿ.ಮೀ.ಗಳು – ಚಂದ್ರದ ದೂರ ಗರಿಷ್ಠ ೪೦೬, ೧೯೨ ಕಿ.ಮೀ ಆಗುವುದು ಜುಲೈ ೧೪ರಂದು. ಆದ್ದರಿಂದ ಈ ಬಾರಿ ಅಮಾವಾಸ್ಯೆ(೧೭ರಂದು)ಯ ಭರತ-ಇಳಿತಗಳು ಗಮನಾರ್ಹವಾಗಿರುವುದಿಲ್ಲ. ಆದರೆ ಈ ವ್ಯತ್ಯಾಸವನ್ನು ಗಮನಿಸಲು ಮಾನ್‌ಸೂನ್‌ನ ಗಾಳಿ ಅವಕಾಶ ನೀಡೀತೇ ? ಎಂಬುದೇ ಸಮಸ್ಯೆ.

**ಜುಲೈ ಖಗೋಳ ದಿನಚರಿ**

೧ ಚಂದ್ರ-ಭೂಮಿ ದೂರ ಕನಿಷ್ಠ
೨ ೧೬:೩೯ಕ್ಕೆ ಹುಣ್ಣಿಮೆ. ಅಕ್ವಿಲಾ ಪುಂಜದ ಶ್ರವಣ ನಕ್ಷತ್ರದ ಸಮೀಪ ಚಂದ್ರನ ಸ್ಥಾನ
೪ (ಬೆಳಿಗ್ಗೆ) ಶುಕ್ರ-ರೋಹಿಣಿ ಸಮಾಗಮ
೫ ಭೂಮಿ - ಸೂರ್ಯರ ದೂರ ಗರಿಷ್ಠ
೯ ಚಾಂದ್ರಮಾಸದ ಕೊನೆಯ ಪಾದ ಚಂದ್ರೋದಯ ನಡುರಾತ್ರಿಯಲ್ಲಿ
೧೦ ಬುಧ-ಮಂಗಳ ಗ್ರಹಗಳ ನಡುವೆ ಕನಿಷ್ಠ ಕೋನ. (ಸಂಜೆ ದುರ್ಬೀನಿನ ಸಹಾಯದಿಂದ ಗಮನಿಸಿ)
೧೪ ಚಂದ್ರ-ಶುಕ್ರ ನಡುವೆ ಕನಿಷ್ಠ ಕೋನ
೧೭ ೧೬:೫೪ಕ್ಕೆ ಅಮಾವಾಸ್ಯೆ
೧೯ ಚಂದ್ರನ ಸ್ಥಾನ ಬುಧ-ಮಂಗಳಗಳ ನಡುವೆ
೨೧ ಗುರು-ಚಂದ್ರಗಳ ನಡುವೆ ಕನಿಷ್ಠ ಕೋನ
೨೫ ಚಾಂದ್ರಮಾಸದ ಮೊದಲ ಪಾದ, ಚಂದ್ರಾಸ್ತ ನಡುರಾತ್ರಿಗೆ
೨೭ ಬುಧ ಗ್ರಹದ ಗರಿಷ್ಠ ಕೋನೋನ್ನತಿ ೨೭° (ಸಂಜೆ ಪಶ್ಚಿಮದಲ್ಲಿ ಗುರುತಿಸಲು ಸದವಕಾಶ)
ಅಕ್ವಾರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೩೦ ಚಂದ್ರ-ಭೂಮಿ ದೂರ ಕನಿಷ್ಠ
೩೧ ಹುಣ್ಣಿಮೆ ೨೩:೩೫ಕ್ಕೆ

**ಡಾ|| ಬಿ. ಎಸ್. ಶೈಲಜಾ**

ಹೀಗೆ ಒಂದೇ ಕ್ಯಾಲೆಂಡರ್ ತಿಂಗಳಲ್ಲಿ ಎರಡು ಹುಣ್ಣಿಮೆಗಳು ಬಂದಾಗ ಪಾಶ್ಚಾತ್ಯರು ಎರಡನೆಯದನ್ನು ಬ್ಲೂಮೂನ್-ನೀಲಿ ಚಂದ್ರ ಎಂದು ಕರೆಯುತ್ತಾರೆ. ಈ ಬಗ್ಗೆ ಹಳೆಯ ದಾಖಲೆಗಳನ್ನು ಕೆದಕಿದ Sky and Telescope ಎಂಬ ನಿಯತಕಾಲಿಕದ ಸಂಪಾದಕ ವರ್ಗ, ಈ ''ದೋಷ''ಕ್ಕೆ ತಾನೇ ಹೊಣೆ ಎಂದು ಹೇಳಿಕೆ ಕೊಟ್ಟಿತು. ರೈತರು ಬಳಸುತ್ತಿದ್ದ ಹಳೆಯ ಕ್ಯಾಲೆಂಡರ್‌ಗಳಲ್ಲಿ ಈ ಹೆಸರು ಕಂಡಿತ್ತು. ಅಲ್ಲಿ ತಿಂಗಳುಗಳ ಲೆಕ್ಕ ಬೇರೆ. ಮಾರ್ಚ್ ೨೧ರಿಂದ ಏಪ್ರಿಲ್ ೨೧, ಮೇ ೨೧ರಿಂದ ಜೂನ್ ೨೧ – ಹೀಗೆ. ಈ ಅವಧಿಯಲ್ಲಿ (ಟ್ರಾಪಿಕಲ್ ಮಂತ್) ಎರಡು ಹುಣ್ಣಿಮೆಗಳು ಬಂದರೆ ಎರಡನೆಯದಕ್ಕೆ ನೀಲಿ ಚಂದ್ರ ಎಂದು ಹೆಸರಿತ್ತು. ಇದನ್ನು ಈ ಪತ್ರಿಕೆ ಕ್ಯಾಲೆಂಡರ್ ತಿಂಗಳು ಎಂದು ೪೦ರ ದಶಕದಲ್ಲಿ ಪ್ರಕಟಿಸಿದ್ದೇ ಮೂಲವಾಗಿ ಇಂದು ಎಲ್ಲೆಲ್ಲೂ ನೀಲಿ ಚಂದ್ರದ ವ್ಯಾಖ್ಯೆಯೇ ಬೇರೆಯಾಗಿ ಬಿಟ್ಟಿದೆ. ಈ ಬಗ್ಗೆ ಸಂಪಾದಕ ವರ್ಗ ಕ್ಷಮೆ ಕೋರಿದೆ.

## ಹಿನ್ನೋಟ

**ದಿಕ್ಕು ತಪ್ಪಿಸಿದ ಸಂಕ್ರಮಣ**

ಜೂನ್ ೮ರ ಸಂಕ್ರಮಣಕ್ಕೆ ದೊರಕಿದ ಅದ್ಭುತ ಸ್ವಾಗತ ಈಗ ಹಳೆಯ ವಿಷಯವಾಗಿದೆ. ರಾಜಕಾರಣಿಗಳ ಗುದ್ದಾಟವನ್ನು ಮೆಟ್ಟಿ ಪತ್ರಿಕೆಗಳ ಮುಖಪುಟವನ್ನೇ ಆಕ್ರಮಿಸಿದ ಈ ಸುದ್ದಿ ೧೮೭೪-೮೨ರಲ್ಲೂ ಇಂತಹುದೇ ಪ್ರತಿಕ್ರಿಯೆ ಮೂಡಿಸಿತ್ತು. ಆ ದಿನಗಳತ್ತ ಹಿನ್ನೋಟ ಹರಿಸಿದಾಗ ದೊರಕಿದ ಒಂದು ಸ್ವಾರಸ್ಯಕರವಾದ ಸಂಗತಿ ಹೀಗಿದೆ:

ಜೋಸೆಫ್ ಲೆವೆರಿಯರ್ (೧೮೧೧-೧೮೭೭) ಪ್ರತಿಭಾವಂತ ಖಗೋಳಜ್ಞ ಮತ್ತು ಗಣಿತಜ್ಞ. ಆತ ಮಾಡಿದ ಲೆಕ್ಕಾಚಾರಕ್ಕೆ ಅನುಗುಣವಾಗಿ ಹುಡುಕಾಟ ನಡೆಸಿದ ಬರ್ಲಿನ್ ವೀಕ್ಷಣಾಲಯದವರು ನೆಪ್ಚೂನ್ ಎಂಬ ಹೊಸ ಗ್ರಹವನ್ನು ಪತ್ತೆ ಮಾಡಿದ್ದೇ ತಡ, ಲೆವೆರಿಯರ್‌ನ ಕೀರ್ತಿ ಗಗನಕ್ಕೇರಿತು. ಕಾಗದ, ಪೆನ್ನು ಹೊರತಾಗಿ ಬೇರೆ ಯಾವ ಸಲಕರಣೆಯೂ ಇಲ್ಲದೆ ಕ್ಲಿಷ್ಟವಾದ ಲೆಕ್ಕ ಮಾಡಿ ನೆಪ್ಚೂನ್‌ನ ಅಸ್ತಿತ್ವವನ್ನು ಮಾತ್ರವಲ್ಲದೇ, ಅದು ಕಾಣಬಹುದಾದ ಜಾಗವನ್ನು ತಿಳಿಸಿಕೊಟ್ಟದ್ದು ಅದ್ಭುತವಲ್ಲದೇ ಮತ್ತೇನು ? ಹಾಗಾಗಿ ಆ ಹೊಗಳಿಕೆಗೆ ಆತ ಬಾಧ್ಯನೇ ಹೌದು.

ಈ ಮಧ್ಯೆ ಬುಧ ಗ್ರಹದ ಕಕ್ಷೆಯ ಲೆಕ್ಕಾಚಾರಗಳು ಎಡವುತ್ತಲೇ ಇದ್ದವು. ಲೆವೆರಿಯರ್ ಸಹ ಈ ಲೆಕ್ಕ ಮಾಡಿ ಇಲ್ಲಿ ಏನೋ ಎಡವಟ್ಟಾಗಿದೆ ಎಂದು ತಿಳಿದುಕೊಂಡಿದ್ದ. (ಈ ಸಮಸ್ಯೆಗೆ ಪರಿಹಾರ ದೊರಕಿದ್ದು ಬಹಳ ವರ್ಷಗಳ ನಂತರ – ಐನ್‌ಸ್ಟೈನ್ ಸಾಪೇಕ್ಷ ಸಿದ್ಧಾಂತವನ್ನು ಮಂಡಿಸಿದ ಮೇಲೆ). ನೆಪ್ಚೂನ್‌ನಂತೆ ಯಾವುದೋ ಕಾಣದ ಗ್ರಹದ ಕೈವಾಡ ಇರಬಹುದೇ ಎಂದು ಆಲೋಚಿಸಿದ ಲೆವೆರಿಯರ್ ಸೂರ್ಯ ಮತ್ತು ಬುಧ ಗ್ರಹಗಳ ನಡುವೆ ಹೊಸದೊಂದು ಗ್ರಹ ಇದೆ ಎಂದೂಹಿಸಿಕೊಂಡ. ಇದರಿಂದ ಬುಧದ ಕಕ್ಷೆಯ ಲೆಕ್ಕಗಳನ್ನು ಸರಿಪಡಿಸಲು ಪ್ರಯತ್ನಿಸಿದ.

ಈ ಸಂದರ್ಭದಲ್ಲಿ ಆತನಿಗೆ ಬಂದ ಪತ್ರವೊಂದು ವಿಶೇಷ ಸುದ್ದಿಯನ್ನು ಹೊತ್ತು ತಂದಿತು. ಹೊಸ ಗ್ರಹ ಪತ್ತೆ ಆಗಿಯೇಬಿಟ್ಟಿತು ಎಂದು ಹಿಗ್ಗಿದ ಆತ ಅಂದೇ ರೈಲು ಹತ್ತಿ ಹೊರಟ – ಪತ್ರ ಬರೆದಾತನನ್ನು ಸಂಧಿಸಲು.

ಎಡ್ಮಂಡ್ ಮೊಡೆಸ್ಟೆ ಲೆಸ್ಕರ್‌ಬಾಲ್ಟ್ (೧೮೧೪-೧೮೯೪) ಎಂಬಾತನೇ ಪತ್ರದ ಕರ್ತೃ. ಪ್ಯಾರಿಸಿನಿಂದ ಐವತ್ತು ಮೈಲಿ ದೂರದ ಒರ್ಗೆರೆ ಎಂಬ ಸಣ್ಣ ಹಳ್ಳಿಯಲ್ಲಿ ಆತ ವೈದ್ಯವೃತ್ತಿ ನಡೆಸಿದ್ದ. ಮೂರು ಮುಕ್ಕಾಲು ಅಂಗುಲ ವ್ಯಾಸದ ಪುಟ್ಟ ದೂರದರ್ಶಕದಿಂದ ಸೂರ್ಯನ ಬಿಂಬವನ್ನು ಮೂಡಿಸಿ ನೋಡುತ್ತಿರುವುದು ಆತನಿಗೊಂದು ಹವ್ಯಾಸ. ೧೮೪೫ರಲ್ಲಿ ಬುಧ ಸಂಕ್ರಮಣವನ್ನು ವೀಕ್ಷಿಸಿದ್ದು ಆತನ ತಲೆಯಲ್ಲಿ ಅಚ್ಚೊತ್ತಿತ್ತು. ೧೮೫೯ರ

ಮಾರ್ಚ್ ೨೬ರಂದು ಆತ ಸೂರ್ಯ ಬಿಂಬದ ಅಂಚಿನಲ್ಲಿ ಕಪ್ಪು ಚುಕ್ಕೆಯೊಂದನ್ನು ಗಮನಿಸಿದ. ಸೌರಕಲೆ ಇರಬಹುದೆಂದುಕೊಂಡನಾದರೂ ಅದರ ಚಲನೆಯ ಕಾರಣ ಅನುಮಾನ ಉಂಟಾಯಿತು. ಅದರ ಸ್ಥಾನ, ಚಲನೆಯ ವಿವರಗಳನ್ನು ಬರೆದಿಟ್ಟುಕೊಂಡ. ಈ ಮಧ್ಯೆ ರೋಗಿಯೊಬ್ಬನಿಗೆ ತುರ್ತಾಗಿ ಚಿಕಿತ್ಸೆ ನೀಡಬೇಕಾದ್ದರಿಂದ ಎದ್ದು ಹೋಗಬೇಕಾಯಿತು. ಹಿಂದಿರುಗಿ ಬಂದಾಗಲೂ ಆ ಚುಕ್ಕೆ ಕಂಡಿತು. ಸ್ಥಾನ ಬದಲಿಸಿತ್ತು. ಇನ್ನೇನು ಸೂರ್ಯನ ಅಂಚಿನಿಂದ ನಿರ್ಗಮಿಸುವುದರಲ್ಲಿತ್ತು. ಆತನ ಬಳಿ ಇದ್ದ ಪೆಂಡುಲಂ ಗಡಿಯಾರದಿಂದ ಈ ಸಂಕ್ರಮಣದ ಒಟ್ಟು ಅವಧಿ ೧ ಗಂಟೆ ೧೭ ನಿಮಿಷ ೯ ಸೆಕೆಂಡ್ ಎಂದು ಗುರುತಿಸಿದ. ರೋಗಿಗಳ ನಾಡಿ ಬಡಿತದ ಅಳತೆಗಾಗಿ ಆತ ಪೆಂಡುಲಂ ಗಡಿಯಾರ ಇಟ್ಟುಕೊಂಡಿದ್ದ.

ನಾಚಿಕೆಯ ಸ್ವಭಾವದ ಲೆಸ್ಕರ್‌ಬಾಲ್ಟ್ ಈ ಬಗ್ಗೆ ಯಾರಲ್ಲೂ ಹೇಳಲಿಲ್ಲ; ಚರ್ಚಿಸಲೂ ಇಲ್ಲ. ಎಂಟು ತಿಂಗಳುಗಳೇ ಉರುಳಿ ಹೋದವು. ಲೆವೆರಿಯರ್‌ನ ಊಹೆಯ ಗ್ರಹ ಬುಧಕ್ಕಿಂತ ಒಳಗಿನ ಕಕ್ಷೆಯಲ್ಲಿ ಸೂರ್ಯನನ್ನು ಸುತ್ತುತ್ತಿರಬಹುದೆಂಬ ಕಲ್ಪನೆಯ ಬಗ್ಗೆ ಲೇಖನವೊಂದನ್ನು ಓದಿದ. ತಾನು ಗಮನಿಸಿದ ಸಂಕ್ರಮಣ ಅದರದ್ದೇ ಎನಿಸಿತು. ಪತ್ರವೊಂದನ್ನು ಬರೆದ. ಮರುಟಪಾಲಿನ ಬದಲು ಖುದ್ದಾಗಿ ಲೆವೆರಿಯರ್ ಬಂದು ಬಾಗಿಲು ತಟ್ಟಿದಾಗ ಆತನಿಗೆ ದಿಗ್ಭ್ರಮೆಯೇ ಆಯಿತು.

ಲೆವೆರಿಯರ್-ಲೆಸ್ಕರ್‌ಬಾಲ್ಟ್ ನಡುವೆ ಸುಮಾರು ಐದು ಗಂಟೆಗಳ ಕಾಲ ಚರ್ಚೆ ನಡೆಯಿತು. ತನ್ನ ಕಲ್ಪನೆಯ ಗ್ರಹವೇ ಇದು ಎಂದು ಲೆವೆರಿಯರ್‌ಗೆ ಮನದಟ್ಟಾಯಿತು. ದಿಗ್ವಿಜಯ ಸಾಧಿಸಿದವನಂತೆ ಪ್ಯಾರಿಸ್‌ಗೆ ಹಿಂದಿರುಗಿ ಫ್ರೆಂಚ್ ಅಕಾಡೆಮಿಯಲ್ಲಿ ಈ ವೀಕ್ಷಣೆಯನ್ನು ಮಂಡಿಸಿದ. ಲೆಸ್ಕರ್‌ಬಾಲ್ಟ್‌ನನ್ನು ಹೊಗಳಿದ್ದೇ ಅಲ್ಲದೆ ಗೌರವ ಉಪಾಧಿಯನ್ನು ಕೊಡಿಸಿದ. ''ಲೆವೆರಿಯರ್ ಅವರ ಎರಡನೆಯ ದಿಗ್ವಿಜಯದ ಕಾರಣ ಕರ್ತೃ'' ಎಂದೆಲ್ಲ ವರದಿಯಾಯಿತು. ನಾಚಿಕೆಯಿಂದ ಮುದುಡಿದ ಲೆಸ್ಕರ್‌ಬಾಲ್ಟ್ ಅಕಾಡೆಮಿಗೆ ಬರಲೇ ಇಲ್ಲ.

ಹೊಸ ಗ್ರಹಕ್ಕೆ ವಲ್ಕನ್ ಎಂದು ಹೆಸರಿಡಲಾಯಿತು, ರೋಮನ್ನರ ಪುರಾಣಗಳಲ್ಲಿ ಅಗ್ನಿ ದೇವತೆಯ ಈ ಹೆಸರು ಸೂರ್ಯನಿಗೆ ಅತಿ ಸಮೀಪದ ಗ್ರಹಕ್ಕೆ ತಕ್ಕುದಾಗಿಯೇ ಇತ್ತು.

ಫ್ರೆಂಚರು ಸಂಭ್ರಮದಿಂದ ಕುಣಿದಾಡಿದ್ದು ಹಾಗಿರಲಿ. ನೆಪ್ಚೂನ್‌ನ ಆವಿಷ್ಕಾರವನ್ನು ಅನಾಯಾಸವಾಗಿ ಬಿಟ್ಟುಕೊಟ್ಟಿದ್ದ ಬ್ರಿಟಿಷರು (ಜಾನ್‌ಕೌಚ್ ಆಡಮ್ಸ್ ಸಹ ಲೆವೆರಿಯರ್ ಮಾಡಿದ್ದ ಲೆಕ್ಕಗಳನ್ನೇ ಮಾಡಿ ಅದೇ ಫಲಿತಾಂಶ ಪಡೆದಿದ್ದ. ಆದರೆ ಅದನ್ನು ಗಂಭೀರವಾಗಿ ತೆಗೆದುಕೊಳ್ಳದೇ ವೀಕ್ಷಣಾಲಯಗಳು ನೆಪ್ಚೂನ್‌ಅನ್ನು ಹುಡುಕುವ ಪ್ರಯತ್ನವನ್ನೇ ಮಾಡಲಿಲ್ಲ) ಇಂಗು ತಿಂದ ಮಂಗನಂತಾಗಿದ್ದರು. ಅಮೆರಿಕದಲ್ಲಿಯೂ ಈ ಬಗ್ಗೆ ಗುಲ್ಲೆದ್ದಿತ್ತು. ''ದೊಡ್ಡ ದೊಡ್ಡ ದೂರದರ್ಶಕಗಳಿದ್ದು ಹವ್ಯಾಸಿ ವೀಕ್ಷಕನಿಗೆ ಆವಿಷ್ಕಾರದ ಅವಕಾಶವನ್ನು ಬಿಟ್ಟುಕೊಟ್ಟವರು ನಿದ್ರಿಸುತ್ತಾ ಕಾಲ ಕಳೆಯುತ್ತಿರುವ ಸೋಮಾರಿಗಳು'' ಎಂದು ಪತ್ರಿಕೆಗಳು ಸಂಪಾದಕೀಯದಲ್ಲಿ ಬರೆದವು.

ಲೆಸ್ಕರ್‌ಬಾಲ್ಟ್‌ನ ವೀಕ್ಷಣೆಯ ಆಧಾರದ ಮೇಲೆ ಲೆವೆರಿಯರ್ ವಲ್ಕನ್‌ನ ಕಕ್ಷೆಯ ವಿವರಗಳನ್ನೂ ಲೆಕ್ಕ ಹಾಕಿಬಿಟ್ಟ. ೧೯ ದಿನಗಳಲ್ಲಿ ಅದು ಸೂರ್ಯನನ್ನು ಸುತ್ತಿ ಬರುತ್ತದೆ. ಬುಧ ಕಕ್ಷೆಗಿಂತಲೂ ಒಳಗಿನ ಕಕ್ಷೆಯಲ್ಲಿ ಕೇವಲ ೦.೧೪೩ ಖ. ಮಾ. ದೂರದಲ್ಲಿ ಸುತ್ತುತ್ತಿದೆ ಎಂದಾತ ಪ್ರಕಟಿಸಿದ.

ಈಗ ಅನೇಕ ಖಗೋಳಜ್ಞರು ಇದ್ದಕ್ಕಿದ್ದಂತೆ ತಾವೂ ಅದನ್ನು ಹಿಂದೆಯೇ ಗಮನಿಸಿದ್ದುದಾಗಿ ಹೇಳಿಕೊಳ್ಳತೊಡಗಿದರು. ಕೆಲವರಿಗೆ ತಾರೀಖು ಮರೆತುಹೋಗಿತ್ತು. ಕೆಲವರಿಗೆ ಗುರುತು ಹಾಕಿಕೊಳ್ಳುವುದೇ ಮರೆತುಹೋಗಿತ್ತಂತೆ.

ಆ ಮುಂದಿನ ಅನೇಕ ಸೂರ್ಯಗ್ರಹಣಗಳಲ್ಲಿ ವಲ್ಕನ್‌ಅನ್ನು ಹುಡುಕುವುದೇ ಮುಖ್ಯ ಕಾರ್ಯಕ್ರಮವಾಗಿತ್ತು. ಐನ್‌ಸ್ಟೈನ್‌ರ ಸಾಪೇಕ್ಷ ಸಿದ್ಧಾಂತ ಬುಧ ಗ್ರಹದ ಕಕ್ಷೆಯ ವೈಚಿತ್ರ್ಯವನ್ನು ಸಮರ್ಪಕವಾಗಿ ವಿವರಿಸಿದ ಮೇಲೆ ವಲ್ಕನ್ ಎಂಬ ಹೆಸರು ಅಡಗಿಹೋಯಿತು.

ಇಂದಿನ ಬಾಹ್ಯಾಕಾಶಯುಗದಲ್ಲಿ ಬುಧ ಗ್ರಹಕ್ಕೂ ಸೂರ್ಯನಿಗೂ ನಡುವೆ ಹರಡಿರುವ ಸಣ್ಣ ತುಣುಕುಗಳನ್ನು ಹುಡುಕುವ ಪ್ರಯತ್ನ ಆರಂಭವಾಗಿದೆ. ಇವಕ್ಕೆ ವಲ್ಕನೈಡ್ಸ್ ಎಂಬ ಹೆಸರಿಟ್ಟಿದ್ದಾರೆ.

ಲೆಸ್ಕರ್‌ಬಾಲ್ಟ್ ೧೮೮೨ರ ಶುಕ್ರ ಸಂಕ್ರಮಣವನ್ನು ಯಶಸ್ವಿಯಾಗಿ ವೀಕ್ಷಿಸಿದ. ಮುಂದೆ ಆತನ ಹೆಸರು ಮರೆತೇಹೋಯಿತು.

ಆತ ತನ್ನ ವೀಕ್ಷಣೆಗಳನ್ನು ಪ್ರಾಮಾಣಿಕವಾಗಿ ಬರೆದಿಟ್ಟ. ಹಾಗಾದರೆ ೧೮೫೯ರ ಮಾರ್ಚ್ ೨೬ರಂದು ಆತ ಕಂಡದ್ದೇನು ?

ಇದಕ್ಕೆ ಉತ್ತರ ಇನ್ನೂ ದೊರೆತಿಲ್ಲ. (ಸಾಧಾರ)

ಡಾ॥ ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

## ಕಾಗೆಯಲ್ಲಿದ್ದ ಬುದ್ಧ

ಕೋಗಿಲೆಯ ಕುಹು.... ಕುಹೂ.... ಮೋಡಿ ಈ
ಕವಿಯಿಂದ ಆ ಜನಸಮೂಹವ ಸೆಳೆದು ನಿಲ್ಲಿಸಿರಲು

ಅಲ್ಲಿಗೆ ಸಿಲುಕದ ಕಾಗೆ ಹಾರಿ
ಮಾವಿನ ಮರದ ಚಿಗುರ ಕಂಕಳುವಲ್ಲಿದ್ದ
ಗೂಡಿಗೆ ಬಂದು ಕಿವಿ ಮುಚ್ಚಿಕೊಂಡಿತು.

ಅಮ್ಮನಿಂದ ಗುಟುಕು ಕೂಳುಂಡ ಮರಿಗಳೆಲ್ಲ
ಕೇಳಿದವು ಯಾಕಮ್ಮ ಕಿವಿ ಮುಚ್ಚಿಕೊಂಡಿದ್ದಿಯಾ !
ಶ್ರಮದ ಪರಿಮಳ ಇಲ್ಲದ ಆ ಕೋಗಿಲೆಯ
ಮಧುರ ದನಿಯ ಬರಡುತನಕ್ಕೆ ಬೆಚ್ಚಿ ಎಂದಿತು.
ಜೊತೆಗೆ ಎಂದಿತು :

ಒಳಗಿನಿಂದ ಹೊರಕ್ಕೆ ಚಾಚಿಕೊಳ್ಳಬೇಕು ಹಸಿರು
ಮರದ ಎರಡೂ ತುದಿಯ ಜೀವದ ಹಾಗೆ
ನೆಲ ಮುಗಿಲ ಮಳೆಯ ವಿನ್ಯಾಸದ ಹಾಗೆ
ಹೊರಗಿನಿಂದ ಹೊರಕ್ಕೆ ಕೋಗಿಲೆಯಂತೆ ನೆಲ
ರಹಿತವಾಗಿ ಟಿಸಿಲೊಡೆದರೆ ಆಡಿಕೊಳ್ಳುತ್ತಾರೆ
ತ್ರಿಶಂಕುಗಳೆಂದು

ಮರಿಗಳೊಂದಿಗೆ ಇದ್ದ ಆ ಕೋಗಿಲೆಯ
ಮರಿಯೂ ಅಮ್ಮನ ಅನುಭವದ ಹಿತ ನುಡಿಗಳನ್ನು
ಕೇಳಿಸಿಕೊಳ್ಳುತ್ತಿತ್ತು.

ಅದೆಷ್ಟೋ ತಲೆಮಾರುಗಳಿಂದ ಎಂಬಂತೆ

ಮೂರ್ನಾಡು ರಾಮಸ್ವಾಮಿ
ಎಲ್ಐಸಿ ಆಫೀಸ್ ಬಳಿ, ಆರ್.ಸಿ. ರಸ್ತೆ
ಹೊಸ ಬಡಾವಣೆ, ಮಡಿಕೇರಿ - ೫೭೧ ೨೦೧

**೧೫೦೩ರಲ್ಲಿ ಪೂರ್ಣವಾದ ಈ ಚಿತ್ರವು ಮಿಲಾನ್‌ನ ದೊರೆಸಾನಿಯ ಚಿತ್ರವೇ ಆದರೂ ಇದಕ್ಕೆ ರೂಪದರ್ಶಿಯಾಗಿದ್ದಾಕೆ 'ಮೊನಾ(ಮೆಡೊನ್ನಾ ಎಂಬ ಹೆಸರಿನ ಕಿರುನಾಮ)ಲಿಸಾ ಗೆರಾರ್ಡಿನಿ' ಎಂಬ ಗೃಹಿಣಿ. ಈ ಚಿತ್ರ ರಚನೆಯ ಕಾಲದಲ್ಲಿ ಲಿಯೊನಾರ್ಡೊ ತನ್ನ ಟಿಪ್ಪಣಿಯಲ್ಲಿ ಭಾವಚಿತ್ರ ರಚನೆಯ ಬಗ್ಗೆ ಬರೆಯುತ್ತಾ, 'ಕಲಾವಿದನು ರೂಪದರ್ಶಿಯ ಮನಸ್ಸಿನ ಭಾವನೆಗಳನ್ನು ತೆರೆದು ತೋರಿಸುವಂತೆ ಚಿತ್ರರಚನೆ ಮಾಡಬೇಕು' ಎಂದು ಅಭಿಪ್ರಾಯಪಟ್ಟಿದ್ದಾನೆ. ಆದರೆ ಆತನು ಚಿತ್ರಿಸಿದ ಮೊನಾಲಿಸಾಳ ಮುಖದಲ್ಲಿರುವ ಮುಗುಳ್ನಗೆಯು ಮಾತ್ರ ಇಂದಿಗೂ ಅತ್ಯಂತ ನಿಗೂಢವಾಗಿಯೇ ಇದೆ ಎಂದು ಕಲಾತಜ್ಞರ ಹೇಳಿಕೆ.**



**ಮೊನಾಲಿಸಾ**

# ಲಿಯೊನಾರ್ಡೊ ಡ-ವಿನ್ಸಿ

ವಿಶ್ವ ವಿಖ್ಯಾತ ಕಲಾವಿದರ ಮಾತು ಬಂದಾಗ, ಪ್ರಪಂಚದ ಯಾವುದೇ ದೇಶದಲ್ಲಿಯಾಗಲೀ, ಬಹುತೇಕ ಜನರ ಮನಸ್ಸಿಗೆ ಒಡನೆಯೇ ಬರುವ ಹೆಸರೆಂದರೆ 'ಲಿಯೊನಾರ್ಡೊ-ಡ-ವಿನ್ಸಿ'. ಈತನ ಸಮಕಾಲೀನ ಹಾಗೂ ಪ್ರಖ್ಯಾತ ಕಲಾವಿದರೊಡನೆ ಹೋಲಿಸಿ ನೋಡಿದಾಗ ಲಿಯೊನಾರ್ಡೊ ರಚಿಸಿದ ಕಲಾಕೃತಿಗಳು ಬೆರಳೆಣಿಕೆಯಷ್ಟೇ ಆದರೂ, ಕಲಾವಿದರ ಪಟ್ಟಿಯಲ್ಲಿ ಈತನು ಅಗ್ರಗಣ್ಯನೆಂಬುದರಲ್ಲಿ ಸಂದೇಹವಿಲ್ಲ.

೬೭ ವರುಷಗಳ (೧೪೫೨-೧೫೧೯) ತನ್ನ ಜೀವಿತದಲ್ಲಿ ಲಿಯೊನಾರ್ಡೊ ಸಾಧಿಸಿದುದು ಅಪಾರ. ಕಲೆ ಒಂದೇ ಅಲ್ಲದೆ ಈತ ಹಲವಾರು ಕ್ಷೇತ್ರಗಳಲ್ಲಿ ಅಮೋಘ ಸಾಧನೆಗಳನ್ನು ಮಾಡಿದ್ದರೂ, ಲೋಕವು ಈತನನ್ನು ಮೊದಲು ಸ್ವೀಕರಿಸುವುದು ಕಲಾವಿದನೆಂದೇ.

ಇಟಲಿಯ ವಿನ್ಸಿ ನಗರದ ನೋಟರಿ 'ಪಿಯೆರೊ-ಡ-ವಿನ್ಸಿ'ಯು ಮದುವೆಗೆ ಮುಂಚೆಯೇ ಅಕ್ರಮ ಸಂಬಂಧವಿರಿಸಿಕೊಂಡಿದ್ದ ಕ್ಯಾಟರಿನಾ ಎಂಬ ಹೆಸರಿನ ಹಳ್ಳಿಯ ಮುಗ್ಧ ಹೆಂಗಸಿನ ಹೊಟ್ಟೆಯಲ್ಲಿ ಲಿಯೊನಾರ್ಡೊ ಜನ್ಮ ತಾಳಿದ.

ಚಿಕ್ಕಂದಿನಿಂದಲೇ ಬಾಲಕ ಲಿಯೊನಾರ್ಡೊ ತನ್ನ ಹಳ್ಳಿಯ ಸುಂದರ ವಾತಾವರಣಕ್ಕೆ ಮಾರುಹೋಗಿ ಅಲ್ಲಿನ ಮನಮೋಹಕ ದೃಶ್ಯಗಳನ್ನು ಸವಿಯುತ್ತಾ ಅಡ್ಡಾಡುತ್ತಾ ಪ್ರಾಣಿಶಾಸ್ತ್ರ, ಭೂಗರ್ಭಶಾಸ್ತ್ರ, ಹಕ್ಕಿಗಳ ಹಾರಾಟ, ಸೂರ್ಯನ ನೆಳಲು ಬೆಳಕುಗಳ ವಿನ್ಯಾಸ, ನೀರಿನ ಅಲೆಗಳ ರಚನೆ, ಹೀಗೆ ಇನ್ನೂ ಹಲವಾರು ಗಹನವಾದ ವಿಷಯಗಳ ಬಗ್ಗೆ ಚಿಂತಿಸುತ್ತಾ ಕಾಲ ಕಳೆಯುತ್ತಿದ್ದ. ಇತರ ಸಮ ವಯಸ್ಕರಂತೆ ಈತನೂ ಓದು, ಬರೆಹ, ಗಣಿತ ಹಾಗೂ ಲ್ಯಾಟಿನ್ ಭಾಷೆಗಳನ್ನು ಕಲಿತ. ಕಡೆಯವರೆಗೂ ತಾನು ಲ್ಯಾಟಿನ್ ಭಾಷೆಯಲ್ಲಿ ಪಾಂಡಿತ್ಯವನ್ನು ಪಡೆಯಲಿಲ್ಲವೆಂಬ ಕೊರಗು ಈತನಿಗೆ ಇದ್ದಿತು. ಲಿಯೊನಾರ್ಡೊವಿನ ಬರವಣಿಗೆಯು ವಿಶೇಷವೂ ವಿಚಿತ್ರವೂ ಆಗಿದ್ದಿತು. ಬಲದಿಂದ ಎಡಕ್ಕೆ ಬರೆಯುತ್ತಾ, ಕನ್ನಡಿಯ ಮುಂದೆ ಇಟ್ಟಾಗ ಮಾತ್ರ ಸರಿಯಾಗಿ ಓದಲು ಸಾಧ್ಯವಾಗುವಂತೆ ಅಕ್ಷರಗಳನ್ನು ಬಹು ಸುಂದರವಾದ ರೀತಿಯಲ್ಲಿ ಬರೆಯುತ್ತಿದ್ದ ಲಿಯೊನಾರ್ಡೊ. ಹೀಗೇಕೆ ಬರೆಯುತ್ತಿದ್ದನೆಂಬುದಕ್ಕೆ ಸರಿಯಾದ ಕಾರಣ ಇಂದಿಗೂ ನಿಗೂಢವಾಗಿಯೇ ಇದೆ.



ಹದಿನೈದು ವರುಷದ ಲಿಯೊನಾರ್ಡೊನನ್ನು ಇವನ ತಂದೆ ಫ್ಲಾರೆನ್ಸ್ ಪಟ್ಟಣಕ್ಕೆ ಕರೆದುಕೊಂಡು ಹೋಗಿ ಆಗಿನ ಕಾಲದ ಅತ್ಯಂತ ಪ್ರಸಿದ್ಧ ಕಲಾವಿದನಾದ 'ಆಂಡ್ರಿಯಾ-ಡೆಲ್-ವೆರೊಕ್ಕಿಯೋ'ನ ಬಳಿ ತರಬೇತಿಗಾಗಿ ನಿಯಮಿಸಿದನು. ತರಬೇತಿ ಮುಗಿಸಿ, ಆಗಿನ ಪದ್ಧತಿಯಂತೆ ಲಿಯೊನಾರ್ಡೊ 'ಸೆಯಿಂಟ್ ಲ್ಯೂಕ್ ಪೆಯಿಂಟರ್ಸ್ ಅಕಾಡೆಮಿ'ಯ ಸದಸ್ಯತ್ವ ಗಳಿಸಿದನಾದರೂ, ಉಳಿದ ವಿದ್ಯಾರ್ಥಿಗಳಂತೆ ಒಡನೆಯೇ ತನ್ನದೇ ಸ್ಟುಡಿಯೋ ಪ್ರಾರಂಭಿಸಲಿಲ್ಲ. ನಾಲ್ಕೈದು ವರುಷಗಳು ತನ್ನ ಗುರುವಿನ ಬಳಿಯೇ ಇದ್ದು ಆತನಿಗೆ ಸಹಾಯ ಮಾಡುತ್ತಲೂ, ಇತರ ಹಿರಿಯ ವಿದ್ಯಾರ್ಥಿಗಳಿಂದ ಅನೇಕ ವಿಷಯಗಳನ್ನು ಕಲಿಯುತ್ತಲೂ ಇದ್ದ ಲಿಯೊನಾರ್ಡೊ, ಕಡೆಗೆ ೧೪೭೬ರಲ್ಲಿ ತನ್ನದೇ ಸ್ಟುಡಿಯೋ ಆರಂಭಿಸಿದ. ಫ್ಲಾರೆನ್ಸ್‌ನ ಉತ್ತಮ ಕಲಾಕಾರರಲ್ಲಿ ಒಬ್ಬನೆಂದು ಹೆಸರು ಸಂಪಾದಿಸಿದ್ದರೂ ಲಿಯೊನಾರ್ಡೊ ತನ್ನ ೨೯ನೇ ವಯಸ್ಸಿನಲ್ಲಿ ನಡೆದ ಒಂದು ಘಟನೆಯಿಂದ ತುಂಬ ನೊಂದುಕೊಂಡ. ನಾಲ್ಕನೆಯ ಪೋಪ್ (ಪೋಪ್ ಸೆಕ್ಸ್‌ಟಸ್-೪) ಫ್ಲಾರೆನ್ಸ್ ನಗರದ ದೊರೆಗಳಾದ ಮೆಡಿಚಿ ಕುಟುಂಬದವರ ಸಲಹೆಯ ಮೇರೆಗೆ ಪ್ರತಿಭಾವಂತ ಕಲಾವಿದರನೇಕರನ್ನು ೧೪೮೧ರಲ್ಲಿ ವಾಟಿಕನ್ ನಗರದಲ್ಲಿ ಕೆಲಸ ಮಾಡಲು ಕರೆಸಿದನು. ಬೊಟ್ಟಿಸೆಲ್ಲಿ, ಗಿರ್ಲಾಂಡಿಯೊ, ಸಿನೊರೆಲ್ಲಿ, ಪೆರುಗಿನೊ, ಪಿಂಟೊರಿಕ್ಕಿಯೊ, ಒಸೆಲ್ಲಿ, ಮುಂತಾದವರೆಲ್ಲರೂ ಕರೆಸಲ್ಪಟ್ಟರು. ಆದರೆ ಆ ಪ್ರತಿಭಾವಂತ ಕಲಾವಿದರ ಪಟ್ಟಿಯಲ್ಲಿ ಲಿಯೊನಾರ್ಡೊವಿನ ಹೆಸರು ಇರಲಿಲ್ಲ. ಇನ್ನು ಮೆಡಿಚಿ ಕುಟುಂಬದವರಿಂದ ತನಗೆ ಯಾವ ರೀತಿಯ ಸಹಾಯವಾಗುವುದಿರಲಿ, ಕೆಡುಕೇ ಆಗಬಹುದೆಂದು ಮನಗಂಡ ಲಿಯೊನಾರ್ಡೊ, ನೊಂದ

ಮನಸ್ಸಿನಿಂದ ಫ್ಲಾರೆನ್ಸ್ ನಗರವನ್ನು ತೊರೆದು ೧೪೮೨ರಲ್ಲಿ ಮಿಲಾನ್ ನಗರಕ್ಕೆ ಹೊರಟುಹೋದ.

ಮಿಲಾನ್ ನಗರಕ್ಕೆ ಆಗಮಿಸಿ, ಅಲ್ಲಿ 'ಲುದೊವಿಕೊ ಫೋರ್‌ಜ಼ಾ' (ಈತನನ್ನು 'ಮೂರ್' ಎಂದೂ ಕರೆಯುತ್ತಿದ್ದರು)ನ ಆಶ್ರಯದಲ್ಲಿ ಲಿಯೊನಾರ್ಡೊ ಹಲವಾರು ವರುಷಗಳು ಇದ್ದ. ಅಂದಿನ ದಿನಗಳಲ್ಲಿ ಫೋರ್‌ಜ಼ಾನಿಗಾಗಿ ಈತನು ಮಾಡದ ಕೆಲಸವಿಲ್ಲ. ಆತನ ಪ್ರೇಯಸಿ 'ಸಿಸಿಲಿಯಾ ಗ್ಯಾಲ್ಲೆರಾನಿ'ಯ ಭಾವಚಿತ್ರ ರಚನೆಯಿಂದ ಹಿಡಿದು ಆತನ ಕುಟುಂಬದ ಭವ್ಯ ಸೌಧದ ಸ್ನಾನದ ಮನೆಗಳ ವಿನ್ಯಾಸ, ನಗರದ ಕಾಲುವೆಗಳ ನಕ್ಷೆ, ಯುದ್ಧದಲ್ಲಿ ಉಪಯೋಗಿಸ ಬಹುದಾದ, ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸ ಬಹುದಾದಂತಹ ಸೇತುವೆಯ ರಚನೆ, ಕೋಟೆಯ ಸುತ್ತಲಿದ್ದ ಕಂದಕದ ನೀರು ಹೊರತೆಗೆಯುವ ನವೀನ ಮಾದರಿಯ ಪಂಪ್ ರಚನೆ – ಹೀಗೆ ಹತ್ತು ಹಲವು ಸೃಜನಶೀಲ ಕಾರ್ಯಗಳಲ್ಲಿ ನಿರತನಾದ. ಈ ರೀತಿಯ ವಿವಿಧ ಕೆಲಸಗಳ ಜವಾಬ್ದಾರಿಯನ್ನು ಹೊತ್ತುಕೊಂಡಿದ್ದ ರಿಂದಲೇ ಲಿಯೊನಾರ್ಡೊವಿನ ಬಹುಮುಖ ಪ್ರತಿಭೆಯು ಬೆಳಕಿಗೆ ಬರಲು ಸಾಧ್ಯವಾಯಿತೆಂಬುದರಲ್ಲಿ ಸಂದೇಹವಿಲ್ಲ.

ಪಕ್ಷಿಗಳ ಹಾರಾಟದ ಕ್ರಮವನ್ನು ಆಳವಾಗಿ ಅಭ್ಯಸಿಸಿದ್ದ ಲಿಯೊನಾರ್ಡೊ ಒಂದು ಹಾರುವ ಯಂತ್ರದ ನಕ್ಷೆಯನ್ನು ತಯಾರಿಸಿದನು. ಮೊಟ್ಟ ಮೊದಲನೆಯ ಬಾರಿಗೆ ಹೆಲಿಕಾಪ್ಟರಿನಂತೆ ನೇರವಾಗಿ ಗಾಳಿಯಲ್ಲಿ ಮೇಲಕ್ಕೇರಬಲ್ಲ ಯಂತ್ರದ ನಕ್ಷೆಯ ರಚನೆಯ ಕೀರ್ತಿ ಈತನಿಗೆ ಸಲ್ಲಬೇಕು. ಆದರೆ, ಅಂದಿನ ಕಾಲದಲ್ಲಿ ಹಗುರವಾದ ಇಂಜಿನ್ನಿನ ಆವಿಷ್ಕಾರವಾಗಿಲ್ಲದೇ ಇದ್ದುದರಿಂದ ಅವನ ಯೋಜನೆಯು ನಕ್ಷೆಯ ರೂಪದಲ್ಲಿಯೇ ಉಳಿಯಿತು. ಆದರೂ ಒಮ್ಮೆ ಲಿಯೊನಾರ್ಡೊ ತಾನೇ ಖುದ್ದಾಗಿ ಒಂದು ಯಂತ್ರದ ಸಹಾಯದಿಂದ ಹಾರುವ ಪ್ರಯತ್ನ ಮಾಡಿದ್ದ. ರಹಸ್ಯವಾಗಿಯೇ ತಯಾರಿಸಿದ್ದ ಈಗಿನ ಗ್ಲೈಡರ್ ಯಂತ್ರವನ್ನು ಹೋಲುವ, ಈ ಉಪಕರಣವನ್ನು ಎತ್ತರವಾದ ಒಂದು ಸೌಧದ ಮೇಲಿನಿಂದ ಕೆಳಕ್ಕೆ ಹಾರಿ ಬಿಡಲಾಯಿತು – ಅದೂ ಲಿಯೊನಾರ್ಡೊವಿನೊಡನೆ !! ಆದರೆ ಈ ಪ್ರಯೋಗವು ಯಶಸ್ವಿಯಾಗದೆ ಹೋದುದರಿಂದ, ಈತ ಮತ್ತೆಂದೂ ಹಾರುವ ಪ್ರಯತ್ನ ಮಾಡಲಿಲ್ಲವಂತೆ !!

ಲಿಯೊನಾರ್ಡೊ ತನ್ನ ಗುರು ವೆರಾಕ್ಷಿಯೋನ ಬಳಿ ಕೆಲಸ ಮಾಡುತ್ತಿದ್ದಾಗ ವೆರಾಕ್ಷಿಯೋ ಒಮ್ಮೆ 'ಬ್ಯಾಪ್ಟಿಸಮ್ ಆಫ್ ಕ್ರೈಸ್ಟ್' ಎಂಬ ಕಲಾಕೃತಿ ಯೊಂದನ್ನು ರಚಿಸುತ್ತಿದ್ದನು. ಆತನ ಕೆಲವು ಶಿಷ್ಯರೂ ಕೆಲಸದಲ್ಲಿ ಸಹಾಯ ಮಾಡುತ್ತಿದ್ದರು. ಲಿಯೊನಾರ್ಡೊನ ಪ್ರತಿಭೆಯನ್ನು ಗಮನಿಸಿದ್ದ ವೆರಾಕ್ಷಿಯೋ, ಚಿತ್ರದಲ್ಲಿನ ಮುಖ್ಯ ಭಾಗಗಳಲ್ಲಿ ಒಂದಾದ ದೇವತೆಯೊಬ್ಬಳ ಚಿತ್ರವನ್ನು ಬಿಡಿಸುವ ಕೆಲಸವನ್ನು ಅವನಿಗೆ ಕೊಟ್ಟ. ಇಡೀ ಕಲಾಕೃತಿಯಲ್ಲಿ ದೇವತೆಯ ಚಿತ್ರವೇ ಅತೀ ಸುಂದರವಾಗಿದೆ ಎಂದು ಇಂದಿಗೂ ಅನೇಕರು ಅಭಿಪ್ರಾಯಪಡುತ್ತಾರೆ.



ಅತ್ಯಂತ ಸೂಕ್ಷ್ಮಮತಿಯೂ, ವೈಜ್ಞಾನಿಕ ಹಾಗೂ ವೈಚಾರಿಕ ಆಲೋಚನೆಗಳೂ ಉಳ್ಳವನಾಗಿದ್ದ ಈತ ಇನ್ನೂ ಅನೇಕ ಆವಿಷ್ಕಾರಗಳನ್ನು ಮಾಡಿದ್ದ. ಅವುಗಳಲ್ಲಿ ಮುಖ್ಯವಾದುವು: ಸ್ಕ್ರೂ ತಯಾರು ಮಾಡುವ ಯಂತ್ರ, ಬುಲ್‌ಡೋಜರ್, ದಿಕ್ಸೂಚಿ, ನೀರಿನಲ್ಲಿ ಮುಳುಗಲು ಬೇಕಾದ ಸ್ಕ್ಯೂಬಾ ಡೈವಿಂಗ್ ಉಪಕರಣದ ಕರಡು ಮಾದರಿ, ದಾರ ತೆಗೆಯುವ ಸ್ಪಿನ್ನಿಂಗ್ ಯಂತ್ರ ಇತ್ಯಾದಿ. ನೀರಿನೊಳಗೆ ಸಂಚರಿಸುವ ಸಬ್‌ಮೆರೀನಿನ ನಕ್ಷೆಯನ್ನು ತಯಾರಿಸಿದ್ದರೂ, ಅವನೇ ಅದನ್ನು ನಾಶಪಡಿಸಿದನಂತೆ. 'ಮುಂಬರುವ ಕಾಲದಲ್ಲಿ ಮಾನವನು ಎಷ್ಟು ದುಷ್ಟನಾಗುತ್ತಾನೆಂದರೆ, ಈ ರೀತಿಯ ಉಪಕರಣಗಳ ನಕ್ಷೆಯನ್ನು ಉಳಿಸಿಡುವುದೂ ತೀರ ಅಪಾಯಕರ' ಎಂದು ತನ್ನ ಟಿಪ್ಪಣಿಯಲ್ಲಿ ಬರೆದಿದ್ದಾನೆ! ಫಾಸಿಲ್‌ಗಳ ಅಸ್ತಿತ್ವ, ಭೂಮಿಯು ವಿಶ್ವದ ಕೇಂದ್ರವಲ್ಲ ಎಂಬ ಸತ್ಯ, ಭೂಮಿಯೇ ಸೂರ್ಯನ ಸುತ್ತ ಸುತ್ತುವ ಒಂದು ಗ್ರಹವೆಂಬ ಗ್ರಹಿಕೆ, ನಕ್ಷತ್ರಗಳು ಭೂಮಿಗಿಂತ ಬಹಳ ದೊಡ್ಡ ಅಸ್ತಿತ್ವಗಳು, ಸೂರ್ಯನು ಈ ನಕ್ಷತ್ರಗಳಲ್ಲಿ ಒಂದು ಎಂಬ ದೂರದರ್ಶಿ ಜ್ಞಾನ – ಇಂಥವೇ ಇನ್ನೂ ಅನೇಕ ಆವಿಷ್ಕಾರಗಳ ಹಾಗೂ ಹಲವಾರು ವರುಷಗಳ ನಂತರದಲ್ಲಿ ಕಂಡುಹಿಡಿಯಲ್ಪಟ್ಟ ಸತ್ಯಗಳ ಸಮಗ್ರ ಮಹಾಪೂರವೇ ಲಿಯೊನಾರ್ಡೊ ಬರೆದಿಟ್ಟು ಹೋಗಿರುವ ೭೦೦೦ ಪುಟಗಳ ಟಿಪ್ಪಣಿಯಲ್ಲಿ ದೊರಕುತ್ತವೆ. ಇವಲ್ಲದೆ ಸ್ಪ್ರಿಂಗ್‌ನ ಶಕ್ತಿಯಿಂದ ಚಲಿಸುವ ಕಾರು, ವಾಹನಗಳಲ್ಲಿ ಉಪಯೋಗವಾಗುವ ಸ್ಪ್ರಾಕೆಟ್ ಮತ್ತು ಚೈನ್, ಚಂಡಮಾರುತಗಳ ಚಲನೆ, ಮಾನವ ದೇಹದ ವಿವಿಧ ಭಾಗಗಳ ರಚನೆ, ಸ್ತ್ರೀಯ ಗರ್ಭದಲ್ಲಿರುವ ಭ್ರೂಣ, ಪ್ಯಾರಾಶೂಟ್, ಅಗ್ನಿಪರ್ವತಗಳ ರಚನೆ, ಹಲವಾರು ಸಂಗೀತ ವಾದ್ಯಗಳು, ಪ್ಯಾಟನ್ ಟ್ಯಾಂಕ್‌ನಂತಹ ಯುದ್ಧವಾಹನ, ವಿವಿಧ ಮಾದರಿಯ ಮೆಟ್ಟಿಲುಗಳು, ನೂಲೇಣಿಗಳು, ಸೇತುವೆಗಳು, ನೀರಿನಲ್ಲಿ ಜೀವರಕ್ಷಣೆಗೆ ಬೇಕಾಗುವ ರಬ್ಬರ್ ಟ್ಯೂಬ್‌ನಂತಹ ಉಪಕರಣ, ಕೊಚ್ಚೆಯ ಮೇಲೆ ನಡೆಯಲು ಅನುಕೂಲವಾಗುವಂತಹ ಪಾದರಕ್ಷೆಗಳು, ಭೂತಕನ್ನಡಿಯ ರಚನೆ, ಯುದ್ಧದಲ್ಲಿ ಬೇಕಾಗುವ ಅನೇಕಾನೇಕ ಉಪಕರಣಗಳು – ಹೀಗೆ ಹಲವು ಸಹಸ್ರ ಸಂಖ್ಯೆಯ ನಕ್ಷೆಗಳಿಂದ ಈತನ ಟಿಪ್ಪಣಿ ತುಂಬಿಹೋಗಿದೆ. ಒಬ್ಬ ಮಾನವನು ತನ್ನ ಜೀವನಾವಧಿಯಲ್ಲಿ ಇಷ್ಟೆಲ್ಲ ವೈವಿಧ್ಯಮಯ ಸಾಧನೆಗಳನ್ನು ಮಾಡಲು ಸಾಧ್ಯವೇ ಎಂದು ಆಶ್ಚರ್ಯಪಡುವಂತಿದೆ ಲಿಯೊನಾರ್ಡೊವಿನ ಬದುಕು.

ಫೋರ್ಜಾನ ಆಳ್ವಿಕೆಯ ಪತನದವರೆಗೆ (೧೪೮೨-೧೪೯೯) ಲಿಯೊನಾರ್ಡೊ ಮಿಲಾನ್‌ನಲ್ಲಿಯೇ ಇದ್ದ. ೧೪೯೯ರಲ್ಲಿ ಮಿಲಾನ್ ನಗರವನ್ನು ಬಿಟ್ಟ ಲಿಯೊನಾರ್ಡೊ ಮಾಂಟುವಾ ಮತ್ತು ವೆನಿಸ್ ನಗರಗಳ ಮೂಲಕ ಫ್ಲಾರೆನ್ಸ್‌ಗೆ ಹಿಂದಿರುಗಿದ. ಈ ವೇಳೆಗಾಗಲೇ 'ಕ್ರಿಸ್ತನ ಅಂತಿಮ ಭೋಜನ' ಕಲಾಕೃತಿಯ ಬ್ರಹ್ಮನಾಗಿ ಸಾಕಷ್ಟು ಪ್ರಸಿದ್ಧಿ ಪಡೆದಿದ್ದ ಲಿಯೊನಾರ್ಡೊವಿಗೆ ಕೆಲಸಕ್ಕಾಗಿ ಯಾರನ್ನೂ ಅಂಗಲಾಚುವ ಪರಿಸ್ಥಿತಿಯೇನಿರಲಿಲ್ಲ. ಆ ಕಾಲದಲ್ಲಿ ಕಲಾವಿದನಿಗೆ ಯಾವ ವಿಷಯದ ಬಗ್ಗೆ ಮತ್ತು ಯಾವ ಅಳತೆಯಲ್ಲಿ ಚಿತ್ರ ರಚನೆ ಮಾಡಬೇಕೆಂಬ ವಿವರವಾದ ಸೂಚನೆಗಳನ್ನು ಕೊಡುವ ಪದ್ಧತಿಯಿದ್ದಿತಾದರೂ ಲಿಯೊನಾರ್ಡೊವಿಗೆ ಮಾತ್ರ ಆ ರೀತಿಯ ಯಾವ ಸೂಚನೆಗಳನ್ನೂ ಕೊಡದೆ (ಫ್ಲಾರೆನ್ಸ್ ನಗರದ ಧರ್ಮ ಗುರುಗಳು) ಸಂಪೂರ್ಣ ಸ್ವಾತಂತ್ರ್ಯ ಕೊಟ್ಟರು. ಅದೇ ಸಂದರ್ಭದಲ್ಲಿ ಲಿಯೊನಾರ್ಡೊ ಆರಂಭಿಸಿದ 'ತನ್ನ ತಾಯಿ ಮತ್ತು ಅಜ್ಜಿಯೊಡನೆ ಇರುವ ಹಸುಳೆ ಏಸುಕ್ರಿಸ್ತನ ಚಿತ್ರ'ವು ಕಡೆಗೂ ಪೂರ್ಣವಾಗಲೇ ಇಲ್ಲ. ಈ ಮಧ್ಯೆ ಕೈಯಲ್ಲಿದ್ದ ಕೆಲಸವನ್ನು ಕಡೆಗಣಿಸಿ, ಹಠಾತ್ತನೆ ಸಿಜ಼ಾರೆ ಬೋರ್ಗಿಯಾ (೬ನೆಯ ಪೋಪ್ ಅಲೆಕ್ಸಾಂಡರ್‌ನ ಅಕ್ರಮಜಾತ ಪುತ್ರರನೇಕರಲ್ಲಿ ಒಬ್ಬ)ನ ಬಳಿ ಮಿಲಿಟರಿ ಇಂಜಿನಿಯರಾಗಿ ೧೫೦೨ರಲ್ಲಿ ಕೆಲಸಕ್ಕೆ ಸೇರಿದ. ತಿಳಿದೂ ತಿಳಿದೂ ಅತ್ಯಂತ ಕ್ರೂರಿಯೂ, ಲಂಪಟನೂ, ಸ್ವಾರ್ಥಿಯೂ ಆದ ಬೋರ್ಗಿಯಾನ ಬಳಿ ಏಕೆ ಲಿಯೊನಾರ್ಡೊ ಸೇರಿದನೆಂಬುದೇ ಇಂದಿಗೂ ನಿಗೂಢ. ಇದೇ ಸಮಯದಲ್ಲಿ 'ಆ್ಯಂಗಿಯಾರಿಯ ಕದನ' ಎಂಬ ಬಹುಮುಖ್ಯ ಚಿತ್ರವನ್ನು ರಾಜಕೀಯ ಸಭಾಂಗಣದ ಗೋಡೆಯ ಮೇಲೆ ರಚಿಸುವ ಕೆಲಸವನ್ನು ಲಿಯೊನಾರ್ಡೊವಿಗೆ ಕೊಡಲಾಯಿತು. ಯುದ್ಧಕ್ಕೆ ಸಂಬಂಧಿಸಿದ 'ಕ್ಯಾಸ್ಸಿನಾದ ಕದನ' ಎಂಬ ಮತ್ತೊಂದು ಚಿತ್ರವನ್ನು ಪಕ್ಕದ ಅಂಗಣದ ಗೋಡೆಯ ಮೇಲೆ ರಚಿಸಲು ಕಲಾಪ್ರಪಂಚದ



ಸಿಸಿಲಿಯಾ ಗ್ಯಾಲ್ಲೆರಾನಿಯ ಭಾವಚಿತ್ರ

ಮತ್ತೊಬ್ಬ ದಿಗ್ಗಜನೆನಿಸಿದ ಮೈಕೆಲೇಂಜೆಲೊವನ್ನು ನೇಮಿಸಲಾಯಿತು. ಈ ಇಬ್ಬರು ಮಹಾ ಪ್ರತಿಭಾವಂತ ಕಲಾವಿದರು ಒಂದೇ ಜಾಗದಲ್ಲಿ ಚಿತ್ರ ರಚಿಸುವುದನ್ನು ನೋಡಲು ಯುವ ಕಲಾವಿದ ರಾಫೆಲ್ ಸಹ ಅಲ್ಲಿಗೆ ಉತ್ಸುಕನಾಗಿ ಆಗಮಿಸಿದ್ದನಂತೆ !!

ದುರದೃಷ್ಟವಶಾತ್ ಇವರಿಬ್ಬರೂ ತಮಗೆ ವಹಿಸಿದ ಕೆಲಸವನ್ನು ಪೂರ್ಣಗೊಳಿಸಲೇ ಇಲ್ಲ. ಆ ಕೃತಿಗಳು ಕರಡು ರೇಖಾಚಿತ್ರಗಳಾಗಿ ಮಾತ್ರವೇ ಎಲ್ಲರಿಗೂ ನೋಡಲು ದೊರಕಿದವು.

೧೫೦೬ರಿಂದ ೧೫೧೯ರವರೆಗಿನ ಈ ಕಾಲದಲ್ಲಿ ಲಿಯೊನಾರ್ಡೊ ಒಂದು ರೀತಿಯಲ್ಲಿ ಸಾಕಷ್ಟು ಅಂತರ್ಮುಖಿಯಾಗಿದ್ದನೆನ್ನಬಹುದು. ಜೀವನದಲ್ಲಿ ಸಾಕಷ್ಟು ಕೀರ್ತಿ, ಐಶ್ವರ್ಯ, ನೋವು, ಸರಳಿಕೆ, ಅಪಮಾನ, ಸಾಧನೆಯ ತೃಪ್ತಿ, ಹೊಗಳಿಕೆ, ತೆಗಳಿಕೆಗಳನ್ನು ಅನುಭವಿಸಿ, ಎಲ್ಲವನ್ನೂ ಮೀರಿ ನಿಂತ ಭವ್ಯ ವ್ಯಕ್ತಿತ್ವದ ಅನೇಕ ಮಗ್ಗಲುಗಳು ಆತನು ತನ್ನ ಇಳಿ ವಯಸ್ಸಿನಲ್ಲಿ ಬರೆದ ಟಿಪ್ಪಣಿಯಲ್ಲಿ ದೊರೆಯುತ್ತವೆ. ೬೦ ವರುಷದ ಪ್ರಾಯದಲ್ಲಿಯೇ ಸುಮಾರು ೭೫ ವರುಷ ವಯಸ್ಸಿನವನಂತೆ ಕಾಣುತ್ತಿದ್ದ ಲಿಯೊನಾರ್ಡೊ ತನ್ನ ಕಡೆಗಾಲದಲ್ಲಿ ಪಾರ್ಶ್ವವಾಯುವಿಗೆ ತುತ್ತಾಗಿ ನರಳಿದ. ಆದರೆ ಪಾರ್ಶ್ವವಾಯುವು ಆತನ ಬಲಗೈಯನ್ನು ಮಾತ್ರ ನಿಷ್ಕ್ರಿಯಗೊಳಿಸಿತ್ತು. ಮೊದಲಿನಿಂದಲೂ ಎಡಗೈ ಬಂಟನಾದ ಲಿಯೊನಾರ್ಡೊವಿಗೆ ತನ್ನ ಕೆಲಸ ಮುಂದುವರಿಸಲು ಯಾವ ತೊಂದರೆಯೂ ಆಗಲಿಲ್ಲ. ಆದರೆ ಈ ಅವಧಿಯಲ್ಲಿ ಈತನು ಹೇಳಿಕೊಳ್ಳುವಂತಹ ಯಾವ ಚಿತ್ರವನ್ನೂ ರಚಿಸಲಿಲ್ಲ. ತನಗೆ ಅತಿ ಇಷ್ಟವಾದ ವೈಜ್ಞಾನಿಕ ಚಿಂತನೆ, ಪ್ರಯೋಗ, ಟಿಪ್ಪಣಿ ತಯಾರಿಕೆ – ಇವುಗಳಲ್ಲೇ ಕಾಲ ಕಳೆದ. ಆದರೂ ೧೫೧೫ರಲ್ಲಿ ತನ್ನ ಕಡೆಗಾಲದಲ್ಲಿ ಬರೆದ ಚಿತ್ರ 'ಸೆಯಿಂಟ್ ಜಾನ್ ದಿ ಬ್ಯಾಪ್ಟಿಸ್ಟ್' ಒಂದು ಉತ್ತಮ ಕಲಾಕೃತಿಯೇ ಸರಿ.

೧೫೧೯ರಲ್ಲಿ ಮರಣವನ್ನಪ್ಪುವ ಮುಂಚೆ ಈತನು ಬರೆದಿಟ್ಟ ಉಯಿಲಿನ ಪ್ರಕಾರ, ಈತನು ಸಂಪಾದಿಸಿದ



ಲಿಯಾನಾರ್ಡೊವಿನ ಗುರು ವೊರಾಕ್ಸಿಯೋ



**ಕ್ರಿಸ್ತನ ಅಂತಿಮ ಭೋಜನ (The Last Supper)**

**ಲಿಯೊನಾರ್ಡೊ-ಡ-ವಿನ್ಸಿಯು ರಚಿಸಿದ ಚಿತ್ರಗಳಲ್ಲಿ ಅತ್ಯಂತ ಭವ್ಯವೆನಿಸಿದ ಚಿತ್ರ. ಏಸುಕ್ರಿಸ್ತನ ಜೀವನದ ಅತಿ ಮುಖ್ಯ ಘಟನೆಗಳಲ್ಲಿ ಒಂದಾದ ಈ ಸನ್ನಿವೇಶವನ್ನು ಲಿಯೊನಾರ್ಡೊಗೆ ಮುಂಚಿತವಾಗಿಯೂ ಮತ್ತು ನಂತರವೂ, ಅನೇಕ ಪ್ರಖ್ಯಾತ ಕಲಾವಿದರು ಸಾಕಷ್ಟು ಚೆನ್ನಾಗಿಯೂ, ಊಹೆಗೆ ನಿಲುಕಿದಂತೆಯೂ ರಚಿಸಿದ್ದಾರೆ. ಆದರೆ ಮತ್ಯಾವುದೂ ಲಿಯೊನಾರ್ಡೊವಿನ ಚಿತ್ರದಷ್ಟು ಪ್ರಸಿದ್ಧವೂ, ಚರ್ಚಿತವೂ ಆಗಲಿಲ್ಲ.**

ಐಶ್ವರ್ಯವೆಲ್ಲ ಇವನ ತಂದೆ ಪಿಯೆರೊವಿನ ಇತರ ಮಕ್ಕಳಿಗೆ ಸೇರಿತು. ಆದರೆ ತನಗೆ ಬಹು ಪ್ರಿಯವಾದ ಸುಮಾರು ೭೦೦೦ ಚಿಲ್ಲರೆ ಪುಟಗಳ ಟಿಪ್ಪಣಿಯನ್ನು ಮಾತ್ರ ತನ್ನ ಅತ್ಯಂತ ಪ್ರಿಯ ಶಿಷ್ಯನಾದ 'ಫ್ರಾನ್ಸೆಸ್ಕೊ ಮೆಲ್ಜಿ'ಯ ಹೆಸರಿಗೆ ಬರೆದಿಟ್ಟಿದ್ದ. ಗುರುವಿನ ಮರಣದಿಂದ ಅತೀವ ದುಃಖಿತನಾದ ಮೆಲ್ಜಿಯು ಆ ಟಿಪ್ಪಣಿಗಳನ್ನು ತನ್ನ ಮನೆಗೆ ಕೊಂಡೊಯ್ದು, ಬಹು ಜಾಗ್ರತೆಯಿಂದ ಕಾಪಾಡಿದ. ಯಾವ ಕ್ರಮವೂ ಇಲ್ಲದೆ, ಹುಚ್ಚಾಪಟ್ಟೆ ಜೋಡಿಸಲಾಗಿದ್ದ ಕಾಗದಗಳ ಕಂತೆಯಿಂದ ಲಿಯೊನಾರ್ಡೊವಿನ ಅತ್ಯಂತ ಪ್ರಿಯ ಯೋಜನೆಯಾದ 'ಕಲಾ ಪ್ರಬಂಧ ಗ್ರಂಥ' (Treatise on Painting)ಕ್ಕೆ ಸಂಬಂಧಪಟ್ಟ ಹಾಳೆಗಳನ್ನು ಹೆಕ್ಕಿ ತೆಗೆದು ಕ್ರಮವಾಗಿ ಜೋಡಿಸುವುದೇ ಮೆಲ್ಜಿಗೆ ಬಹಳ ಕಠಿಣ ಕೆಲಸವಾಯಿತು. ಆದರೂ ಅದನ್ನು ಬಹಳ ಸಮರ್ಪಕವಾಗಿ ಮಾಡಿ ಮುಗಿಸಿದ ಮೆಲ್ಜಿಯು ೧೫೭೦ರಲ್ಲಿ ಮರಣ ಹೊಂದಿದಾಗ, ಈ ಅಮೂಲ್ಯ ಗ್ರಂಥವು ವಿಶ್ವವಿಖ್ಯಾತ ಕಲಾಚರಿತ್ರಕಾರನೆಂದು ಹೆಸರು ಗಳಿಸಿದ್ದ ವಸಾರಿಯ ಕೈಗೆ ಸೇರಿತು. ಉಳಿದ ಕಾಗದಗಳೆಲ್ಲವನ್ನೂ ಮೆಲ್ಜಿಯು ವಕೀಲಿ ವೃತ್ತಿಯಲ್ಲಿದ್ದ ತನ್ನ ಮಗನಿಗೆ ಕೊಟ್ಟಿದ್ದ. ಆದರೆ ಮಗನಿಗೆ ಲಿಯೊನಾರ್ಡೊವಿನ ಬಗ್ಗೆಯಾಗಲೀ, ಆತನ ಕೆಲಸದ ಬಗ್ಗೆಯಾಗಲೀ ಯಾವ ಗೌರವವೂ ಇರಲಿಲ್ಲ. ಹೀಗಾಗಿ ಆ ಕಾಗದಗಳೆಲ್ಲವೂ ಹರಿದು ಹಂಚಿ ಹೋದವು. ಅವುಗಳಲ್ಲಿ ಕಳೆದುಹೋದುವೆಷ್ಟೋ, ವಿಕ್ರಯಿಸಲ್ಪಟ್ಟವು ಎಷ್ಟೋ, ದಾನ ಮಾಡಲ್ಪಟ್ಟವು ಎಷ್ಟೋ, ಕಳುವು ಮಾಡಲ್ಪಟ್ಟವು ಎಷ್ಟೋ! ಇಂದು ಈ ಕಾಗದಗಳು ಟಿಪ್ಪಣಿಗಳು ಪ್ರಪಂಚದ ಅನೇಕ ಭಾಗಗಳಲ್ಲಿ, ಸಂಗ್ರಹಾಲಯಗಳಲ್ಲಿ, ಅರಮನೆಗಳಲ್ಲಿ, ಖಾಸಗಿ ಸಂಗ್ರಹಗಳಲ್ಲಿ ಹಂಚಿಹೋಗಿವೆ. ಈ ಟಿಪ್ಪಣಿಗಳ ಅನೇಕ ಪುಟಗಳನ್ನು ಕಾಪಾಡಿದ ಶಿಲ್ಪಿ ಪಾಂಪಿಯೋ ಲಿಯೋನಿ, ಚಕ್ರವರ್ತಿ ನೆಪೋಲಿಯನ್ ಇಬ್ಬರೂ ಶ್ಲಾಘನೀಯರು.

೧೫೧೯ರಲ್ಲಿ ತೀರಿಕೊಂಡ ಲಿಯೊನಾರ್ಡೊನ ಕಳೇಬರವನ್ನು ಸಕಲ ಮರ್ಯಾದೆಗಳೊಡನೆ, ಆಂಬೊಯಿಸ್ ಎಂಬಲ್ಲಿ ರಾಜಮನೆತನದವರ ಹಾಗೂ ಹಿರಿಯ ಅಧಿಕಾರಿಗಳ ಸಮಾಧಿಗಳ ನಡುವೆ ಹೂಳಲಾಯಿತು. ಆದರೆ ಇದಾದ ನಂತರ ಹಲವು ವರುಷಗಳು ಸತತವಾಗಿ ಜರುಗಿದ ಯುದ್ಧ, ಒಳಜಗಳ, ಲೂಟಿ, ಕಾಳಗಗಳ ಸಮಯದಲ್ಲಿ ರಾಜಮನೆತನದವರ ಅನೇಕ ಸಮಾಧಿಗಳನ್ನು, ಅದರಲ್ಲಿ ಕಳೇಬರದೊಡನೆ ಹೂಳಲಾಗಿದ್ದ ಒಡವೆ-ವಸ್ತ್ರಗಳಿಗಾಗಿಯೂ, ಬೆಲೆಬಾಳುವ ಶವಪೆಟ್ಟಿಗೆಗಳಿಗಾಗಿಯೂ, ದರೋಡೆಮಾಡುವ ಹೀನಕೃತ್ಯ ಜರುಗಿದಾಗ ಲಿಯೊನಾರ್ಡೊವಿನ ಸಮಾಧಿಯೂ ನಾಶವಾಯಿತು. ೧೯ನೆಯ ಶತಮಾನದ ಆರಂಭದಲ್ಲಿ ಫ್ರೆಂಚ್ ಕವಿ 'ಆರ್ಸೆನ್ ಹೊಯ್ಸೆ' ಎಂಬುವನು ರಾಶಿ ಹಾಕಿದ್ದ ಅಸ್ಥಿಪಂಜರಗಳ ಮಧ್ಯದಿಂದ ಲಿಯೊನಾರ್ಡೊವಿನ ದೇಹಾಕಾರದ ಅಂದಾಜಿನ ಮೇಲೆ ಆಯ್ದು ತೆಗೆದ ಹಲವಾರು ಮೂಳೆಗಳನ್ನು ಮತ್ತೊಮ್ಮೆ ಅರಮನೆಯ ಬಳಿಯೇ ಹುಗಿದು, ಅದರ ಮೇಲೊಂದು ಸುಂದರವಾದ ಸಮಾಧಿಯನ್ನು ಕಟ್ಟಿದ್ದಾನೆ. ಅದರಲ್ಲಿ ಇರುವ ಅಸ್ಥಿಪಂಜರವು ಲಿಯೊನಾರ್ಡೊನದೋ ಅಲ್ಲವೋ ಯಾರೂ ಇಂದಿಗೂ ಅರಿಯರು. ಅಂತೂ ಹುಟ್ಟಿನಿಂದಲೇ ನಿಗೂಢತೆಗೆ ಹೆಸರುವಾಸಿಯಾಗಿದ್ದ ಈ ಮಹಾನ್ ಕಲಾವಿದ ತನ್ನ ಅದ್ಭುತ ಸಾಧನೆಗಳಲ್ಲಿ ಮಾತ್ರವಲ್ಲದೆ, ತನ್ನ ಸಾವಿನಲ್ಲೂ ನಿಗೂಢತೆಯನ್ನೇ ತುಂಬಿಟ್ಟುಹೋಗಿದ್ದಾನೆ.

ಡಿ. ಟಿ. ಲೋಹಿತ್
೩೩೯, ३ನೇ ಮುಖ್ಯರಸ್ತೆ, ३ನೇ ಹಂತ, ಜೆ.ಪಿ.ನಗರ, ಬೆಂಗಳೂರು – ೫೬೦ ೦೭೮

# ಸಾದರ ಸ್ವೀಕಾರ

**ಜಾಗೃತಿ** (ಕಾದಂಬರಿ) ಕೆ. ಚೆನ್ನಪ್ಪ ಭಾರತಿ
ಅನು : ಸುಶೀಲಾ
**ಪುಟ : ೨೧೬** **ಬೆಲೆ : ರೂ. ೧೨೫**
**ಅಧ್ಯಯನ ಪ್ರಕಾಶನ,** ಪಂಡಿತ ಸಾರ್ವಜನಿಕ ಗ್ರಂಥಾಲಯ ಕಟ್ಟಡ, ಶಿರಸಿ (ಉ.ಕ.) - ೫೮೧ ೪೦೧

**ಚುಕ್ಕಿ** (ಕವನ ಸಂಕಲನ) ಜ್ಯೋತಿ ಗುರುಪ್ರಸಾದ್
**ಪುಟ : ೭೭** **ಬೆಲೆ : ರೂ. ೫೦**
**ಋಜುವಾತು ಪ್ರಕಾಶನ,** ೪೯೮, ೬ 'ಎ' ಮೆಯಿನ್, ಆರ್‌ಎಂವಿ ೨ನೇ ಘಟ್ಟ, ಬೆಂಗಳೂರು - ೫೬೦ ೦೯೪

**ಆರ್ಯಭಟ** (ಪರಿಚಯ)
ಡಾ|| ಎಸ್. ಬಾಲಚಂದ್ರ ರಾವ್
**ಪುಟ : ೭೮** **ಬೆಲೆ : ರೂ. ೪೦**
**ಭಾರತೀಯ ವಿದ್ಯಾಭವನ,** ೪೩/೧, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧

**ಬೇಟೆಯ ಲೀಲೆ** (ಕಾವ್ಯ) ಗ. ಸು. ಭಟ್ಟ, ಬೆತ್ತಗೇರಿ
**ಪುಟ : ೬೨** **ಬೆಲೆ : ರೂ. ೩೦**
**ಸುಮುಖ ಪ್ರಕಾಶನ,** "ಕಾವ್ಯಶ್ರೀ", ಮೂರು ಕಾವೇರಿ, ಕಿನ್ನಿಗೋಳಿ - ೫೭೪ ೧೫೦ (ದಕ್ಷಿಣ ಕನ್ನಡ)

**ಆತ್ಮ ಹತ್ಯೆ** (ಕಾರಣ-ಪರಿಹಾರ) ಎನ್. ಗೋಪಾಲಕೃಷ್ಣ
**ಪುಟ : ೧೦೧** **ಬೆಲೆ : ರೂ. ೪೦**
**ತುಷಾರ ಪ್ರಕಾಶನ,** ೧೧೧, ೪ನೇ ಅಡ್ಡರಸ್ತೆ, ಕೆ. ಎಚ್. ರಂಗನಾಥ ಲೇಔಟ್, ಮೈಸೂರು ರಸ್ತೆ, ಬೆಂಗಳೂರು -೨೬

**ಸಿಡಿಲು ಸನ್ಯಾಸಿ** (ಸ್ವಾಮಿ ವಿವೇಕಾನಂದರ ಜೀವನ ದರ್ಶನ)
ಸಿಂಪಿ ಲಿಂಗಣ್ಣ
**ಪುಟ : ೧೧೨** **ಬೆಲೆ : ರೂ. ೨೫**
**ಡಾ|| ಸಿಂಪಿ ಲಿಂಗಣ್ಣ,** ಜನಪದ ಅಧ್ಯಯನ ಕೇಂದ್ರ, ಚಡಚಣ

**ಕೆಂಪು ಕಣ್ಣಿನ ಹುಡುಗಿ** (ಕಥಾ ಸಂಕಲನ) ಹಂಝು ಮಲಾರ್
**ಪುಟ : ೧೪೪** **ಬೆಲೆ : ರೂ. ೮೫**
**ವರ್ಷ ಎಂಟರ್‌ಪ್ರೈಸಸ್,** ೧೨೦೮, ೧ನೇ ಮಹಡಿ, ೪೧ನೇ ಕ್ರಾಸ್, ೨೬ನೇ ಮೆಯಿನ್, ೯ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೬೯

**ಸೀದಿ ಅಜ್ಜನ ಡೋಲು** (ಕಥಾ ಸಂಕಲನ)
ಹಂಝು ಮಲಾರ್
**ಪುಟ : ೧೨೦** **ಬೆಲೆ : ರೂ. ೮೦**
ವಿನ್ಸಾ ಎಂಟರ್‌ಪ್ರೈಸಸ್, ೧೨೧೧, ೪೧ನೇ ಅಡ್ಡರಸ್ತೆ, ೨೬ನೇ ಮುಖ್ಯರಸ್ತೆ, ೯ನೇ ಬಡಾವಣೆ, ಜಯನಗರ, ಬೆಂಗಳೂರು - ೫೬೦ ೦೬೯

**ಹಂಬಲ** (ಪ್ರಬಂಧ ಸಂಕಲನ)
ಶಾಂತಾರಾಮ ನಾಯಕ ಹಿಚಕಡ
**ಪುಟ : ೧೧೭** **ಬೆಲೆ : ರೂ. ೪೦**
**ಜಿನದೇವ ಪ್ರಕಾಶನ,** ಹಿಚಕಡ, ಅಂಕೋಲಾ, ಉ.ಕ.

**ಕಣಿವೆ ಕಲರವ** (ಪ್ರಾತಿನಿಧಿಕ ಕವನ ಸಂಕಲನ)
ಸಂ. ಡಾ|| ಎ. ವೃಷಭೇಂದ್ರಾಚಾರ್
**ಪುಟ : ೭೮** **ಬೆಲೆ : ರೂ. ೫೦**
**ಕನ್ನಡ ಸಾಹಿತ್ಯ ಪರಿಷತ್ ತಾಲೂಕು ಘಟಕ,** ಸಂಡೂರು - ೫೮೩ ೧೧೯, ಬಳ್ಳಾರಿ ಜಿಲ್ಲೆ

**ಚುಟುಕು ಚಿಲುಮೆ** (ಚುಟುಕು ಸಂಕಲನ)
ಸಂ. ಅಲ್ಲಮಪ್ರಭು ಬೆಟ್ಟದೂರು ಮತ್ತಿತರರು
**ಪುಟ : ೧೦೪** **ಬೆಲೆ : ರೂ. ೫೦**
**ಜಿಲ್ಲಾ ಚುಟುಕು ಸಾಹಿತ್ಯ ಪರಿಷತ್ತು,** ಕೊಪ್ಪಳ

**ಬಾಗಲಕೋಟೆಯ ಮಹಾತ್ಮ ಡಾ|| ಭೀಮರಾವ ಪರ್ವತಿ** (ಜೀವನ ಸಾಧನೆ)
ಹಣಮಂತ ತಾಸಗಾಂವಕರ
**ಪುಟ : ೫೮** **ಬೆಲೆ : ರೂ. ೩೦**
**ಜಿ. ಎಂ. ಪರ್ವತೀಕರ ಮತ್ತು ಮಕ್ಕಳು,** ಬಾಗಲಕೋಟೆ

**ಮ್ಯೊಲಾಂಜಿ** (ಬ್ಯಾರಿ ಜನಾಂಗ ಪರಿಚಯ)
ಹಂಝು ಮಲಾರ್
**ಪುಟ : ೬೪** **ಬೆಲೆ : ರೂ. ೩೦**
**ಮಧುರ ಪ್ರಕಾಶನ,** ಮಲಾರ್, ಕೋಣಾಜೆ

**ಗದಗ ತೋಂಟದಾರ್ಯ ಮಠದ ಹಸ್ತಪ್ರತಿ ಸೂಚಿ**
ಸಂ : ಡಾ|| ಪಿ. ಕೆ. ರಾಥೋಡ
**ಪುಟ : ೪೨೨** **ಬೆಲೆ : ರೂ. ೨೦೦**
**ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ,** ಕರ್ನಾಟಕ ಸರಕಾರ, ಬೆಂಗಳೂರು - ೫೬೦ ೦೦೧

**ಸಾಮಾನ್ಯರ ಸ್ವಾಮೀಜಿ** (ಪರಿಚಯ)
ಸಂ : ಚಂದ್ರಶೇಖರ ವಸ್ತ್ರದ
**ಪುಟ : ೨೦೯** **ಬೆಲೆ : ರೂ. ೫೦**
**ಸವಿಚೇತನ ಪ್ರಕಾಶನ,** 'ಗೋಧೂಳಿ', ನೀಲಮ್ಮ ತಾಯಿ ಆಶ್ರಮದ ಹತ್ತಿರ, ಆದರ್ಶನಗರ, ಗದಗ ಜಿಲ್ಲೆ

**ಹುಕ್ಕೇರಿಯ ಶಿವಪ್ಪ ನಾಯಕ** (ಜೀವನ ಪರಿಚಯ)
ಲೀಲಾವತಿ ಪಾಟೀಲ
**ಪುಟ : ೧೨೦** **ಬೆಲೆ : ರೂ. ೧೦**

**ಸಿದ್ಧಮಂಕ ಚರಿತೆ** (ಕಾವ್ಯ)
ಸಂ : ಡಾ|| ಎಂ. ಎಂ. ಕಲಬುರ್ಗಿ,
ಡಾ|| ವೈ. ಸಿ. ಭಾನುಮತಿ
**ಪುಟ : ೧೫೨** **ಬೆಲೆ : ರೂ. ೨೫**

**ಸ್ವರ ವಚನ ವಾಹಿನಿ - ಎರಡನೇ ಸಂಪುಟ** (ಕಾವ್ಯ)
ಸಂ : ಎಸ್. ಶಿವಣ್ಣ
**ಪುಟ : ೨೭೬** **ಬೆಲೆ : ರೂ. ೫೦**
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಲಿಂಗಾಯತ ಅಧ್ಯಯನ ಸಂಸ್ಥೆ,** ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ

ಸದುಪಯೋಗಕ್ಕಾಗಿ ಪ್ರಕಟವಾಗಿರುವ ಕಿರುಹೊತ್ತಿಗೆಗಳು : **ಅನುಭವ, ಸ್ವಾತಂತ್ರ್ಯ, ಹಿಂಸೆ-ಅಹಿಂಸೆ, ಮೊಸರು, ಸ್ನಾನ, ನಡಿಗೆ**
**ಟಿ. ವಿ. ವೆಂಕಟರಮಣಯ್ಯ,** ಇಡಬ್ಲ್ಯುಎಸ್. ೨೧೮, ಕೆಹೆಚ್‌ಬಿ ಕಾಲೋನಿ, ೨ನೇ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯




ಜೂನ್ ೧೮ರಂದು ಶಿವಮೊಗ್ಗದಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಪ್ರಾರಂಭವಾಯಿತು. ಜಿಲ್ಲಾ ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷರಾದ ಶ್ರೀ ಎನ್. ಮಂಜುನಾಥ್ ಪ್ರದರ್ಶನ ಉದ್ಘಾಟಿಸಿದರು.

ಸಾಹಿತ್ಯ ಸೃಷ್ಟಿಯ ಪರಂಪರೆಯಲ್ಲಿ ಆರಂಭದಿಂದಲೂ ಕವಿಗಳು ಮೂಡಿಬಂದಷ್ಟು ವಿಪುಲ ಸಂಖ್ಯೆಯಲ್ಲಿ ಕವಯಿತ್ರಿಯರು ಕಾಣಿಸಿಕೊಂಡು ತಮ್ಮ ಅಸ್ತಿತ್ವದ ಹೆಜ್ಜೆ ಗುರುತುಗಳನ್ನು ಬಿಟ್ಟುಹೋಗಿಲ್ಲ ಎನ್ನುವುದು ಸುಸ್ಪಷ್ಟ. ಹೀಗೆ ಪುರುಷರಿಗೆ ಮಾತ್ರ ಸಾಹಿತ್ಯ ಕೃಷಿಯ ಗುತ್ತಿಗೆ ದೊರೆಯಿತೇಕೆ? ಕಾವ್ಯಸೃಷ್ಟಿಯಲ್ಲಿ ಮಹಿಳೆಯೇಕೆ ಹಿಂದುಳಿದಳು? ಉಪನಿಷತ್ತಿನ ಕಾಲದ ಗಾರ್ಗಿ, ಮೈತ್ರೇಯಿಯರಂಥ ಒಬ್ಬಿಬ್ಬರು, ಹನ್ನೆರಡನೇ ಶತಮಾನದ ಅಕ್ಕಮಹಾದೇವಿ, ನಂತರ ಹದಿನೆಂಟನೇ ಶತಮಾನದ ಸಂಚಿಯ ಹೊನ್ನಮ್ಮ, ಹೆಳವನಕಟ್ಟೆ ಗಿರಿಯಮ್ಮ ಹೀಗೆ ಎಲ್ಲೋ ಅಲ್ಲಿ ಇಲ್ಲಿ ಮಹಿಳೆಯಿಂದ ಕಾವ್ಯಸೃಷ್ಟಿಯನ್ನು ಕಾಣಬಹುದು. ಜನಪದ ಸಾಹಿತ್ಯದಲ್ಲೂ ಹೆಣ್ಣಿನಿಂದ ಅವಳ ಎಲ್ಲ ಪಾಡೇ ಹಾಡಾಗಿ ಮೂಡಿಬಂದಿದೆಯಾದರೂ ಪ್ರಮಾಣದ ದೃಷ್ಟಿಯಲ್ಲಿ ಅಂದಿನಿಂದ ಇಂದಿನ ಇಪ್ಪತ್ತನೇ ಶತಮಾನ ಕಳೆಯುವವರೆಗೂ ಮಹಿಳೆಯರು ಕಾವ್ಯಸೃಷ್ಟಿಯಲ್ಲಿ ತುಂಬಾ ಹಿಂದುಳಿದಿದ್ದಾರೆ ಎನ್ನುವುದು ಖಚಿತ. ಹೀಗೇಕೆ ಆಯಿತು? ಕಾವ್ಯಕ್ಷೇತ್ರದಲ್ಲಿ ಮಹಿಳೆಯ ಈ ಪರಂಪರೆಯುದ್ದದ ಮೌನ ಏನನ್ನು ಸೂಚಿಸುತ್ತದೆ?

# ಮಹಿಳೆ ಮತ್ತು ಕಾವ್ಯಾಭಿವ್ಯಕ್ತಿ



ಅನಸೂಯಾದೇವಿ

ಸಾಹಿತ್ಯ ಸೃಷ್ಟಿಯ ಪರಂಪರೆಯಲ್ಲಿ ಆರಂಭದಿಂದಲೂ ಕವಿಗಳು ಮೂಡಿಬಂದಷ್ಟು ವಿಪುಲ ಸಂಖ್ಯೆಯಲ್ಲಿ ಕವಯಿತ್ರಿಯರು ಕಾಣಿಸಿಕೊಂಡು ತಮ್ಮ ಅಸ್ತಿತ್ವದ ಹೆಜ್ಜೆ ಗುರುತುಗಳನ್ನು ಬಿಟ್ಟು ಹೋಗಿಲ್ಲ ಎನ್ನುವುದು ಸುಸ್ಪಷ್ಟ ಹೀಗೆ ಪುರುಷರಿಗೆ ಮಾತ್ರ ಸಾಹಿತ್ಯ ಕೃಷಿಯ ಗುತ್ತಿಗೆ ದೊರೆಯಿತೇಕೆ? ಕಾವ್ಯಸೃಷ್ಟಿಯಲ್ಲಿ ಮಹಿಳೆಯೇಕೆ ಹಿಂದುಳಿದಳು? ಉಪನಿಷತ್ತಿನ ಕಾಲದ ಗಾರ್ಗಿ, ಮೈತ್ರೇಯಿಯರಂಥ ಒಬ್ಬಿಬ್ಬರು, ಹನ್ನೆರಡನೇ ಶತಮಾನದ ಅಕ್ಕಮಹಾದೇವಿ, ನಂತರ ಹದಿನೆಂಟನೇ ಶತಮಾನದ ಸಂಚಿಯ ಹೊನ್ನಮ್ಮ, ಹೆಳವನಕಟ್ಟೆ ಗಿರಿಯಮ್ಮ ಹೀಗೆ ಎಲ್ಲೋ ಅಲ್ಲಿ ಇಲ್ಲಿ ಮಹಿಳೆಯಿಂದ ಕಾವ್ಯಸೃಷ್ಟಿಯನ್ನು ಕಾಣಬಹುದು. ಜನಪದ ಸಾಹಿತ್ಯದಲ್ಲೂ ಹೆಣ್ಣಿನಿಂದ ಅವಳ ಎಲ್ಲ ಪಾಡೇ ಹಾಡಾಗಿ ಮೂಡಿ ಬಂದಿದೆಯಾದರೂ ಪ್ರಮಾಣದ ದೃಷ್ಟಿಯಲ್ಲಿ ಅಂದಿನಿಂದ ಇಂದಿನ ಇಪ್ಪತ್ತನೇ ಶತಮಾನ ಕಳೆಯುವವರೆಗೂ ಮಹಿಳೆಯರು ಕಾವ್ಯಸೃಷ್ಟಿಯಲ್ಲಿ ತುಂಬಾ ಹಿಂದುಳಿದಿದ್ದಾರೆ ಎನ್ನುವುದು ಖಚಿತ. ಹೀಗೇಕೆ ಆಯಿತು? ಕಾವ್ಯಕ್ಷೇತ್ರದಲ್ಲಿ ಮಹಿಳೆಯ ಈ ಪರಂಪರೆಯುದ್ದದ ಮೌನ ಏನನ್ನು ಸೂಚಿಸುತ್ತದೆ?

ಹಿಂದೆ ಆರಂಭಿಕ ವೇದಕಾಲದಲ್ಲಿನ ಪೂರ್ವಿಕರ ಬದುಕು ವರ್ಗ, ಜಾತಿ ಭೇದವಿಲ್ಲದಂಥ ಸರಳ ಸುಂದರ ಬದುಕಾಗಿತ್ತು. ಆಗ ಖಾಸಗಿ ಆಸ್ತಿಯ ಕಲ್ಪನೆಯಿರಲಿಲ್ಲ. ಹೆಣ್ಣು ಕೂಡ ಒಬ್ಬನದೇ ಖಾಸಗಿ ವಸ್ತು ಎಂಬ ಪರಿಭಾವನೆ ಕೂಡ ಇರಲಿಲ್ಲ. ಮುಂದೆ ಶತಮಾನಗಳ ಅಂತರದಲ್ಲಿ ಕಬ್ಬಿಣದ ಸಂಶೋಧನೆಯ ನಂತರ ಹೆಚ್ಚಾದ ಉತ್ಪತ್ತಿಯೊಡನೆ ಇಂಥ ಬದುಕು ಬದಲಾಗುತ್ತಾ ಹೋಯಿತು. ಕಡೆಗೆ ಹೆಣ್ಣನ್ನು ಖಾಸಗಿ ಆಸ್ತಿಯಾಗಿಸಿಕೊಂಡು ಅವಳ ಮೇಲಿನ ಸ್ವಾಧಿಪತ್ಯವನ್ನು ರೂಢಿಸಿಕೊಳ್ಳುವುದರಲ್ಲಿ ಪರ್ಯವಸಾನ ಹೊಂದಿತು. ಒಂದು ಹೆಣ್ಣಿಗೆ ಒಬ್ಬನೇ ಒಡೆಯನಾಗುವ ಮನೋಧರ್ಮ ಮತ್ತು ಅವಕಾಶ, ಆ ಹೆಣ್ಣನ್ನು ಎಲ್ಲ ರೀತಿಯಿಂದಲೂ ತನ್ನ ವ್ಯಾಪ್ತಿಗಳ ಒಳಗೇ ಬದುಕಗೊಡುವ ವ್ಯವಸ್ಥೆಯನ್ನು ಸಮರ್ಪಕವಾಗಿ ಬೆಳೆಸಿ, ಪಾಲಿಸಿಕೊಂಡು ಬಂದಂತೆಲ್ಲ ಆಕೆ ತನ್ನ ಅಧೀನಳು, ತಾನು ಹೇಳಿದಂತೆ ಕೇಳುವ, ಕೇಳಲೇಬೇಕಾದಂಥ ತನ್ನ ಭೋಗವಸ್ತುಗಳಲ್ಲಿ ಒಂದು ಎಂಬ ಭಾವನೆ ಪುರುಷನಲ್ಲಿ ಬಲಿಯುತ್ತಾ ಬಂದಿತು.

ಹೆಣ್ಣಿಗೆ ಸ್ವತಂತ್ರವಾದ ಒಂದು ಮನೋಭೂಮಿಕೆಯಿರುತ್ತದೆ ಎನ್ನುವುದನ್ನೇ ಮರೆತ ಪುರುಷ ಶಾಸ್ತ್ರ, ಸೂತ್ರ, ಸ್ಮೃತಿಗಳಲ್ಲಿ ಹೆಣ್ಣಿನ ನಡೆ, ನುಡಿ, ಬಾಳುವ ರೀತಿ-ನೀತಿಗಳನ್ನು ರೂಪಿಸಿ ಸಾಮಾಜಿಕ ಶೃಂಖಲೆಗಳಲ್ಲಿ ಅವಳನ್ನು ಬಂಧಿಸಿ ಇಟ್ಟ. ಅವಳು ಯಾವಾಗಲೂ ಗಂಡಿಗೆ ನೆರಳಾಗಿ, ವಿಧೇಯಳಾಗಿ ತಗ್ಗಿ ಬಗ್ಗಿ ನಡೆಯಬೇಕು. ಗಂಡಿನ ಆಧಾರ, ಆಶ್ರಯಗಳಲ್ಲೆ ಆಕೆ ಆಯಸ್ಸು ಕಳೆಯಬೇಕು. ಗಂಡಿಗೆ ಅನುಕೂಲಳಾಗಿ, ಸಹನಶೀಲಳಾಗಿ, ಗೃಹಜೀವಿಯಾಗಿ ಇರುವುದಷ್ಟೇ ಅವಳ ಕರ್ತವ್ಯ ಇತ್ಯಾದಿ ಕಟ್ಟುಪಾಡುಗಳನ್ನು ಪರಂಪರೆಯ ಪುರುಷವರ್ಗ ವಿಧಿಸಿದ್ದಲ್ಲದೆ ಚಾಚೂ ತಪ್ಪದೆ ಪಾಲಿಸಿಕೊಂಡು ಬಂದಿತು. ಈ ಪಕ್ಷಪಾತದ ದೆಸೆಯಿಂದಾಗಿ ಹೆಣ್ಣು ತನ್ನ ಧ್ವನಿ ಕಳೆದುಕೊಂಡು ಹಿನ್ನೆಲೆಗೆ ಸರಿದುಹೋಗುವಂತೆ ಆಯಿತು.

ಹೀಗೆ ಪುರುಷ ಪ್ರಧಾನವಾದ ಸಮಾಜದಲ್ಲಿ ಪುರುಷನ ಮಾನದಂಡಗಳಿಂದಲೇ ಸ್ತ್ರೀಯ ಬದುಕನ್ನು ಅಳೆಯುವ ಪ್ರವೃತ್ತಿ ಬಲಿಯುವುದೂ ಸಹಜ. ಪರಿಣಾಮವಾಗಿ ಪುರಾಣಗಳಲ್ಲಿ ಅಹಲ್ಯೆ, ಸೀತೆ, ದ್ರೌಪದಿ, ಕುಂತಿಯಂಥ ಮಹಿಳೆಯರು ತಮ್ಮದಲ್ಲದ ದೋಷಗಳಿಗಾಗಿಯೂ ನರಳಬೇಕಾಗಿಬಂದಂಥ ಪಾತ್ರಗಳಾದರು. ಪುರಾಣ ಕಾವ್ಯಗಳಲ್ಲಿ ಹೆಣ್ಣನ್ನು ಪತಿವ್ರತೆಯೆಂಬ ವೈಭವೀಕರಣದ ಪಟ್ಟದಲ್ಲಿ ಕೂಡಿಸಿ, ಸ್ತ್ರೀಯು ಶಕ್ತಿ ಸ್ವರೂಪಿಣಿ ಎಂದು ದೇವತೆಯ ಸ್ಥಾನದಲ್ಲಿರಿಸಿ, ನಿಜಜೀವನದಲ್ಲಿ ಅವಳನ್ನು ಅಬಲೆಯನ್ನಾಗಿಸುವುದರಲ್ಲಿ ಪುರುಷನ ದ್ವಂದ್ವ ನೀತಿ ಮೆರೆಯಿತು.

ಅರಣ್ಯವನ್ನು ಕಡಿಯುವ ಮನಸ್ಸು ಬರಬಹುದು; ಆದರೆ ಮರುಭೂಮಿಯನ್ನು ಹಾಳುಮಾಡಬೇಕೆಂದು ಯಾರಿಗೆ ಪ್ರಚೋದನೆಯಾದೀತು? ಹೆಣ್ಣು ಮೂಲತಃ ಚೈತನ್ಯಮಯಿ, ಸೃಷ್ಟಿಶಕ್ತಿಯ ಸಂಪತ್ತು ಉಳ್ಳವಳು, ಸೃಜನಶೀಲತೆಯ ಬುದ್ಧಿ ಜಾಣ್ಮೆ, ಕುಶಲತೆಗಳ ಮೂರ್ತ ರೂಪಳು. ತನ್ನ ಸ್ಥಾನಕ್ಕೆ ಪ್ರತಿಸ್ಪರ್ಧಿಯಾಗಬಹುದಾದವಳು, ತನ್ನನ್ನು ಮೀರಿ

ಬೆಳೆಯಬಹುದಾದವಳು ಎಂಬ ಅರಿವಿನಿಂದಲೇ ಅವಳ ಮುಂದೆ ತನ್ನ ಕುಬ್ಜತೆಯನ್ನು ಎಂದೂ ಒಪ್ಪಿಕೊಳ್ಳದೆ ತನ್ನ ಪ್ರಾಧಾನ್ಯತೆಯನ್ನೇ ಬದುಕಿನ ಎಲ್ಲ ರಂಗಗಳಲ್ಲಿಯೂ ತಂದುಕೊಂಡು ಬಲವಂತವಾಗಿ ಅವಳನ್ನು ಸ್ವಾಧಿಪತ್ಯದಿಂದ ಮಣಿಸಿ ಮೂಲೆಗೆ ಸರಿಸಿದ ಪುರುಷ ಹೀಗೆ ಪ್ರತಿಸ್ಪರ್ಧಿಯಾಗಿ ನಿಲ್ಲುವಂಥ ಜೀವದ ಮೇಲೆ ಪ್ರತೀಕಾರ ತೀರಿಸಿಕೊಂಡುದರ ಪರಿಣಾಮ ಅವಳಲ್ಲಿ ಸೃಜನಶೀಲತೆ ಬತ್ತಿಹೋಗುವಂತಾಯಿತು. ಇದೆಲ್ಲವೂ ಒಂದೆರಡು ವರುಷಗಳಲ್ಲಿ ನಡೆದುದಲ್ಲ, ಶತಶತಮಾನಗಳಲ್ಲಿ ಅನೂಚಾನವಾಗಿ ಆತ ಬಿತ್ತಿ ಬೆಳೆಯಿಸಿದ ಹೆಣ್ಣಿನ ಹತಭಾಗ್ಯತನವಿದು.

ಕಾಲಚಕ್ರದಲ್ಲಿನ ಈ ನಿರಂತರ ದಾಸ್ಯ ಹೆಣ್ಣನ್ನು ಗೃಹಬಂಧಿಯಾಗಿಸಿ ದುಡಿಯುವ ತೊತ್ತಾಗಿಸಿತು. ಹೊರಪ್ರಪಂಚದ ಆಗುಹೋಗುಗಳ ಅರಿವಿನ ಪರಿಧಿಯಿಂದ ಅವಳನ್ನು ದೂರವಿರಿಸಿದಾಗ ತನ್ನ ವ್ಯಕ್ತಿತ್ವವನ್ನು ತಾನೇ ಅರಿಯಲಾರದಂಥ ಒಂದು ಸ್ಥಿತಿಯಲ್ಲಿ ಆಕೆ ಸಿಲುಕಿಕೊಂಡಳು. ಆಕೆಯ ಕಷ್ಟ-ಸಹಿಷ್ಣುತೆ, ತಾಳ್ಮೆ, ಶಾಂತಿ, ಪ್ರೇಮ ಮುಂತಾದ ಅವಳ ಮಾನವೀಯ ಗುಣಗಳೇ ಅವಳಿಗೆ ಮುಳುವಾದವು. ಪರಿಸ್ಥಿತಿಗೆ ಹೊಂದಿಕೊಂಡು ಹೋಗುವ ಅವಳ ಸ್ವಭಾವ ವೈಶಾಲ್ಯತೆಯೇ ಅವಳನ್ನು ಪ್ರತಿಭಟಿಸದಂತೆ, ಪ್ರಶ್ನಿಸದಂತೆ ತಗ್ಗಿಸಿತು. ಒಬ್ಬರ ಧೋರಣೆಯನ್ನು ಇನ್ನೊಬ್ಬರ ಮೇಲೆ ಹೇರುವ ಈ ದಬ್ಬಾಳಿಕೆಯ ವ್ಯವಸ್ಥೆಗೊಳಗಾದ ಸ್ತ್ರೀ ಅಂತರಂಗದ ಅನಿಸಿಕೆಗಳನ್ನು ಪ್ರಯತ್ನಪೂರ್ವಕ ಅದುಮಿಡುತ್ತಾ ಬಂದಳು. ವೈಚಾರಿಕತೆಗಿಂತ ವಿಧೇಯತೆಗೆ, ವಾದಕ್ಕಿಂತ ಹೆಚ್ಚಾಗಿ ಮೌನಕ್ಕೆ ಅವಳ ಬದುಕಿನ ಪ್ರಾಶಸ್ತ್ಯಸಂದಿತು.

ವ್ಯಕ್ತಿತ್ವದ ಸರ್ವಾಂಗೀಣ ಬೆಳವಣಿಗೆಗೆ ಅವಶ್ಯವಾದ ಎಲ್ಲ ಬಗೆಯ ಅವಕಾಶ, ಸೌಲಭ್ಯಗಳಿಂದ ವಂಚಿತಳಾಗಿ ಸಾಂಪ್ರದಾಯಿಕ ಕಟ್ಟುಕಟ್ಟಳೆಗಳ ಚೌಕಟ್ಟಿನೊಳಗೆ ಉಳಿದುಹೋದ ಸ್ತ್ರೀಗೆ ಸ್ವತಃ ತನ್ನ ಭಾವನೆಗಳನ್ನು, ವಿಚಾರಗಳನ್ನು, ಇಡೀ ತನ್ನ ವ್ಯಕ್ತಿತ್ವವನ್ನು ಶಕ್ತಿಯುತವಾಗಿ ಪ್ರತಿಪಾದಿಸುವ ಸಾಮರ್ಥ್ಯವೇ ಕುಂಠಿತವಾಗಿ ಆಕೆ ಮೌನವನ್ನೇ ರೂಢಿಸಿಕೊಂಡುಬಿಟ್ಟಳು. ಪಕ್ಷಪಾತದಿಂದಾಗಿ ಅನ್ಯಾಯಕ್ಕೊಳಗಾಗುವ ವರ್ಗ ದುರ್ಬಲವಾಗುತ್ತಾ ಹೋಗುವುದು ಸಹಜ. ಈ ದೌರ್ಬಲ್ಯ ಹೆಚ್ಚುತ್ತ ಹೋದಂತೆ ಹೆಣ್ಣಲ್ಲಿ ತನ್ನ ಮೇಲೆಯೇ ಕೀಳರಿಮೆ, ನಿಕೃಷ್ಟ ಭಾವನೆ, ಆತ್ಮವಿಶ್ವಾಸದ ಕೊರತೆ ಬೆಳೆಯುತ್ತ ಅದು ನಂಬಿಕೆಯೂ ಆಗಿ ಪರಿವರ್ತಿತವಾಯಿತು. ತಾನು ಹೀಗೇ ಇರಬೇಕು, ತನ್ನಿಂದ ಇಷ್ಟೇ ಸಾಧ್ಯ ಎನ್ನುವ ಅರಿಮೆಯಿಂದಲೇ ಆಕೆ ಬೆಳೆಸಲ್ಪಟ್ಟಳು ಕೂಡ. ಬಾಲ್ಯದಿಂದಲೂ ಆಕೆಗೆ ''ನೀನು ಹೆಣ್ಣು, ಬಾಗಿಲ ಒಳಗೇ ಇರು. ಗಂಡಸರ ಬಳಿ ಸಲಿಗೆ ಸಲ್ಲದು. ಗಟ್ಟಿಯಾಗಿ ಮಾತಾಡಬೇಡ...'' ಇತ್ಯಾದಿ, ಇತ್ಯಾದಿ ನಿರ್ಬಂಧಗಳನ್ನು ತಾಯಿಯಿಂದಲೂ ಆಕೆ ಪಡೆಯಬೇಕಾಯಿತು. ಸಮಾಜದ ಧೋರಣೆಗನುಗುಣವಾಗಿ ತಾನು ಬೆಳೆದು, ಕಲಿತು ರೂಢಿಸಿಕೊಂಡು ಬಂದುದನ್ನೇ ಹೆಣ್ಣು ತನ್ನ ಮುಂದಿನ ಪೀಳಿಗೆಗೂ ದಾಟಿಸುತ್ತ ಬಂದಳು. ತಾನು ತಲೆತಗ್ಗಿಸಿಕೊಂಡು ಬಾಳಿದ ರೀತಿಯಲ್ಲಿಯೇ ತನ್ನ ಮಗಳ ನಡವಳಿಕೆಗಳನ್ನೂ ನಿಯಂತ್ರಿಸುತ್ತಾ ಬಂದಳು.

ಹೀಗೆ ತಲೆಮಾರಿನಿಂದ ತಲೆಮಾರಿಗೆ ಹೆಣ್ಣನ್ನು ರೂಪಿಸುತ್ತ ಬಂದ ಲಕ್ಷ್ಮಣರೇಖೆಗಳು ಮುಂದೆ ಅವಳ ಹುಟ್ಟು ಸ್ವಭಾವಗಳೇನೋ ಎಂಬಂತೆ ಪರಿವರ್ತನೆಗೊಂಡುಬಿಟ್ಟವು. ಅಂಕೆಯಲ್ಲಿರಿಸುತ್ತಿದ್ದ ಪರಿಸ್ಥಿತಿ ತಲೆಮಾರುಗಳ ಅಂತರದಲ್ಲಿ ಫ್ಯಾಶನ್ ಆಗಿ ಪರಿಣಮಿಸಿತು. ಮೆತ್ತಗೆ ಮಾತಾಡುವುದನ್ನು ಆಕೆಗೆ ಕಲಿಸಿದ್ದ ಸಮಾಜವೇ 'ಹೆಣ್ಣಿನ ಮಾತು ಮೃದು ಮಧುರ' ಎಂದೂ ಹೇಳಿತು. ಮುಕ್ತವಾಗಿ ಬೆರೆಯುವ ಅವಕಾಶವನ್ನೇ ಆಕೆಗೆ ಕಲ್ಪಿಸಿಕೊಡದ ಸಮಾಜ 'ಹೆಣ್ಣು ಲಜ್ಜೆ ಲಾಲಿತ್ಯ ಸಂಕೋಚಗಳ ಚೆಲುವೆ' ಎಂದು ಹಾಡಿ ಹೊಗಳಿತು. ತಗ್ಗಿ ಬಗ್ಗಿ ನಡೆಯಬೇಕೆಂದು ಆಕೆಗೆ ಶಾಸನ ವಿಧಿಸಿದ್ದ ಪುರುಷನೇ 'ಹೆಣ್ಣು ನಡೆದಾಗ ಲತೆಯಂತೆ ಬಳುಕುವ ಕೋಮಲ ಶರೀರದ ಸೊಗಸುಗಾರ್ತಿ' ಎಂದು ಸಂತೋಷಪಟ್ಟುಕೊಂಡ. ಹೀಗೆ ಆಕೆಯ ಮೇಲೆ ಹೇರಲಾಗಿದ್ದ ನಿರ್ಬಂಧಗಳೇ ಆಕೆಯ ನಡೆನುಡಿ ರೀತಿನೀತಿಗಳನ್ನು ರೂಪಿಸಿ, ಅವುಗಳನ್ನು ಮೈಗೂಡಿಸಿಕೊಂಡು ಆಕೆಯ ಶೋಭಾಲಂಕಾರಗಳಾಗಿ, ಆಕೆಯ ಅಂತಃಪ್ರವೃತ್ತಿಯ ಹುಟ್ಟುಗುಣಗಳಾಗಿ ತಲೆಮಾರುಗಳ ಹೆಣ್ಣಿನ ಬೆಳವಣಿಗೆಯಲ್ಲಿ ರಕ್ತಗತಗೊಂಡುಬಿಟ್ಟವು.

ಪರಿಸರದ ಒತ್ತಡ ಹೆಣ್ಣಿಗೆ ಹೀಗೆ 'ಫ್ಯಾಶನ್' ಆದಾಗ ಸಮಾಜದ ನಿರೀಕ್ಷೆಯೂ ಅವಳು ಹೀಗೇ ಇರಬೇಕು, ಹೀಗೇ ವರ್ತಿಸಬೇಕು ಎಂಬುದಾಗಿರುವುದು ಸಹಜ. ಅಂತೆಯೇ ಎಲ್ಲಿಯೋ ಒಂದೆರಡು ಸ್ತ್ರೀ ಜೀವಿಗಳು ಸ್ವಲ್ಪ ಮುಕ್ತವಾಗಿದ್ದರೂ ಅವಳು ಎಲ್ಲರ ಕಣ್ಣು, ನಾಲಿಗೆಗೆ ಆಹಾರ. ಅವಳು ನೇರ, ನಿಸ್ಸಂಕೋಚವಾಗಿದ್ದರೆ ಎಲ್ಲರ ಪ್ರಶ್ನಾರ್ಥಕ ದೃಷ್ಟಿಯೂ ಅವಳ ಮೇಲೆಯೇ. ಅವಳು ನಿರ್ಭಯತೆಯಿಂದ ನಡೆದುಕೊಂಡರೆ ಅವಳ ಮೇಲಿನ ಕಟುಟೀಕೆಗಳೆ ಎಲ್ಲೆಲ್ಲೂ. ಸಮಾಜದ ಈ ಮನೋಧರ್ಮ ಹೆಣ್ಣನ್ನು ತಾನು ಇರುವಂತೆಯೇ ಪ್ರಕಟಗೊಳಿಸಿಕೊಳ್ಳಲಾಗದಂಥ ಪರಿಸ್ಥಿತಿಯಲ್ಲಿ ಬಂಧಿಸಿತು. ಅವಳ ಭಾವಗಳ ಮೂಲ ಅವಳ ಆಂತರ್ಯದಲ್ಲೇ ಉಳಿಯಿತು. ಅವಳ ಬುದ್ಧಿಶಕ್ತಿಗೆ, ವಿಚಾರಶಕ್ತಿಗೆ ತುಕ್ಕು ಹಿಡಿಯಿತು. ನಿಜರೂಪದಲ್ಲಿ ತನ್ನನ್ನು ಅವಳು ಸಮಾಜಕ್ಕೆ, ಆ ಮೂಲಕ ಸಾಹಿತ್ಯಕ್ಕೆ, ಪ್ರಬಲ ಸಮರ್ಥನೆಗೆ ಒಡ್ಡಿಕೊಳ್ಳದೇ ಹೋದಳು. ಸಮಾಜದ ನಿರೀಕ್ಷೆಗೆ ಅನುಗುಣವಾಗಿ ಅವಳ ಅಭಿವ್ಯಕ್ತಿಯಾಯಿತೇ ವಿನಃ ನಿಜರೂಪದ ಅಭಿವ್ಯಕ್ತಿಯಲ್ಲಿ ಹೊರಗೆ ಕಾಣಿಸಿಕೊಳ್ಳದೆ ಹಿನ್ನೆಲೆಗೆ ಸರಿದ ತನ್ನತನದಲ್ಲಿ ಧ್ವನಿ ಕಳೆದುಕೊಂಡ ಮೌನಿಯಾಗಿ ಉಳಿದುಬಿಟ್ಟಳು.

ಹೀಗೆ ಕಾವ್ಯಸೃಷ್ಟಿಯ ಪರಂಪರೆಯಲ್ಲಿ ಅಕ್ಕಮಹಾದೇವಿಯೊಬ್ಬಳ ಹೊರತಾಗಿ ತನ್ನನ್ನು ತಾನು ಇದ್ದುದಿದ್ದಂತೆಯೇ ಹೊರಗೆ ಅಭಿವ್ಯಕ್ತಿಸಿಕೊಳ್ಳುವ, ಸಂವೇದನೆಗಳನ್ನು ಗುರುತಿಸಿಕೊಂಡು ಪ್ರಕಟಪಡಿಸುವ ಕವಯಿತ್ರಿಯರು ಮೂಡಿಬರಲಾಗದುದಕ್ಕೆ ಸಾಮಾಜಿಕ, ಸಾಂಸ್ಕೃತಿಕ ಕಾರಣಗಳು ಬೇಕಷ್ಟಿವೆ. ಹಿಂದೂಧರ್ಮದ ಸನಾತನ ಪರಂಪರೆಯಲ್ಲದೆ ಜೈನಧರ್ಮ, ಮುಂತಾದ ಧರ್ಮಗಳು ಕೂಡ ಹೆಣ್ಣಿನ ಸ್ವಾತಂತ್ರ್ಯವನ್ನು ಮೊಟಕುಗೊಳಿಸಿದವು. ಪುರುಷಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಸ್ತ್ರೀ ತುಳಿತಕ್ಕೆ ಒಳಗಾಗಲು ಧರ್ಮದ ಅಂಗೀಕಾರದ ಮುದ್ರೆ ಬಿದ್ದಾಗಲಂತೂ ಕೇಳುವುದೇನಿದೆ? ಹೀಗಾಗಿ ಭಾರತೀಯ ನಾರಿ ಎರಡನೇ ದರ್ಜೆಯ ಪ್ರಜೆಯಾಗಿ ಉಳಿದಳು. ಇತಿಮಿತಿಗಳ ವೃತ್ತದಲ್ಲೇ ಉಳಿದು ಬಾಳಬೇಕಾದಾಗ, ಹೊರಗಿನ ಸಂಪರ್ಕ, ಅನುಭವಗಳಿಗೆ ಬದುಕು ಕದ ಮುಚ್ಚಿದಾಗ ಅಂತರಂಗ ಸಂವೇದನೆಗಳು ಕೂಡ ಅರಳದೇ ಮುದುಡಿ ಮುರುಟುವುದು ಸಹಜ. ಸಂವೇದನೆಗಳೇ

೫೭ನೇ ಪುಟಕ್ಕೆ

ಉದಯ





**ಆಸರೆ** (ಕಥಾಸಂಕಲನ)

ಪರಂಜ್ಯೋತಿ

**ಪುಟ :** ೧೨೮ **ಬೆಲೆ :** ರೂ. ೬೦

**ಇಂಚರ ಪ್ರಕಾಶನ,** ನಂ. ೧೬೭, ೧೦ನೇ ಮುಖ್ಯರಸ್ತೆ, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೮

ಈ ಸಂಕಲನದಲ್ಲಿರುವ ಎಂಟು ಕಥೆಗಳ ವಸ್ತು ಒಂದಕ್ಕೊಂದು ಭಿನ್ನ ಸ್ವರೂಪದ್ದಾಗಿದೆ. ಸಮಾಜದ ಓರೆಕೋರೆಗಳನ್ನು ನಿಖರವಾಗಿ ಗುರುತಿಸುವತ್ತ ಸಾಕಷ್ಟು ಪ್ರಜ್ಞಾಪೂರ್ವಕ ಕೆಲಸವನ್ನು ಕಥಾಪಾತ್ರಗಳ ಮೂಲಕ ಲೇಖಕರು ಮಾಡಿದ್ದಾರೆ. ಸುತ್ತಲಿನ ವಿದ್ಯಮಾನಗಳತ್ತ ಕಣ್ಣು ಹಾಯಿಸಲು ಅವಕಾಶ ಮಾಡಿಕೊಡುವ ಅಥವಾ ಪ್ರಜ್ಞಾವಂತ ಪ್ರೌಢ ಓದುಗನಿಗೆ ಕೆಲವು ಘಟನೆಗಳ ಮುಸುಕು ಸರಿಸಿ ತೋರುವ ಪ್ರಯತ್ನ ಗಂಭೀರವಾಗಿ ಮಾಡಲಾಗಿದೆ. ಪಾತ್ರ ಚಿತ್ರಣದಲ್ಲಿ, ಕಥಾನಿರೂಪಣೆಯಲ್ಲಿ ಸಮಾಜದ ಕೆಳವರ್ಗದ ಜನರ ಬದುಕಿಗೆ ಹೆಚ್ಚಿನ ಆದ್ಯತೆ ನೀಡಲಾಗಿದೆ.

**ಸಾಧನೆಯ ಹಾದಿಯಲ್ಲಿ** (ಬದುಕು ಚಿತ್ರಣ)

ಡಾ|| ಇಂದಿರಾ ಬಿ. ಪಿ.

**ಪುಟ :** ೧೦೬ **ಬೆಲೆ :** ರೂ. ೭೫

**ಭಾರತೀ ಪ್ರಕಾಶನ,** ಸರಸ್ವತೀಪುರಂ, ಮೈಸೂರು - ೯

ತೀರಾ ಬಡಕುಟುಂಬದಿಂದ ಬಂದು ಸ್ವಯಂಸ್ಫೂರ್ತಿಯಿಂದ ಗಾಂಧೀ ವಿಚಾರಧಾರೆಗೆ ಮನಸೋತು ಬದುಕಿನಲ್ಲಿ ಸೇವಾ ಮನೋಭಾವನೆಗೆ ಮಹತ್ವ ನೀಡಿದವರು ಪ್ರಾಣೇಶರಾಯರು. ಸಮಾಜಸೇವಾಸಕ್ತರಾಗಿ ಅನೇಕ ಟ್ರಸ್ಟ್‌ಗಳ ಮೂಲಕ ಬಡವರಿಗಾಗಿ ಕಾರ್ಯಕ್ರಮಗಳನ್ನು ರೂಪಿಸಿ ಜನರಿಗೆ ಯಶಸ್ವಿಯಾಗಿ ತಲುಪುವಂತೆ ಸದ್ದಿಲ್ಲದೆ ಕಾರ್ಯ ನಿರ್ವಹಿಸಿದ್ದಾರೆ. ಇಂಥ ನಿಸ್ವಾರ್ಥಸೇವೆಯಿಂದ ಜನಾನುರಾಗಿಗಳೂ ಆಗಿದ್ದ ಅವರ ಬದುಕಿನ ಚಿತ್ರಣವನ್ನು ಮಾತ್ರವಲ್ಲದೆ ಅವರು ಈ ಸಾಧನೆಯ ದಾರಿಯಲ್ಲಿ ಸಾಗಿಬಂದು ಯಶಸ್ವಿಯಾದ ಬಗೆಯನ್ನೂ ಇಲ್ಲಿ ದಾಖಲಿಸಲಾಗಿದೆ.

**ಕನ್ನಡ ಕಾದಂಬರಿಗಳಲ್ಲಿ ವರ್ಣ ಮತ್ತು ವರ್ಗ ಸಂಘರ್ಷ**

ಆರ್. ವ್ಹಿ. ಭಂಡಾರಿ

**ಪುಟ :** ೧೯೦ **ಬೆಲೆ :** ರೂ. ೧೦೦

**ಶ್ರೀ ರಾಘವೇಂದ್ರ ಪ್ರಕಾಶನ,** ಅಂಬಾರ ಕೊಡ್ಲ, ಅಂಕೋಲಾ, ಉತ್ತರ ಕನ್ನಡ - ೫೮೧ ೩೧೪

ಒಬ್ಬ ಬರಹಗಾರನ ಒಳದನಿ, ನಿಲುವು, ನಿಷ್ಠೆ ಅಂತೆಯೇ ಒಂದು ಛಾಪು ಆತನ ಕೃತಿಗಳಿಂದ ಬಚ್ಚಿಡಲು ಎಂದೂ ಸಾಧ್ಯವಿಲ್ಲ. ಕೃತಿಕಾರನ ಸ್ವರೂಪವನ್ನು ಧರಿಸಿಕೊಂಡು ಸಾಹಿತ್ಯ ಜನ್ಮ ತಾಳುತ್ತದೆ. ಪ್ರಗತಿಪಂಥದ ಲೇಖಕರಾದ ನಿರಂಜನ, ಕಟ್ಟೀಮನಿ, ಚದುರಂಗ ಹಾಗೂ ಬಲ್ಲಾಳರ ಕೃತಿಗಳು ಬಂಡಾಯ ಸಾಹಿತ್ಯವೆಂದು ಗುರುತಿಸಲ್ಪಟ್ಟು ವರ್ಗ ಸಂಘರ್ಷದ ಬದುಕನ್ನು ಪರಿಚಯಿಸುತ್ತವೆ. ಇಂಥ ಸಾಹಿತ್ಯವನ್ನು ತಮ್ಮ ಸಂಶೋಧನೆಗಾಗಿ ಆಯ್ದುಕೊಂಡು ಅಲ್ಲಿ ಧಾರಾಳವಾಗಿ ಕಾಣಸಿಗುವ ವರ್ಗ, ವರ್ಣ ಸಂಘರ್ಷದ ಪ್ರಧಾನ ಚಿಂತನೆಯನ್ನು ವಿಶ್ಲೇಷಣಾತ್ಮಕವಾಗಿ ನಿರೂಪಿಸುವ ಕೃತಿ.



**ಹೈದರಾಲಿ - ಟಿಪ್ಪೂ : ಇತಿಹಾಸ ಕಥನ** (ಅಧ್ಯಯನ)

ಬಾರ್ಕೂರು ಉದಯ

**ಪುಟ :** ೧೧೨ **ಬೆಲೆ :** ರೂ. ೩೦

**ಮಾನವತಾ ವೇದಿಕೆ,** ವಿಕಾಸ, ಹ್ಯಾಮಿಲ್ಟನ್ ಕಾಂಪ್ಲೆಕ್ಸ್, ಮಂಗಳೂರು

ಈ ದೇಶದಲ್ಲೇ ಹುಟ್ಟಿ ಬೆಳೆದು ತಲೆಮಾರುಗಳು ಕಳೆದರೂ ಇನ್ನೂ ಪರಕೀಯರೆಂಬ ಹಣೆಪಟ್ಟಿಯೊಂದಿಗೆ ಸೆಣೆಸಬೇಕಾದ ದೌರ್ಭಾಗ್ಯ ಭಾರತೀಯ ಮುಸ್ಲಿಮರದ್ದು. ಅವರೊಂದಿಗೆ ಸೋದರರಂತೆ ವ್ಯವಹರಿಸದೆ ಹೆಜ್ಜೆ ಹೆಜ್ಜೆಗೂ ಅವಮಾನಿಸುವ ಹಿಂದೂಗಳು ಮೊದಲು ಮೊಗಲ್ ಆಳ್ವಿಕೆಯಲ್ಲಿ ಇದ್ದವರಲ್ಲವೆ ? ದಕ್ಷ ಆಡಳಿತಗಾರರಾಗಿದ್ದ ಟಿಪ್ಪೂ - ಹೈದರಾಲಿ ಪರಮತ ಸಹಿಷ್ಣುಗಳೂ ಆಗಿದ್ದರೆಂದು ಚರಿತ್ರೆ ತಿಳಿಸುತ್ತದೆ. ಹಾಗಾದರೆ ಮುಸ್ಲಿಮರ ಕೊಡುಗೆ ಭಾರತಕ್ಕೆ ಏನೇನೂ ಇಲ್ಲವೆ ? ಇತಿಹಾಸದ ಪುಟಗಳಿಂದ ಸಂಗ್ರಹಿಸಿದ ಕೆಲವು ಮಾಹಿತಿಗಳನ್ನು ಇಲ್ಲಿ ಚರ್ಚಿಸಲಾಗಿದೆ.



**ಪವಾಡಗಳ ಒಳಗುಟ್ಟುಗಳು**

ಸಿದ್ದರಾಜು, ಕೊತ್ತತ್ತಿ

**ಪುಟ :** ೧೨೭ **ಬೆಲೆ :** ರೂ. ೫೦

**ವಿಕಾಸ ಪ್ರಕಾಶನ,** ಕೊತ್ತತ್ತಿ, ಮಂಡ್ಯ ತಾಲ್ಲೂಕು, ಪಿನ್ - ೫೭೧ ೪೦೨

ಪವಾಡಗಳಲ್ಲಿ ನಂಬಿಕೆಯೆಂದರೆ ಅಲ್ಲಿ ವೈಚಾರಿಕ ತಿಳುವಳಿಕೆಯ ಅಭಾವವಿರುತ್ತದೆಂದೇ ಅರ್ಥ. ಎರಡು ದಶಕಗಳ ಹಿಂದೆ ವಿಚಾರವಾದಿ ಎಚ್. ಎನ್. ಅವರು ತನಗೊಂದು ಶೂನ್ಯದಿಂದ ಕುಂಬಳಕಾಯಿ ಸೃಷ್ಟಿಸಿಕೊಡುವಂತೆ ಸಾಯಿಬಾಬಾ ಬೆನ್ನುಹತ್ತಿ ಸವಾಲೆಸೆದಿದ್ದರು. ಪವಾಡ ಪುರುಷರು ಎಲ್ಲಿಯೂ ಎಂದೂ ವೈಜ್ಞಾನಿಕ ತಿಳುವಳಿಕೆ ಇರುವ ಜನತೆಯೆಂದ ಪ್ರದರ್ಶನಕ್ಕೆ ಮುಂಚೆ ಪರೀಕ್ಷೆಗೊಳಪಡಲು ಸಿದ್ಧರಿರುವುದಿಲ್ಲ. ಪವಾಡಗಳೆಂದು ಹೇಳಿಕೊಳ್ಳುವ ಕೆಲವು ಚಮತ್ಕಾರಗಳನ್ನು ನಿಸರ್ಗದ ವೈಜ್ಞಾನಿಕ ತಳಹದಿಯ ನೆಲೆಯಲ್ಲಿಯೇ ಮಾಡುವುದನ್ನು ಈ ಪುಸ್ತಕದಲ್ಲಿ ವಿವರಿಸಲಾಗಿದೆ.

**ಇಮ್ಮಾವು** (ವಿಮರ್ಶಾ ಲೇಖನಗಳು)

ಪ್ರೊ|| ಶಿವರಾಮಯ್ಯ

**ಪುಟ :** ೧೨೦ **ಬೆಲೆ :** ರೂ. ೧೦೦

**ಪುಸ್ತಕ ಪ್ರಪಂಚ,** ನಂ. ೬೬೧/ಎ, ೪ನೇ ಮುಖ್ಯರಸ್ತೆ, ಫೈವ್‌ಲೈನ್, ಶ್ರೀನಗರ, ಬೆಂಗಳೂರು - ೫೬೦ ೦೫೦

ಒಂದು ಯುದ್ಧ ಪ್ರಧಾನ - ಇನ್ನೊಂದು ಶಾಂತಿ ಪ್ರಧಾನ ಕಾವ್ಯಗಳಾದ ಪಂಪನ ವಿಕ್ರಮಾರ್ಜುನ ವಿಜಯ ಮತ್ತು ಆದಿಪುರಾಣಗಳ ಒಟ್ಟು ಸಾಹಿತ್ಯದ ಮೇಲೆ ಪ್ರೊ|| ಶಿವರಾಮಯ್ಯನವರ ವಿಮರ್ಶಾತ್ಮಕ ಬರಹಗಳು. ಇನ್ನೂ ಮುಂದುವರೆದು ಕುಮಾರವ್ಯಾಸ - ದೇವಚಂದ್ರ ಮಾತ್ರವಲ್ಲದೆ ಇತ್ತೀಚಿನ ಕವಿ ಸಾಹಿತಿ ಕುವೆಂಪು ಸಾಹಿತ್ಯದವರೆಗೂ ಬಹು ಅಮೂಲ್ಯ ವಿಚಾರ ಪ್ರಚೋದಕ ಪ್ರೌಢ ಬರಹಗಳು. ಇಲ್ಲಿ ಅತ್ಯಂತ ಸೊಗಸಾದ ಭಾಷಾಶೈಲಿ ಇದ್ದು ಈ ನಾಲ್ಕು ಕವಿಗಳ ಸಾಹಿತ್ಯದ ದೃಷ್ಟಿ ಗುರಿ ಅಂದಿನ ಸಮಾಜದಲ್ಲಿ ಯಾವ ಕಡೆಗಿತ್ತೆಂದು ಬೆನ್ನುಹತ್ತಿ ಸ್ಪಷ್ಟವಾಗಿ ಗುರುತಿಸಿದ್ದಾರೆ.

**ಸಮಚಿತ್ತ** (ಲೇಖನಗಳು)

ವಿಶ್ವನಾಥ ಕಾರ್ನಾಡ

**ಪುಟ :** ೧೯೬ **ಬೆಲೆ :** ರೂ. ೧೨೫

**ಶ್ರೀ ರಾಘವೇಂದ್ರ ಪ್ರಕಾಶನ,** ಅಂಬಾರ ಕೊಡ್ಲ, ಅಂಕೋಲಾ - ೫೮೧ ೩೧೪

ನಮ್ಮ ಕನ್ನಡ ಸಾಹಿತ್ಯದಲ್ಲಿನ ಕೆಲವು ವಿಚಾರಗಳ ಬಗ್ಗೆ ನಿಸ್ಸಂಕೋಚವಾಗಿ ತುಲನೆ ಮಾಡಿರುವ ಲೇಖನಗಳು ಒಂದು ಭಾಗವಾದರೆ ಪ್ರಚಲಿತ ವಿದ್ಯಮಾನಗಳ ಬಗ್ಗೆ ಮತ್ತು ಮುಂಬಯಿ ಕನ್ನಡಿಗರ ಕೆಲವು ಸಾಧನೆಗಳ ಬಗ್ಗೆಯೂ ಕೆಲವು ಬರಹಗಳಿವೆ. ನಮ್ಮ ಸಂಸ್ಕೃತಿ, ಜಾನಪದ ಪ್ರಗತಿಶೀಲ ವಿಚಾರಗಳು, ಅಭಿವೃದ್ಧಿಯ ಮುನ್ನಡೆ ಇಲ್ಲಿನ ಲೇಖನಗಳಲ್ಲಿ ಚರ್ಚಿತವಾಗಿವೆ. ತಮ್ಮ ಸಾಹಿತ್ಯಾಭ್ಯಾಸದಲ್ಲಿ ವಸ್ತುವಿನ ಆಳವಾದ ಗ್ರಹಿಕೆಯಂತೆಯೇ ಸುತ್ತಮುತ್ತಲಿನ ಬದುಕಿನ ಇಂದಿನ ಚಲನವಲನಗಳನ್ನು ಸೂಕ್ಷ್ಮವಾಗಿ ಕಂಡು ಅಭಿವ್ಯಕ್ತಿಗೊಳಿಸಿದ್ದಾರೆ.



**ಹೆಣ್ಣು - ಹಕ್ಕು - ಹೋರಾಟ** (ಲೇಖನಗಳು)

ಡಾ|| ವೆಂ. ವನಜ

**ಪುಟ :** ೧೦೪ **ಬೆಲೆ :** ರೂ. ೮೦

**ಸಮತಾ ಅಧ್ಯಯನ ಕೇಂದ್ರ,** ಮೈಸೂರು

ಮಹಿಳೆಯರ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಅವರ ಹಕ್ಕುಗಳಿಗಾಗಿ ಕರ್ನಾಟಕದಲ್ಲಿ ನಡೆಸಿದ ಹೋರಾಟಗಳನ್ನು ಸಾಕಷ್ಟು ಅಧ್ಯಯನ ಮಾಡಿ ಇಲ್ಲಿನ ಲೇಖನಗಳನ್ನು ರೂಪಿಸಲಾಗಿದೆ. ಹೆಣ್ಣು ಮಕ್ಕಳು ಶಾಲೆ ಕಲಿತು ಡಿಗ್ರಿ ಪಡೆದು ಕೆಲಸ ಪಡೆದಾಕ್ಷಣ ಅವರ ಸಮಸ್ಯೆಗಳೆಲ್ಲ ಪರಿಹಾರವಾದುವೆನ್ನುವುದು ಸಂಪೂರ್ಣ ಸತ್ಯವಲ್ಲದಿದ್ದರೂ ಶಿಕ್ಷಣದಿಂದಾಗಿ ಎಚ್ಚೆತ್ತುಕೊಳ್ಳುವುದಂತೂ ನಿಜ. ಮುಖ್ಯವಾಗಿ ನಮ್ಮಲ್ಲಿ ಮಕ್ಕಳನ್ನು ಬೆಳೆಸುವ ರೀತಿಯಾದ ಗಂಡು ಮತ್ತು ಹೆಣ್ಣು ಎಂಬಂತಹ ತಾರತಮ್ಯವೇ ಮುಂದೆ ಬದುಕಿನಲ್ಲಿ ಹೆಣ್ಣಿಗೆ ಬಹುದೊಡ್ಡ ಸಮಸ್ಯೆಯಾಗಿ ಉಳಿದುಬಿಡುತ್ತದೆ.

— ಇಂದಿರಾ ಕುಮಾರಿ

# ಸಾಂಖ್ಯದರ್ಶನ
## ಪರಂಪರೆಯ ವಾತಾಪಿ ಗರ್ಭದೊಂದಿಗೆ ದಾರ್ಶನಿಕ ಪ್ರತಿಭಟನೆ



**ಹ**ಲವು ವರ್ಷಗಳಿಂದ ದ್ವಂದ್ವಮಾನ ಭೌತವಾದವನ್ನು ಯುವಕರಿಗೆ ಬೋಧಿಸುತ್ತಲೇ ಬಂದಿರುವ ಹಿರಿಯ ಮಾರ್ಕ್ಸ್‌ವಾದಿ ಪ್ರೊ॥ ಎಸ್. ಎಸ್. ಹಿರೇಮಠರು ತಾವು ಪ್ರಾರಂಭಿಸಿರುವ ಕರ್ನಾಟಕ ದರ್ಶನ ಮಾಲಿಕೆಯಲ್ಲಿ ಮೊದಲನೆಯದಾಗಿ 'ಸಾಂಖ್ಯದರ್ಶನ' ಪುಸ್ತಕ ಹೊರತಂದಿದ್ದಾರೆ. ವಿಶ್ವವಿದ್ಯಾಲಯ, ಅಕಾಡೆಮಿ, ಅಥವಾ ಪ್ರಾಧಿಕಾರಗಳಂತಹ ಸಾಂಸ್ಥಿಕ ವ್ಯವಸ್ಥೆಗಳು ಕೈಗೆತ್ತಿಕೊಳ್ಳಬಹುದಾದ ದೊಡ್ಡ ಸಾಂಸ್ಕೃತಿಕ ಜವಾಬ್ದಾರಿಯನ್ನು ಪ್ರೊ॥ ಹಿರೇಮಠರು ಏಕಾಂಗಿಯಾಗಿ ಕೈಗೆತ್ತಿಕೊಂಡಿದ್ದಾರೆ ಎಂಬುದು ಗಮನಾರ್ಹ. ಅದಕ್ಕಾಗಿ ಅವರು ಅಭಿನಂದನಾರ್ಹರು ಕೂಡ.

ವೈದಿಕೇತರ ಸಾಂಸ್ಕೃತಿಕ ಜ್ಞಾನಪರಂಪರೆ, ತಾತ್ವಿಕ ಒಳನೋಟಗಳು, ಮತ್ತು ಜೀವನದರ್ಶನಗಳು ಅನಾತ್ಮವಾದಿಯಾದ ಶುದ್ಧ ಭೌತವಾದವಾಗಿ ಮತ್ತೆ ಪಾರಂಪರಿಕ ಪ್ರಮುಖ ಪ್ರವಾಹಸ್ಥಾನ ಪಡೆಯಬೇಕಾದ ಸಾಂಸ್ಕೃತಿಕ ತುರ್ತಿನ ಈ ದಿನಮಾನಗಳಲ್ಲಿ ಅವೈದಿಕ ದರ್ಶನ ಪರಂಪರೆಗಳೆಡೆಗೆ ಪ್ರೊ॥ ಹಿರೇಮಠರು ಸಾಂಖ್ಯದರ್ಶನದ ಮೂಲಕ ಕೈಮರ ತೋರಿಸಿದ್ದಾರೆ. ಅವರ 'ಸಾಂಖ್ಯದರ್ಶನ' ದರ್ಶನ ಪರಂಪರೆಗಳ ಪ್ರಸ್ತಾಪ ಮತ್ತು ವೈದಿಕ ಸಾಂಸ್ಕೃತಿಕ ಆಧಿಪತ್ಯದಿಂದ ಆದ ಪ್ರತಿಕೂಲತೆಯ ಬಗ್ಗೆ ಒಂದು ಪ್ರವೇಶಿಕೆಯನ್ನು ತೆರೆದಿರಿಸಿದೆ.

ಭೌತವಾದದ ಮೂಲ ಸ್ವರೂಪಗಳನ್ನೇ ಗರ್ಭೀಕರಿಸಿಕೊಂಡಿರುವ ಸಾಂಖ್ಯತತ್ವವನ್ನು ಮೂಲ ಆಕರ ಲಭ್ಯವಿಲ್ಲದ್ದರಿಂದ ಹಿರೇಮಠರು ಮತ್ತೆ ವೈದಿಕ ಉಪನಿಷತ್ತುಗಳಲ್ಲಿ, ಕನ್ನಡನಾಡಿನ ಶಾಸನಗಳಲ್ಲಿ, ಕೈಫಿಯತ್‌ಗಳಲ್ಲಿ ತಡಕಿದ್ದಾರೆ. ಇದರದೊಂದು ಸುದೀರ್ಘ ಪ್ರಸ್ತಾವ 'ಸಾಂಖ್ಯದರ್ಶನ' ತತ್ವಕ್ಕೆ ಮುನ್ನ ಸೋದಾಹರಣವಾಗಿ ಹಿರೇಮಠರು ನೀಡುತ್ತಾರೆ. ಹಾಗೆ ನೋಡಿದರೆ ಕಪಿಲ ಮುನಿ ಪರಂಪರೆಯೊಂದಿಗೆ ಪ್ರಾರಂಭವಾಗುವ ಈ ಸಾಂಖ್ಯದ ಪ್ರಾಚೀನತೆ ಅಪಾರವಾದುದು. ಸಾಂಖ್ಯಕಾರಿಕೆಯಾಗಿ ಮೊದಲ ಆಕರ ಗ್ರಂಥ ಲಭ್ಯವಾಗುವುದು – ಕ್ರಿ.ಶ. ಆರಂಭದ ಶತಮಾನಗಳಲ್ಲಿ – ಈಶ್ವರಕೃಷ್ಣನಿಂದ. ನಂತರ ಸಾಂಖ್ಯವೆಂಬುದು ಒಂದು ತಂತ್ರ ಎಂದಷ್ಟೇ ಕರೆದವರು ಶಂಕರಾಚಾರ್ಯರು. ಹತ್ತನೆಯ ಶತಮಾನದ ಈಚಿನ ಕನ್ನಡ ಶಾಸನಗಳಲ್ಲಿ, ಕನ್ನಡ ನಾಡಿನ ಶರಣರ ವಚನಗಳಲ್ಲಿ, ಜೈನ ದಾಖಲೆಗಳಲ್ಲಿ ಲೇಖಕರು ಸಾಂಖ್ಯದ ಪ್ರಸ್ತಾಪಗಳನ್ನು ಉಲ್ಲೇಖಿಸಿದ್ದಾರೆ. ಮಹಾಭಾರತದಲ್ಲಿ, ಋಗ್ವೇದದಲ್ಲಿ ಉಲ್ಲೇಖಗಳಿರುವುದನ್ನು ಪ್ರಸ್ತಾಪಿಸಿ ಸಾಂಖ್ಯದ ಪ್ರಾಚೀನತೆಯನ್ನು ಲೇಖಕರು ಮನವರಿಕೆ ಮಾಡಿಕೊಡುತ್ತಾರೆ.

ತಾತ್ವಿಕವಾಗಿ ಸಾಂಖ್ಯವನ್ನು, ಅದರ ಭೌತವಾದಿ ಮಹತ್ವವನ್ನು ತಿಳಿಸುವ ಮುನ್ನ ಇಂತಹದೊಂದು ಸುದೀರ್ಘ ಪ್ರಸ್ತಾವನೆ ಸಾಂಖ್ಯದ ಬಗ್ಗೆ ಗೊಂದಲಗೊಳಿಸಲು ಸಾಕು. ವೈದಿಕ ಪರಂಪರೆ ಸಾಂಖ್ಯವನ್ನು ತನ್ನ ಆಕರಗಳಲ್ಲಿ ವಿಪುಲವಾಗಿ ಬಳಸಿಕೊಂಡ ಬಗ್ಗೆ ಒಂದು ಆಕ್ರೋಶ ಈ ಎಲ್ಲ ಹಂತಗಳಲ್ಲಿ ಪ್ರಾಸಂಗಿಕವಾಗಿ ಪ್ರಸ್ತಾಪವಾಗುತ್ತಲೇ ಬಂದಿದೆ. ಇಂತಹ ವೈಚಾರಿಕ ಕೃತಿಯಲ್ಲಿ ನಿರೀಕ್ಷಿಸಬಹುದಾದ ನಿರುದ್ವಿಗ್ನ ನಿರೂಪಣಾ ಶೈಲಿಯನ್ನು ತೊರೆದಿರುವ ಹಿರೇಮಠರು ಸಾಂಖ್ಯದ ಹಿರಿಮೆಯನ್ನು – ತಾತ್ವಿಕ ವಿವರಣೆಗೆ ಮುನ್ನ – ಪ್ರತಿಷ್ಠಾಪಿಸುವ ಭರದಲ್ಲಿ ಬಹಳಷ್ಟು ಬಾರಿ ಭಾವೋದ್ವಿಗ್ನತೆಗೆ ಈಡಾಗುತ್ತಾರೆ.




ಪುಸ್ತಕದ ೯ನೇ ಅಧ್ಯಾಯದಲ್ಲಿ ಸಾಂಖ್ಯ ತತ್ವದ ವಿವರಣೆಗೆ ತೊಡಗುವ ವೇಳೆಗಾಗಲೇ ಲೇಖಕರು ಸಾಂಖ್ಯವನ್ನು ಬಹಳಷ್ಟು ಅಮೂರ್ತಗೊಳಿಸಿದಂತೆ ಅಸ್ಪಷ್ಟ ಗ್ರಹಿಕೆಗಳು ಮೂಡುತ್ತವೆ. ಅವೈದಿಕ ಚಿಂತನೆಯ ಪ್ರಮುಖ ಲಕ್ಷಣಗಳಾದ ಮೂರ್ತತೆ, ಸ್ಪಷ್ಟ ಮತ್ತು ಲಾಕ್ಷಣಿಕ ಮೋಹವನ್ನು ತೊರೆದ – ಖಚಿತತೆಗಳನ್ನು ಪ್ರಾರಂಭದಿಂದಲೇ ಪಡೆಯಲು ಪ್ರಾಯಶಃ ಲೇಖಕರ ಸೃಜನಶೀಲ ನಿರೂಪಣಾ ವಿಧಾನ ತೊಡಕಾಗಿರಬೇಕು.

''ಪ್ರಕೃತಿಯನ್ನು ಪ್ರಧಾನವೆಂದು ಭಾವಿಸಿದ ಸಾಂಖ್ಯ 'ಸ್ತ್ರೀತತ್ವ'ವಾಗಿದ್ದು ೫ ಜ್ಞಾನೇಂದ್ರಿಯ, ೫ ಕರ್ಮೇಂದ್ರಿಯ, ೫ ಭೂತಗಳು, [illegible] ತನ್ಮಾತ್ರೆ ಮತ್ತು ೩ ಮೆದುಳು ಸಂಬಂಧಿ ಸಂಗತಿ ಜೊತೆಗೆ ಮೂಲ ಪ್ರಕೃತಿ ಸೇರಿ ೨೪ ತತ್ವಗಳು'' ಎನ್ನುತ್ತಾರೆ ಲೇಖಕರು (ಪುಟ ೫೭). ಈ ಭೌತವಾದಿ ನೆಲೆಗೆ ೨೫ನೆಯದಾಗಿ ''ಪುರುಷ'' ಸೇರಿಸಿದ ಈಶ್ವರಕೃಷ್ಣ ಕಾರಿಕೆಯಿಂದಾಗಿ ಭೌತವಾದಿಯಾಗಿದ್ದು ಸಾಂಪ್ರದಾಯಿಕ 'ನಿರೀಶ್ವರ' ವಾದದಂತೆ ಪರಿಭಾವಿಸಿದ್ದು ಇತ್ಯಾದಿಗಳ ಬಗ್ಗೆ ಚರ್ಚೆಗೆ ತೊಡಗುವ ಲೇಖಕರು, ಚರ್ಚೆಯನ್ನೇ ಪ್ರಧಾನವಾಗಿ ಬೆಳೆಸಿ ಬೇರೆಬೇರೆ ಆಕರಗಳಲ್ಲಿ ಸಾಂಖ್ಯದ ವೈರುಧ್ಯಗಳನ್ನು ಪ್ರಕಟಿಸಿದ್ದಾರೆ.

ತಮ್ಮ ಸಾಂಖ್ಯ ಚರ್ಚೆಗೆ ರೋಮಿಲಾ ಥಾಪರ್, ಡಿ. ಡಿ. ಕೋಸಾಂಬಿ, ಹಿರಿಯಣ್ಣ ಮುಂತಾದ ವಿದ್ವಾಂಸರ ಹೇಳಿಕೆಗಳನ್ನು ಪ್ರಮಾಣವಾಗಿ ಬಳಸುವ ಲೇಖಕರು ಕೆ. ರಾಮಯ್ಯನವರ 'ಸಿಂಧ್ ಮಾದಿಗರ ಸಂಸ್ಕೃತಿ'ಯ ಮಿತಿಯನ್ನು ಪ್ರಶ್ನಿಸಿಕೊಳ್ಳುತ್ತಲೇ, ಸಾಂಖ್ಯ-ಯೋಗ ದರ್ಶನಗಳು ಕರ್ನಾಟಕದ ಹೊಲೆಯ, ಮತ್ತು ಆಂಧ್ರದ ಮಾದಿಗ ಹೆಣ್ಣು ಮಕ್ಕಳ ಕೊಡುಗೆ ಎಂದು ಪ್ರತಿಷ್ಠಾಪಿಸುತ್ತಾರೆ. ಅದಕ್ಕೆ ಪೂರಕ ಸಮರ್ಥನೆಗಳು ಪುಸ್ತಕದಲ್ಲಿ ವಿರಳ ಎಂಬುದು ಗೊಂದಲಕಾರಿ.

ಲೇಖಕರ ಮಾತನ್ನು, ಚರ್ಚಿತ ನಿಲುವನ್ನು ಒಪ್ಪುವುದಾದರೆ, ಸಾಂಖ್ಯದಂತಹ ಪ್ರಭಾವೀ ಭೌತ ಸಿದ್ಧಾಂತ ಕರ್ನಾಟಕ ಮೂಲದ ಅವೈದಿಕರ ಕೊಡುಗೆ ಎಂಬುದು ಹೆಮ್ಮೆಪಡಬೇಕಾದ ವಿಷಯ. ಸಾಂಸ್ಕೃತಿಕ ರಾಜಕಾರಣ ಏಕೀಕೃತವಾಗುತ್ತಿರುವ ಈ ಆಧುನಿಕ ಸನ್ನಿವೇಶದಲ್ಲಿ ಈ ರೀತಿಯ ಅವೈದಿಕ ದರ್ಶನ ಪರಂಪರೆ ಬಹುಜನ ಸಮಾಜವನ್ನು ಸ್ವಾಭಿಮಾನಿ ಮತ್ತು ಸಶಕ್ತ ಮಾಡಬೇಕಿದೆ. ವಿಸ್ಮೃತಿಯ ಹಿಂಜರಿಕೆಗೆ ಈಡಾಗಿದ್ದ ಸಮುದಾಯಕ್ಕೆ ಈ ಮಾಲಿಕೆಯ ಪ್ರಯತ್ನ ಖಂಡಿತ ಸಾಂಸ್ಕೃತಿಕ ನಿಖರತೆ ಮತ್ತು ಪ್ರಾಚೀನತೆಯನ್ನು ತಂದುಕೊಡಲು ಸಾಧ್ಯ. ಲೇಖಕರು ನಂಬುವಂತೆ ಇಂತಹ ಸಾಂಸ್ಕೃತಿಕ ನಿಖರತೆಯೇ ಏಕ ಸಂಸ್ಕೃತಿಯ ಪ್ರಧಾನ ರಾಜಕೀಯ ಬಿರುಗಾಳಿಯಿಂದ ಬಹುಸಂಸ್ಕೃತಿಯ ಭಾರತೀಯ ಸಮಾಜವನ್ನು ಕಾಪಾಡಲು ಸಾಧ್ಯ.

ಇಂತಹದೊಂದು ಮಾಲಿಕೆಗೆ ಮುನ್ನುಡಿ ಬರೆದಿರುವ ಡಾ॥ ನಿಂಗಪ್ಪ ಮುದೇನೂರು ಅಧ್ಯಯನಶೀಲ ಪ್ರವೇಶಿಕೆ ನೀಡುವಲ್ಲಿ ವಿಫಲರಾದುದು ಒಂದು ನಿರಾಸೆ. ಹಾಗೆ ನೋಡಿದರೆ ಈ ಮಾಲಿಕೆಯೇ ಅವೈದಿಕ ದರ್ಶನ ಪರಂಪರೆಗೆ ಪ್ರಸ್ತಾವನೆಯಂತಿರುವುದರಿಂದ ಇದಕ್ಕೆ ಮುನ್ನುಡಿಗಳ ಅಗತ್ಯ ಕಂಡುಬರದು. ಈ ಪುಸ್ತಕದ ಓದಿನ ನಂತರ ಕನ್ನಡ ಮನಸ್ಸುಗಳು ಇದೇ ಲೇಖಕರಿಂದ ಮೂಡಿಬರಬಹುದಾದ ಪಾಶುಪತ, ಕಾಳಾಮುಖ, ನ್ಯಾಯ, ವೈಶೇಷಿಕ ದರ್ಶನಗಳಿಗಾಗಿ ಕಾಯುತ್ತವೆ ಎಂಬುದೇ ಈ ಕೃತಿಯ ಸಾರ್ಥಕ ಅಂಶ.


ಆನಂದ್ ಋಗ್ವೇದಿ
೬೮೬/೭ಬಿ, ಮಹಡಿ, ೧ನೇ ಮುಖ್ಯರಸ್ತೆ, ೪ನೇ ತಿರುವು
ಭಗತ್‌ಸಿಂಗ್ ನಗರ, ದಾವಣಗೆರೆ - ೫೭೭ ೦೦೨

ಚಂದ್ರಶೇಖರ್ ಧೂಲೇಕರ್



# ಹೊಯ್ಸಳ ವಾಸ್ತುಶಿಲ್ಪ ಕಲೆ

ಶಿಲ್ಪ ಎನ್ನುವ ಮಾತು ಬಹಳ ವ್ಯಾಪಕವಾದ ಅರ್ಥವನ್ನು ಪಡೆದಿತ್ತು. ಪ್ರಸಿದ್ಧವಾದ ೬೪ ಕಲೆಗಳಲ್ಲಿ ''ಶಿಲ್ಪ'' ಸಹ ಒಂದು. ವಾಸ್ತುಶಿಲ್ಪ ಆದರಲ್ಲಿನ ಒಂದು ಭಾಗವಾಗಿತ್ತು. ವಾಸ್ತು ಎಂದರೆ ವಸ್ತುಗಳಿಂದ ನಿರ್ಮಿತವಾದುದು, ಎಂದು ಉಗಮದ ಹಂತಗಳಲ್ಲಿ ಅರ್ಥೈಸಲಾಗುತ್ತಿತ್ತು. ಕಟ್ಟಡ ನಿರ್ಮಾಣ, ಪಟ್ಟಣ ನಿರ್ಮಾಣದ ಯೋಜನೆ, ಉದ್ಯಾನವನಗಳು, ರಸ್ತೆಗಳು, ಕೊನೆಗೆ ಪೀಠೋಪಕರಣಗಳಿಗೂ ಈ ''ವಾಸ್ತು'' ಎಂಬ ಪದ ಅನ್ವಯವಾಗುತ್ತಿತ್ತು. ಇದು ವಾಸ್ತುಶಿಲ್ಪ ಗ್ರಂಥ ''ಮಾನಸಾರ'' ತಿಳಿಸುವ ಅಂಶ. ಮುಂದೆ ಈ ಎರಡೂ ಪದಗಳು ಪರಿಮಿತಗೊಂಡು **''ವಾಸ್ತುಶಿಲ್ಪ''** ಎಂದಾಯಿತು. ಕಟ್ಟಡಗಳ ನಿರ್ಮಾಣ, ಮತ್ತು ''ಶಿಲ್ಪ'' ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥ ಕ್ರಮೇಣ ಬೆಳೆದುಬಂದಿತು. ಸಾಮಾನ್ಯವಾಗಿ ಎಲ್ಲ ಕಲೆಗಳಿಗೂ ಹೇಳುವಂತೆ ವಾಸ್ತುಶಿಲ್ಪಕ್ಕೂ ನಮ್ಮ ಶಾಸ್ತ್ರವು ದೈವಿಕವಾದ ಮೂಲವನ್ನೇ ಹೇಳುತ್ತದೆಂದು ಮೂಲಗ್ರಂಥ ಪ್ರತಿಪಾದಿಸುತ್ತದೆ. ಇತರ ಕಲೆಗಳಂತೆಯೇ ವಾಸ್ತುಶಿಲ್ಪವೂ ಆಯಾಕಾಲದ, ಆಯಾಜನಾಂಗದ, ಆಂತರಿಕ ಆಕಾಂಕ್ಷೆ ಅನುಭವಗಳಿಗೆ ಕನ್ನಡಿಯನ್ನು ಹಿಡಿಯಬಲ್ಲದೆನ್ನುವುದು ಮುಖ್ಯವಾಗುತ್ತದೆ.

**ವಾಸ್ತುಶಿಲ್ಪವೆಂದರೇನು ?** ''ಲಭ್ಯವಿರುವ ಜಾಗವನ್ನು ಕಲಾತ್ಮಕವಾಗಿ ಸಂಘಟಿಸುವುದು'' ಎಂದು ಅನೇಕ ವಿದ್ವಾಂಸರು ಒಟ್ಟಾರೆ ವಾಸ್ತುಶಿಲ್ಪವನ್ನು ವ್ಯಾಖ್ಯಾನಿಸುತ್ತಾರೆ. ವಾಸ್ತುಶಿಲ್ಪವು ನಿರಾಕಾರವಾದ ಆಕಾಶವನ್ನೇ ವ್ಯವಸ್ಥೆಗೊಳಿಸಿ ಅದಕ್ಕೊಂದು ರೂಪ ಕೊಡುವ ಕಲೆ. ಗೋಡೆಗಳನ್ನು ಹಾಕಿ, ಮೇಲೆ ಛಾವಣಿಗಳನ್ನಿಟ್ಟು ಅನಂತವಾದ ಆಕಾಶವನ್ನು ಸಾಂತಗೊಳಿಸಿ ಅದನ್ನು ಉಪಯೋಗಕ್ಕಾಗಿ ಹಿಡಿದಿಡುತ್ತದೆ, ಮತ್ತು ಆ ಮೂಲಕ ಸಂಪೂರ್ಣವಾಗಿ ಹೊಸ ರೂಪಗಳನ್ನು ಸೃಷ್ಟಿಸುತ್ತದೆ, ಕಲೆಯಾಗಿ ಅರಳುತ್ತದೆ. ಸೌಂದರ್ಯೋಪಾಸನೆಯ ಸಮ್ಮೋಹಕವಾಗಿ ಇದು ತೋರುತ್ತದೆ. ಈ ವಾಸ್ತು ಶಿಲ್ಪಕಲೆಯು ಪ್ರಾಯಶಃ ಐತಿಹಾಸಿಕ ದೇವಾಲಯ, ಮಸೀದಿ, ಗುಡಿ, ಚರ್ಚುಗಳಲ್ಲಿ ಅನಾವರಣಗೊಂಡಿರುತ್ತದೆ. ಇದನ್ನು ನಿರ್ಮಾಣ ಮಾಡುವ ಸೃಷ್ಟಿಕರ್ತನೆಂದರೆ ''ಸ್ಥಪತಿ'' ಅಥವಾ ''ವಿಶ್ವಕರ್ಮ'' ಎಂದು ಶಾಸ್ತ್ರಗ್ರಂಥಗಳು ತಿಳಿಸುತ್ತವೆ. ಕಾಲದುದ್ದಕ್ಕೂ ಒಂದು ಜನಾಂಗದ ಅಭಿರುಚಿಯ ಚರಿತ್ರೆಯಾಗಿ ನಮ್ಮ ಮುಂದೆ ಅಭಿವ್ಯಕ್ತಿಗೊಳ್ಳುತ್ತದೆ. ಇದು ಕಾಲಕಾಲಕ್ಕೆ ಆಗ ಧಾರ್ಮಿಕ, ಸಾಮಾಜಿಕ, ರಾಜಕೀಯ, ಬದಲಾವಣೆಗಳಿಗೆ ಅನುಗುಣವಾಗಿ ಬೆಳೆಯುತ್ತ ಬಂದದ್ದನ್ನು ನಾವು ವಿವಿಧ ಕಾಲಾಂತರಗಳ ವಾಸ್ತುಕಲೆಯಿಂದ ತಿಳಿಯುತ್ತೇವೆ.

**ವಾಸ್ತುಶಿಲ್ಪ ಕಲೆಯ ಘಟ್ಟಗಳು :** ಕರ್ನಾಟಕದ ವಾಸ್ತುಶಿಲ್ಪವನ್ನು ಬದಲಾದ ರಾಜಕೀಯ ಸಂದರ್ಭ ಮತ್ತು ಕಲಾಸಕ್ತಿಯ ರೂಪಗಳು ಬದಲಾಗುತ್ತ ಬಂದಂತೆ ಬೇರೆ ಬೇರೆ ರೂಪಗಳಲ್ಲಿ ಹೆಸರಿಸಿಕೊಂಡು ಬಂದಿದೆ. ತಜ್ಞರ ಅಭಿಪ್ರಾಯದಂತೆ ಹೇಳುವುದಾದರೆ –

೧. ಚಾಲುಕ್ಯ ಪೂರ್ವಯುಗ : ಕ್ರಿ.ಶ. ೫ನೇ ಶತಮಾನದವರೆಗಿನ ಕಾಲವನ್ನು ಇಲ್ಲಿ ಸೇರಿಸಲಾಗಿದೆ. (ಕದಂಬ ಶೈಲಿಯೂ ಇದರಲ್ಲಿ ಸೇರಿದೆ)

೨. ಚಾಲುಕ್ಯ ಯುಗ : ೬ರಿಂದ ೧೦ನೇ ಶತಮಾನದ ಅವಧಿಯಲ್ಲಿ ರೂಪುಗೊಂಡ ವಾಸ್ತುಶಿಲ್ಪವನ್ನು ಈ ಅವಧಿಯಲ್ಲಿ ತರಲಾಗಿದೆ.

೩. ಹೊಯ್ಸಳ ಯುಗ : ೧೧ರಿಂದ ೧೩ನೇ ಶತಮಾನದವರೆಗೆ.

೪. ವಿಜಯನಗರದ ಕಾಲ : ೧೪ನೇ ಶತಮಾನದಿಂದ ೨೦ನೇ ಶತಮಾನದವರೆಗಿನ ಕಾಲವನ್ನು ವಿಜಯನಗರ ವಾಸ್ತುಶೈಲಿಯ ವಿಭಾಗದಲ್ಲಿ ಸೇರಿಸಲಾಗಿದೆ.

೫. ಇಸ್ಲಾಂ ವಾಸ್ತುಶಿಲ್ಪ : ವಿಜಯನಗರದ ಕಾಲದ ಸುಮಾರಿನಿಂದಲೇ ಬೆಳೆದ ಇದು ಸ್ವತಂತ್ರವಾದ ಶೈಲಿಯಿಂದ ಅಭಿವೃದ್ಧಿಯಾದ್ದರಿಂದ ಪ್ರತ್ಯೇಕಿಸಿ ಹೆಸರಿಸಲಾಗಿದೆ.

**ಹೊಯ್ಸಳ ವಾಸ್ತುಶಿಲ್ಪ ಕಲೆ :** ಈ ವಾಸ್ತುಕಲೆಯು ಆಯಾಕಾಲದ ಚಾರಿತ್ರಿಕ ಚೇತನವಾಗಿ ಬದಲಾಗುತ್ತ ಅಥವಾ ಒಂದರ ಸ್ಫೂರ್ತಿಯನ್ನು ಇನ್ನೊಂದಕ್ಕೆ ಪಡೆಯುತ್ತ ಮಾರ್ಪಾಡುಗಳೊಂದಿಗೆ ರೂಪಗೊಳ್ಳುತ್ತ ಬಂದಿದೆ. ಇದರಂತೆ ಚಾಲುಕ್ಯ ಶೈಲಿಯ ಮುಂದಿನ ಬೆಳವಣಿಗೆಯು ಹೊಯ್ಸಳ ವಾಸ್ತುಶಿಲ್ಪ ಶೈಲಿಯಲ್ಲಿ ಪರ್ಯವಸಾನಗೊಂಡಿದೆ. ಹೊಯ್ಸಳ ಶೈಲಿಯನ್ನು ಪ್ರತ್ಯೇಕಿಸದೆ ''ಕಸಿನ್ಸ್'' ಎಂಬಾತ ಇದನ್ನು ಕೂಡ ಚಾಲುಕ್ಯ ಶೈಲಿಯಲ್ಲಿ ಅಂತರ್ಗತಗೊಳಿಸಿದ್ದನು. ಚಾಲುಕ್ಯ ಶೈಲಿಯಲ್ಲಿ ಇಲ್ಲದ ಕೆಲವು ವಿಶಿಷ್ಟ ಅಂಶಗಳನ್ನು ಹೊಯ್ಸಳ ವಾಸ್ತು ಶೈಲಿಯಲ್ಲಿ ಕಾಣಬಹುದಾದ್ದರಿಂದ ತಜ್ಞರು ಇದಕ್ಕೆಂದೇ ಒಂದು ಶೈಲಿಯನ್ನೇ ಪ್ರತ್ಯೇಕಿಸಿದರು. ಈ ಪ್ರಮುಖ ಅಂಶಗಳು ನಮಗೆ ಗೋಚರಿಸುತ್ತವೆ –

೧. ಕಟ್ಟಡದ ಒಟ್ಟು ರೂಪ, ಮತ್ತು ತಲ ವಿನ್ಯಾಸ.

೨. ಗೋಡೆಯ ನಿರ್ಮಾಣ, ಮತ್ತು ಅದರ ಮೇಲೆ ಅಲಂಕರಣಗೊಂಡ ರೂಪಗಳು.

೩. ಗೋಪುರ, ಅಥವಾ ಶಿಖರಗಳ ರಚನಾ ಶೈಲಿ.
೪. ಕಂಬಗಳ ನಿರ್ಮಾಣದಲ್ಲಿ ಅರಳಿನಿಂತ ಕುಶಲತೆ.

*೧. ಒಟ್ಟು ರೂಪ ಮತ್ತು ತಲ ವಿನ್ಯಾಸ:* ಹೊಯ್ಸಳ ಅರಸರು ನಿರ್ಮಿಸಿದ ಯಾವುದೇ ನಿರ್ಮಾಣದ ತಲ ವಿನ್ಯಾಸವು ಸಾಮಾನ್ಯವಾಗಿ ನಕ್ಷತ್ರಾಕಾರವಾಗಿ ರೂಪಿತ ವಾಗಿರುತ್ತದೆ. ಈ ತಲ ವಿನ್ಯಾಸವನ್ನೇ ಅನುಕರಿಸಿ ಅದೇ ಆಕಾರದಲ್ಲಿ ಎತ್ತರವಾದ ಜಗುಲಿಯಂತೆ ನಿರ್ಮಿಸಿರುವ ಪೀಠಗಳ ಮೇಲೆ ಈ ತಲ ವಿನ್ಯಾಸ ನಿಂತಿರುತ್ತದೆ. ಹೊಯ್ಸಳರಸರ ಅಸಂಖ್ಯ ದೇವಾಲಯಗಳ ರಚನೆಯಲ್ಲಿ ಜಗುಲಿಯು ದೇವಾಲಯದ ಸುತ್ತಲೂ ಇದ್ದು ಓಡಾಡು ವುದಕ್ಕೆ ಸ್ಥಳಾವಕಾಶವಿರುತ್ತದೆ. ದೇವಾಲಯವನ್ನು ಪ್ರವೇಶಿಸು ವುದಕ್ಕೆ ಮುನ್ನ ಕೆಲವು ಮೆಟ್ಟಿಲುಗಳನ್ನೇರಿ ಈ ಜಗುಲಿಯ ಮೇಲೆ ಬರಬೇಕಾಗುತ್ತದೆ. ಆ ಎತ್ತರದಲ್ಲಿ ನಿಂತು ಸುತ್ತಲೂ ಅಗಲವಾದ ಜಗುಲಿಯನ್ನುಳ್ಳ ದೇವಾಲಯದ ವೀಕ್ಷಣೆಗೆ ತುಂಬ ಗಾಂಭೀರ್ಯ ಮುದ್ರೆಯಂತಾಗುತ್ತದೆ. ಈ ಸುತ್ತು ಜಗುಲಿಯೇ ಪ್ರದಕ್ಷಿಣೆ ಪಥವಾಗಿ ಪರಿಣಮಿ ಸುತ್ತದೆ. ಒಳಭಾಗದಲ್ಲಿ ಗರ್ಭಗೃಹದ ಸುತ್ತ ಚಾಲುಕ್ಯ ದೇವಾಲಯಗಳಲ್ಲಿ ಇರುವಂತೆ ಪ್ರತ್ಯೇಕ ಪ್ರದಕ್ಷಿಣೆ ಪಥ ಹೊಯ್ಸಳರ ದೇವಾಲಯಗಳಲ್ಲಿ ಇರುವುದಿಲ್ಲ.

*೨. ಗೋಡೆಯ ನಿರ್ಮಾಣ, ಮತ್ತು ಅಲಂಕರಣಗಳು:* ಹೊಯ್ಸಳರಸರು ನಿರ್ಮಿಸಿದ ದೇವಾಲಯಗಳ ಗೋಡೆಗಳು ಒಂದು ಸಮತಲ ಸ್ವರೂಪದ ಪ್ರಭಾವವನ್ನು ಬೀರುತ್ತವೆ. ದೇವಾಲಯದ ಸುತ್ತಲೂ ಬಳಸಿ ಬಂದಿರುವ ಅಲಂಕಾರಿಕ ಪಟ್ಟಿಕೆಗಳು ಈ ಗೋಡೆಗಳಲ್ಲಿ ವಿಶಿಷ್ಟ ಲಕ್ಷಣವನ್ನು ಪಡೆದಿದೆ. ದೇವಾಲಯಗಳ ಬುಡದಿಂದ ಸುಮಾರು ೫ ಅಡಿಗಳಷ್ಟು ಎತ್ತರದವರೆಗೆ ಒಂದರ ಮೇಲೊಂದರಂತೆ ಈ ಚಿತ್ರಪಟ್ಟಿಕೆಗಳಿರುತ್ತವೆ. ಇವುಗಳಲ್ಲಿ



ಹೊಯ್ಸಳ ದೇವಾಲಯದ ಎಂಟು ಪಟ್ಟಿಕೆಗಳು

ಮೊಟ್ಟ ಮೊದಲ ಹಂತದಲ್ಲಿ ಆನೆಗಳ ಸಾಲುಗಳಿದ್ದು, ದೇವಾಲಯಗಳ ಸುತ್ತಲೂ ಉತ್ಸವ ಹೊರಟಿರುವ ರಾವುತರನ್ನು ಒಳಗೊಂಡಿರುತ್ತದೆ. ತಾತ್ವಿಕವಾಗಿ ಇವು ದೇವಾಲಯದ ಶಕ್ತಿ ಮತ್ತು ಸ್ಥಿರತೆಯನ್ನು ಬಿಂಬಿಸುತ್ತವೆ. ಇದರ ಮೇಲಿರುವ ಇನ್ನೊಂದು ಆಲಂಕಾರಿಕ ಪಟ್ಟಿ ಎಂದರೆ ಕುದುರೆಗಳನ್ನೇರಿ ಹೊರಟಿರುವ ರಾವುತರನ್ನು ಒಳಗೊಂಡಿರುತ್ತದೆ. ಚಲನಶಕ್ತಿಯ ಚೈತ್ಯನ್ಯಕ್ಕೆ ಇದು ಪ್ರತೀಕವಾಗಿದೆ. ಇದರ ಮೇಲಿನ ಪಟ್ಟಿಕೆಯಲ್ಲಿ ಶಾರ್ದೂಲಗಳು, ವ್ಯಾಳಿಗಳು, ಹಂಸಗಳು, ಬಳ್ಳಿಗಳ ಅಲಂಕರಣವನ್ನು ಸ್ಥಪತಿ ಕೆತ್ತಿದ್ದಾನೆ. ಇದರ ನಂತರ ಬರುವ ಪಟ್ಟಿಕೆ ಎಂದರೆ ರಾಮಾಯಣ ಮಹಾಭಾರತ ಕಥೆಗಳನ್ನೆಲ್ಲಾ ಕಲ್ಲಿನಲ್ಲಿ ಕೆತ್ತಲಾಗಿದೆ. ಇವು ಒಂದು ಅಡಿಗಿಂತಲೂ ಕಿರಿದಾಗಿದ್ದು ನೋಡುಗರ ದೃಷ್ಟಿಕೋನದ ನೇರಕ್ಕೆ ಇರುವುದರಿಂದ ಶಿಲ್ಪಾಕೃತಿಯ ವಿವರಗಳನ್ನು ಸುಲಭವಾಗಿ ತಿಳಿಯಬಹುದು. ಇವುಗಳ ಮೇಲೆ ಮತ್ತೆ ಅಲಂಕರಣದ ಬಳ್ಳಿಗಳು, ಹಂಸಗಳುಳ್ಳ ಪಟ್ಟಿಕೆ ಇರುತ್ತದೆ. ಈ ಎಲ್ಲ ಪಟ್ಟಿಕೆಗಳ ಮೇಲೆ ಗೋಡೆಗಳ ವಿಸ್ತಾರವಾದ ಭಾಗವು ಬರುತ್ತದೆ. ಇಲ್ಲಿ ಅನೇಕ ದೇವತೆಗಳ ದೊಡ್ಡ ಗಾತ್ರದ ಶಿಲ್ಪಾಕೃತಿಗಳು ಗೋಡೆಯಲ್ಲಿ ಅಲಂಕರಿಸಿರುತ್ತವೆ. ಮಧ್ಯದಲ್ಲಿ ಜಾಲಂಧ್ರದ ಕಿಟಕಿಗಳು ಮತ್ತು ಗೋಡೆಯ ಮೇಲೆ ಕಟಾಂಜನ ಅದರ ಮೇಲೆ ತುದಿಯ ಸಾಲಿನವರೆಗೂ ಕಿರುಗಂಬಗಳು, ಆ ಕಂಬದ ಬೋದಿಗೆಯ ಮೇಲೆ ''ಮದನಿಕಾ'' ವಿಗ್ರಹಗಳು ಇದ್ದು ಗೋಡೆಗಳ ಸಂಕೀರ್ಣತೆಗೆ ಮೆರುಗನ್ನು ನೀಡುತ್ತವೆ. ದೇವಾಲಯಗಳ ನಕ್ಷತ್ರಾಕಾರದ ನಿರ್ಮಾಣವು ಗೋಡೆಗಳ ಶಿಲ್ಪ ಸೌಂದರ್ಯವನ್ನು ಗಮ್ಯವಾಗಿ ಪ್ರಕಟಪಡಿಸಲು ಅನುಕೂಲವಾಗುತ್ತದೆ.

*೩. ಗೋಪುರ ಅಥವಾ ಶಿಖರ ಶೈಲಿ:* ಹೊಯ್ಸಳ ದೇವಾಲಯಗಳಲ್ಲಿ ಶಿಖರ ಶ್ರೇಣಿ ಮತ್ತು ಗೋಪುರಗಳು ಕಲಶಪ್ರಾಯವೆನಿಸಿವೆ. ದೇವಾಲಯಗಳ ಮುಖ್ಯ ರಚನೆಗಳಿಂದ ಇವು ಬೇರ್ಪಟ್ಟಿವೆ ಎನ್ನಿಸಿದರೂ ಒಟ್ಟು ನಿರ್ಮಾಣದ ಬೇರುಗಳಾಗಿ ನಿಂತಿವೆ. ದೇವಾಲಯದ ಮುಂದೆ ಚಾಚಿರುವ ಅಲಂಕಾರದ ಸೂರು ಮತ್ತು ಅದರ ನಕ್ಷತ್ರಾಕಾರ ಇವುಗಳ ಮೇಲಿರುವ ಗೋಪುರ ಒಂದು ವಿಶಿಷ್ಟವಾದ ಸೌಂದರ್ಯವನ್ನು ನಿರ್ಮಿಸುತ್ತದೆ. ದ್ರಾವಿಡ ಶೈಲಿಯಲ್ಲಿರುವಂತೆ ಮೇಲಕ್ಕೇರುತ್ತಾ ಅತಿ ಎತ್ತರವಾಗಿ ಬೆಳೆಯದೇ ಅಡ್ಡಡ್ಡಲಾದ ರಚನೆ ಮತ್ತು ಅಲಂಕಾರದ ಭಾಗಗಳಿಂದ ಸಮತೋಲನವನ್ನು ಕಾಯ್ದುಕೊಂಡಿರುತ್ತವೆ. ಚಿಕ್ಕ ಚಿಕ್ಕ ಆಕಾರದ ಮಂಟಪಗಳಿಂದ ಕೂಡಿ, ಹಂತ ಹಂತವಾಗಿ ಶಿಖರ ಬೆಳೆಯುತ್ತದೆ. ಈ ಒಂದೊಂದು ಹಂತವನ್ನು ಅಲಂಕಾರದ ಪಟ್ಟಿಕೆಗಳು ಇಲ್ಲವೇ ಬಲೆಯಂತೆ ಹೆಣೆದಿರುವ ತಂತು ವಿನ್ಯಾಸದ ರಚನೆಗಳು ಬೇರ್ಪಡಿಸುತ್ತವೆ. ದ್ರಾವಿಡ ರೀತಿಯಲ್ಲಿರುವಂತೆ ಈ ಶಿಖರಗಳೂ ಸ್ಪಷ್ಟವಾದ ಮೆಟ್ಟಿಲು ಮೆಟ್ಟಿಲುಗಳಾಗಿರದೆ ಈ ಹಂತಗಳು ಮೇಲು ಮೇಲಕ್ಕೆ ಹೋದಂತೆಲ್ಲ ಸೂಕ್ಷ್ಮವಾಗಿ ಒಂದಕ್ಕಿಂತ ಒಂದು ಕಿರಿದಾಗುತ್ತ ಹೋಗುತ್ತವೆ. ಈ ಗೋಪುರಗಳಲ್ಲಿ ಒಂದು ಬಗೆಯ ಶಿಲ್ಪಾಕೃತಿಯ ಛಂದೋಬದ್ಧತೆ ಇದ್ದರೂ ವಾಸ್ತುಶಿಲ್ಪದ ದೃಷ್ಟಿಯಿಂದ ಇರಬೇಕಾದ ಭದ್ರತೆ ಇರುವುದಿಲ್ಲವೆಂದು ಇತಿಹಾಸ ತಜ್ಞರು ಹೇಳುತ್ತಾರೆ.

*೪. ಕಂಬಗಳ ನಿರ್ಮಾಣದಲ್ಲಿ ಅರಳಿನಿಂತ ಕುಶಲತೆ:* ಇಡೀ ದೇವಾಲಯಗಳ ಸೌಂದರ್ಯವನ್ನು ಹೆಚ್ಚಿಸುವಲ್ಲಿ ಪ್ರಮುಖಪಾತ್ರ ವಹಿಸುವ ಈ ಕಂಬಗಳ ಅಲಂಕರಣ, ರಾಟಾಳದಿಂದ ಮಾಡಿದ ಕೌಶಲ್ಯ ಎಂಥವರನ್ನೂ ಮಂತ್ರಮುಗ್ಧರನ್ನಾಗಿಸುತ್ತದೆ. ದ್ರಾವಿಡ ಶೈಲಿಯಲ್ಲಿ ಮುಂದುವರಿದ ಬೆಳವಣಿಗೆ ಇಲ್ಲಿ ಕಂಡರೂ ಪ್ರತ್ಯೇಕತೆಯ ಛಾಪು ಎದ್ದುಕಾಣುತ್ತದೆ. ಹೊಯ್ಸಳ ದೇವಾಲಯಗಳ ಕಂಬಗಳು ಸ್ಥೂಲವಾದ ನೋಟಕ್ಕೆ ಒಂದರಂತೆ ಇನ್ನೊಂದು ಕಂಡರೂ ಅವುಗಳ ಮೇಲಿನ ಕೆತ್ತನೆ ಕೆಲಸಗಳಲ್ಲಿಯೂ ವಿವಿಧ ನಕ್ಷೆಗಳಲ್ಲಿಯೂ ವಿಪುಲವಾದ ವೈವಿಧ್ಯತೆಯನ್ನು ಪಡೆದಿವೆ. ಇವುಗಳ ಬೋದಿಗೆಗಳು ವಿಸ್ತಾರವಾಗಿದ್ದು, ಮೇಲೆ ೪ ಚಚ್ಚೌಕದ ಚಾಚು ಪೀಠಗಳನ್ನು ಒಳಗೊಂಡಿರುತ್ತವೆ. ಇವುಗಳನ್ನು ಕೊರೆದು ನಿಲ್ಲಿಸುವ ಯಾವುದಾದರೂ ಯಾಂತ್ರಿಕ ವಿಧಾನವನ್ನು ಕಂಡುಹಿಡಿದಿದ್ದರೇನೋ ಎನ್ನುವಂತಿದೆ. ವಿವಿಧ ಮಾದರಿಗಳಲ್ಲಿ ಕಂಬಗಳು ರೂಪುಗೊಂಡ ಕ್ರಮ ಅಸಂಖ್ಯಗೊಂಡಿರುವುದನ್ನು ಕಂಡಾಗ ಈ ಯಾಂತ್ರಿಕ



ಹೊಯ್ಸಳ ವಾಸ್ತುಶೈಲಿಯ ಸ್ತಂಭಗಳು

ನಿರ್ದೇಶನದ ಅಭಿಯಂತರಿದ್ದಿರಬಹುದೆಂದು ಭಾಸವಾಗುತ್ತದೆ. ಕಂಬಗಳೆಲ್ಲ ಲೇತ್ (ರಾಟ್‌ಳ)ನಿಂದ ತಿರುಗಿಸಿ ತಯಾರಿಸಿದವಾಗಿದ್ದು, ಇಡೀ ದೇವಾಲಯದ ಕಲ್ಲುಗಳು ಮೃದುವಾದ ಬಳಪದ ಕಲ್ಲಿನಲ್ಲಿಯೇ ನಿರ್ಮಿಸಿದ್ದು ಇದಕ್ಕೊಂದು ಪ್ಲಸ್ ಪಾಯಿಂಟ್ ಆಗಿದೆ.

ಈ ಕಟ್ಟಡಗಳಲ್ಲಿ ಆಶ್ಚರ್ಯಕರವಾದ ಇನ್ನೊಂದು ಭಾಗವೆಂದರೆ ''ಭುವನೇಶ್ವರಿಗಳು'' ಮತ್ತು ''ಸುಕನಾಸಿಗಳು'' ಎಂದು ಹೇಳಬಹುದು. ರಂಗಮಂಟಪದ ಮೇಲ್ಛಾವಣಿಯ ಒಳಭಾಗದಲ್ಲಿ ಇವು ನಿರ್ಮಾಣಗೊಂಡಿರುತ್ತವೆ. ಒಂದೊಂದು ಅಂಕಣದ ಮಧ್ಯೆ ಇರುವ ಇವುಗಳ ಅಲಂಕರಣ, ವಿನ್ಯಾಸ, ಆಕಾರ, ನಕ್ಷೆಗಳಲ್ಲಿ ಕಾಣುವ ವೈವಿಧ್ಯತೆ ಶ್ರೇಷ್ಠ ಮಟ್ಟದ್ದಾಗಿದೆ. ಇಷ್ಟು ಸೂಕ್ಷ್ಮವಾದ ಕೆಲಸವನ್ನು ಮೇಲ್ಛಾವಣಿಯಲ್ಲಿ ಮಾಡಿರುವುದರಿಂದ ಇವುಗಳ ಮೇಲೆ ಭಾರ ಬೀಳದಂತೆ ಇವುಗಳ ಹಿಂದೆ ಭಾರವನ್ನು ಹೊರುವುದಕ್ಕಾಗಿ ಒರಟು ಕಲ್ಲುಗಳಿಂದ ನಿರ್ಮಿತವಾದ ಒಳ ಛಾವಣಿಯೊಂದಿರುತ್ತದೆ. ಗರ್ಭಗುಡಿಯ ಬಾಗಿಲ ಮೇಲೆ ಮತ್ತು ಪ್ರವೇಶದ್ವಾರದ ಮೇಲೆ ಅತ್ಯಂತ ಸೂಕ್ಷ್ಮ ಸಂವೇದನೆಯಿಂದ ಪ್ರಪಂಚದ ಕಲಾ ಕಾಂತಾ ಸಮ್ಮಿತೆಯನ್ನೇ ಮೈಗೂಡಿಸಿ ವೃತ್ತಗೊಂಡಂತೆ ನಿರ್ಮಿತವಾಗಿ ಇರುವುದೇ ಸುಕನಾಸಿಗಳು. ಇಡೀ ಹೊಯ್ಸಳ ದೇವಾಲಯಗಳಲ್ಲಿ ಭುವನೇಶ್ವರಿ, ಸುಕನಾಸಿ, ಮತ್ತು ಸ್ತಂಭಗಳು, ಹೊಯ್ಸಳ ವಾಸ್ತು ವೈಭವಕ್ಕೆ ಮುಕುಟಪ್ರಾಯವಾಗಿವೆ. ಗರ್ಭಗುಡಿಯ ಗೋಪುರದ ಮುಂಭಾಗ, ಪ್ರವೇಶದ್ವಾರಗಳ ಎಡಬಲದಲ್ಲಿ ಹುಲಿಯನ್ನು ಕೊಲ್ಲುತ್ತಿರುವ ಸಳನ ಶಿಲ್ಪಮೂರ್ತಿ ಇರುತ್ತದೆ. ಇದು ಹೊಯ್ಸಳ ರಾಜಮನೆತನದ (ವಂಶದ) ಚಿನ್ಹೆಯಾಗಿದೆ. ಒಂದು ವೇಳೆ ಇದು ಇಲ್ಲದಿದ್ದರೂ ಒಟ್ಟಾರೆ ಈ ವಾಸ್ತುಶೈಲಿಯನ್ನು ಕಂಡೊಡನೆ ಇದು ''ಹೊಯ್ಸಳ ವಾಸ್ತುಶೈಲಿ''ಯ ಕಟ್ಟಡ ಎಂದು ಹೇಳಿಬಿಡಬಹುದು. ಸದ್ಯಕ್ಕೆ ರಾಜ್ಯ ಅಂತರ್‌ರಾಜ್ಯಗಳಲ್ಲಿ ಹೊಯ್ಸಳರಸರು ೧೮೦ಕ್ಕೂ ಹೆಚ್ಚು ಬಗೆಯ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಇವುಗಳಲ್ಲಿ ಈ ಶೈಲಿ ಎದ್ದು ಕಾಣುತ್ತದೆ. ಇದಲ್ಲದೆ ಅರಮನೆ, ಗುರುಮನೆಗಳಲ್ಲಿ ಈ ಶೈಲಿ ಇದ್ದಿರಬಹುದಾಗಿದ್ದರೂ ಅವು ಯಾವುವೂ ಸದ್ಯಕ್ಕೆ ಲಭ್ಯ ಇಲ್ಲ. ಪ್ರಮುಖವಾಗಿ ಬೇಲೂರಿನ ಚನ್ನಕೇಶವ ದೇವಾಲಯ, ಹಳೇಬೀಡಿನ ಹೊಯ್ಸಳೇಶ್ವರ, ಶಾಂತಲೇಶ್ವರ ದೇವಾಲಯ, ದೊಡ್ಡಗದ್ದುವಳ್ಳಿಯ ಲಕ್ಷ್ಮೀ ದೇವಾಲಯ, ಸೋಮನಾಥಪುರದ ಸೋಮನಾಥ ದೇವಾಲಯಗಳು ಈ ಶೈಲಿಯನ್ನು ಸ್ವಚ್ಛಂದವಾಗಿ ಪ್ರದರ್ಶಿಸುತ್ತವೆ.

ಹೊಯ್ಸಳ ವಾಸ್ತುಶೈಲಿಯ ದೇವಾಲಯಗಳ ಬಗೆಗೆ ಕಸಿನ್ಸ್ ಎಂಬ ವಿದ್ವಾಂಸ ''ಚಿನ್ನ ಬೆಳ್ಳಿ ಕೆತ್ತನೆಯ ನುಣ್ಪು ಗುಣ್ಪು ಈ ದೇವಾಲಯಗಳಲ್ಲಿರುವ ಕೆತ್ತನೆಗಳಿಗಿಂತ ಸೊಗಸಾಗಿರಲಾರವು'' ಎಂದು ಹೇಳಿದರೆ, ''ಹಿಂದೆಂದೂ ಕಂಡರಿಯದ ಚೇತನವನ್ನು ತುಂಬುವ ಸ್ಥಿರ ಸಂಕಲ್ಪ ಪರಿಣತಿಯ ವೈಶಿಷ್ಟತೆಗಳು ಈ ವಾಸ್ತು ವೈಭವದಲ್ಲಿದೆ'', ಎಂದು ಇನ್ನೊಬ್ಬ ಇತಿಹಾಸಕಾರರು ಹೇಳುತ್ತಾರೆ. ಭಾರತೀಯ ವಾಸ್ತುಶಿಲ್ಪದ ಸುವರ್ಣಯುಗವು ಹೊಯ್ಸಳರ ಯುಗದಲ್ಲಾಗಿದ್ದು, ಈ ಹೊಯ್ಸಳ ವಾಸ್ತುಶೈಲಿಯು ದೇವಾಲಯದ ಪ್ರತಿಯೊಂದು ಭಾಗದಲ್ಲಿಯೂ ಶಿಲ್ಪಿಯ ಕಲ್ಪನಾ ವಿಲಾಸವು ಗರಿಗಟ್ಟಿ ಹರಡಿದೆ. ''ಮಾನವ ಹೃದಯದ ಭಾವಾವೇಶವೆಲ್ಲ ದೇವಾಲಯದ ಭಿತ್ತಿಗಳಲ್ಲಿ ಚಿತ್ರಿತವಾಗಿದೆ'' ಎಂದು ಪ್ರತ್ಯಕ್ಷ ನೋಡಿದ ಇತಿಹಾಸ ವಿದ್ವಾಂಸರಾದ ಫರ್ಗ್ಯೂಸನ್ ಉದ್ಗರಿಸುತ್ತಾರೆ.

***ಹೊಯ್ಸಳ ವಾಸ್ತುಶೈಲಿಯು ಅವ್ಯಕ್ತ ನಿನಾದದಿಂ; ಅಕಲಂಕಿತಾಂಗದಿಂ***
***ಅನ್ಯೂನ ತರುಣತೆಯಿಂ, ಅಮಿತಯಶದಿಂ, ಚಿರಕಾಲಕಂಗೊಳಿಪಂ.***

**ಚಂದ್ರಶೇಖರ್ ಧೂಲೇಕರ್**
ನಂ. ೧೫೫/೧, ರಾಘವೇಂದ್ರನಗರ, ಗ್ರಾಮಾಂತರ ಪೊಲೀಸ್ ಠಾಣೆಯ ಪಕ್ಕ,
ಸಕಲೇಶಪುರ (ಹಾಸನ ಜಿಲ್ಲೆ)

*೫೨ನೇ ಪುಟದಿಂದ*

ಮುರುಟಿಕೊಂಡಾಗ ಜ್ಞಾನ, ಬುದ್ಧಿ, ವೈಚಾರಿಕತೆಗಳ ವಿಕಸನವೂ ಸಾಧ್ಯವಿಲ್ಲದೆ ಸಕ್ರಿಯತೆಯಾಗಲೀ, ಸಾಹಿತ್ಯಾಭಿವ್ಯಕ್ತಿಯಾಗಲೀ ಪ್ರಕಟಗೊಳ್ಳಲು ಹೇಗೆ ಸಾಧ್ಯ ?

ಜನಪದ, ವಚನಕಾರ್ತಿಯರನ್ನು ಬಿಟ್ಟರೆ ಮಹಿಳೆ ಅಲ್ಪಸ್ವಲ್ಪ ಪ್ರಮಾಣದಲ್ಲಾದರೂ ತನ್ನ ಮೌನ ಮುರಿದು ಕಾವ್ಯಕ್ಕೆ ತನ್ನ ದನಿಗೂಡಿಸಲಾರಂಭಿಸಿದ್ದು ಹದಿನೆಂಟನೆಯ ಶತಮಾನದ ನಂತರವೇ. ಆದರೆ ಇಲ್ಲೆಲ್ಲ ಕೇಳಿದ ಪುರಾಣ ಮಹಾತ್ಮೆಗಳನ್ನು ಪದ್ಯರೂಪವಾಗಿ ಹೇಳುವ ಗುಣದಲ್ಲೇ ಇವರ ಕವಿತಾಶಕ್ತಿ ಧನ್ಯತೆ ಪಡೆದುಕೊಂಡಿತೇ ವಿನಃ ಸಾಹಿತ್ಯಕವಾಗಿ ಗಮನಾರ್ಹವಾಗಿ ಹೊಸ ಸಂವೇದನೆಗಳನ್ನೇನೂ ತನ್ನಲ್ಲಿ ಒಡಮೂಡಿಸಿಕೊಂಡು ಪ್ರಕಟಗೊಂಡಿಲ್ಲ. ಎಲ್ಲೋ ಕೆಲವೆಡೆ ಮಾತ್ರ ತನ್ನ ಪರಿಸ್ಥಿತಿಯ ಬಗ್ಗೆ ರೊಚ್ಚಿಗೆದ್ದಿರುವ ಸೂಕ್ಷ್ಮ ಮಿಡಿತಗಳು ''ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು'' ಎಂಬಂಥ ಸಾಲುಗಳಲ್ಲಿ ಕಾಣಬಹುದಾಗಿದೆ. ಇಪ್ಪತ್ತನೇ ಶತಮಾನಕ್ಕೆ ಬರುವಾಗ ಮಹಿಳೆಯ ಸಾಮಾಜಿಕ ಪರಿಸ್ಥಿತಿಗಳು ಮೊದಲಿಗಿಂತ ಸುಧಾರಿಸುತ್ತ ಬಂದುದರ ಪ್ರತಿಫಲವಾಗಿ ಮಹಿಳಾ ಬರಹಗಾರ್ತಿಯರು ಬಂದುದನ್ನು ಗುರುತಿಸಬಹುದು. ಮೌನ ಮುರಿದ ಮಹಿಳೆ ಈ ಶತಮಾನದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕತೆ, ಕಾದಂಬರಿ ನೀಡಿದ್ದಾಳಾದರೂ ಪೂರ್ತಿಯಾಗಿ ಹೊರಗೆ ಅಭಿವ್ಯಕ್ತಳಾಗಿದ್ದಾಳೆನ್ನುವಂತಿಲ್ಲ. ಕಾವ್ಯಸೃಷ್ಟಿಯಲ್ಲಿ ಹಿಂದುಳಿದು ಆಕೆ ಕಾದಂಬರಿ, ಸಣ್ಣಕತೆಗಳನ್ನು ಬರಹಕ್ಕೆ ಆಯ್ದುಕೊಂಡಳು. ಇಲ್ಲಿಯೂ ಕೌಟುಂಬಿಕ, ಪ್ರೇಮ ಭಾವಗಳ ಸುತ್ತ ಹೆಣೆದ ಸೀಮಿತ ಸಮಸ್ಯೆಗಳೇ ವಸ್ತುಗಳಾದವು. ಇತರ ಅನೇಕ ಆರ್ಥಿಕ, ಬೌದ್ಧಿಕ, ರಾಜಕೀಯ, ಶೈಕ್ಷಣಿಕ ಇತ್ಯಾದಿ ಸಮಸ್ಯೆಗಳ ಕಡೆಗೆ ಆಕೆಯ ಸಂವೇದನೆಗಳೇನೋ ತಿಳಿಯಲಾಗದಂತೆ ಇನ್ನೂ ಅವಗುಂಠನ ಧರಿಸಿಯೇ ಬರೆದಳೇ ವಿನಃ ಪೂರ್ತಿಯಾಗಿ ಹೊರಗೆ ಅಭಿವ್ಯಕ್ತವಾಗದ ಹೆಣ್ಣಾಗಿಯೇ ಉಳಿದಳು. ಪೂರ್ಣವಾಗಿ ಮಹಿಳೆ ತನ್ನ ಸ್ವಯಂ ಅಭಿವ್ಯಕ್ತಿ ಮಾಡಲಿಲ್ಲ.

ಸಾಹಿತ್ಯ, ಬದುಕು ಒಂದಕ್ಕೊಂದು ಪೂರಕ ಮತ್ತು ಪ್ರೇರಕವೂ ಹೌದು. ಅನುಭವಗಳಲ್ಲಿ ಸಂಕೀರ್ಣತೆ ಇದ್ದ ಮಾತ್ರಕ್ಕೆ ಸುಲಭವಾಗಿ ಅಭಿವ್ಯಕ್ತಿಯೂ ಆದೀತೆಂದು ಹೇಳುವಂತಿಲ್ಲ. ಮಹಿಳೆ ಇತ್ತೀಚೆಗಷ್ಟೆ ಹೊರಪ್ರಪಂಚದ ಬೇರೆಬೇರೆ ಮಗ್ಗುಲುಗಳನ್ನು ತಾನೂ ಕಾಣುತ್ತಿದ್ದಾಳೆ, ಸಂಕೀರ್ಣ ಅನುಭವಗಳಿಗೆ ತನ್ನನ್ನು ನಿಧಾನವಾಗಿ ಒಡ್ಡಿಕೊಳ್ಳುತ್ತಿದ್ದಾಳೆ. ಮೊದಲು ಅನುಭವ ವ್ಯಾಪ್ತಿ ಸಿಕ್ಕಬೇಕು, ಆಮೇಲೆ ಅಭಿವ್ಯಕ್ತಿಯ ಕಲೆಗಾರಿಕೆಯನ್ನು ದಕ್ಕಿಸಿಕೊಳ್ಳಬೇಕು. ತೀರಾ ಇತ್ತೀಚಿನ ದಿನಗಳಲ್ಲಷ್ಟೆ ಹೆಣ್ಣು ಪ್ರಶ್ನಿಸುವುದನ್ನು, ಪ್ರತಿಕ್ರಿಯಿಸುವುದನ್ನು ಹಾಗೆಯೇ ಪ್ರತಿಭಟಿಸುವುದನ್ನೂ ತನ್ನದಾಗಿಸಿಕೊಳ್ಳುತ್ತಿದ್ದಾಳೆ. ಹೀಗಾಗಿ ಕಾವ್ಯದ ಉತ್ಸುಕತೆಯೂ ಅವಳ ಅಂತರಂಗದ ಸೆಲೆಗಳಲ್ಲಿ ಮೊದಲಿಗಿಂತ ಹೆಚ್ಚಾಗಿ ಕಾಣಿಸಿಕೊಳ್ಳುತ್ತಿದೆ. ತನಗೆ ತಾನೇ ಮುಖಾಮುಖಿಯಾಗಿ ತನ್ನ ಸಂವೇದನೆಗಳನ್ನು ಕಂಡುಕೊಳ್ಳುವ, ಅರಳಿಸಿಕೊಳ್ಳುವ ಪ್ರಕ್ರಿಯೆ ಅವಳಲ್ಲೀಗ ಒಡಮೂಡುತ್ತಿದೆ.

ಒದಗುವ ಅನುಭವಗಳು ಒಡ್ಡುವ ಸಂವೇದನೆಗಳನ್ನು ಸೆರೆಹಿಡಿದು ಕಾವ್ಯವಾಗಿಸುವ ಪ್ರಕ್ರಿಯೆಯಲ್ಲಿಯೂ ಪುರುಷನಷ್ಟು ನಿರ್ಭಿಡೆಯಾಗಿ ಮಹಿಳೆ ಪ್ರಕಟಗೊಳ್ಳಲಾಗದಂಥ ಸಾಮಾಜಿಕ ಸ್ಥಿತಿಗತಿಗಳೇ ಇನ್ನೂ ಅವಳ ಪಾಲಿಗಿವೆ ಎಂದರೆ ತಪ್ಪಾಗಲಾರದು. ಅವು ಮೊದಲಿಗಿಂತ ಸುಧಾರಿಸಿರಬಹುದು. ಆದರೆ ಪೂರ್ಣ ಅಸ್ತಿತ್ವದಲ್ಲಿ ಅವಳು ಪ್ರಕಟಗೊಳ್ಳಲಾಗದಂಥ ಪರಿಸ್ಥಿತಿಯಲ್ಲಿಯೇ ಅವಳಿದ್ದಾಳೆ. ಕಟುಟೀಕೆಗಳು ಸದಾ ಅವಳನ್ನು ಪೂರ್ಣವಾಗಿ ಹೊರಕಾಣಿಸಿಕೊಳ್ಳದಂತೆ ತಡೆದಿಟ್ಟಿವೆ. ಸಮಾಜದ ಸಂಶಯ, ಲೇವಡಿಯ ನಾಲಿಗೆಗೆ ಆಕೆ ಹೆದರಬೇಕಾಗುವಂಥ ವಾತಾವರಣವೇ ಇನ್ನೂ ಇದೆ. ಮುಖವಾಡಗಳಲ್ಲಿ ಬದುಕುವುದೇ ಇಂದಿನ ಸಂಸ್ಕೃತಿಯ ಶಿಷ್ಟತೆ, ಸಭ್ಯತೆ ಎನಿಸಿಕೊಂಡಿರುವಾಗ ಸಂಕ್ರಮಣದ ಹಾದಿಯಲ್ಲಿರುವ ಹೆಣ್ಣಿಗೆ ಅಭಿವ್ಯಕ್ತಿಯಲ್ಲಿ ಪೂರ್ಣ ಪ್ರಮಾಣದ ಆರೋಗ್ಯಕರ ಗಾಳಿ ಬೀಸಿ ಬಂದೀತೆಲ್ಲಿಂದ ? ಆಧುನಿಕ ಬದುಕಿನಲ್ಲಿ ಮಾನವ ಜೀವಿಯ ಭಾವನಾ ಸೂಕ್ಷ್ಮಗಳ ಮೇಲೆ ಸಮಾಜದ ರೀತಿನೀತಿ ನಡೆಸುವ ಅತ್ಯಾಚಾರವನ್ನು ಇದು ಧ್ವನಿಸುತ್ತದೆ.

ಚಿಪ್ಪನ್ನೊಡೆದು ಹೊರಗಿನ ಪ್ರಖರ ಬೆಳಕಿಗೆ ಬರಬೇಕೆನ್ನುವ ತುಡಿತ, ಬಯಕೆ ಗಂಡು ಹೆಣ್ಣು ಜೀವಿಗಳಿಗೆ ಸಮಾನವಾದುದು. ಈಗೀಗಷ್ಟೆ ಶತಮಾನಗಳ ದಾಸ್ಯ, ಹೀನಪರಿಸ್ಥಿತಿಗಳಿಂದ ಹೊರಬರಬೇಕೆನ್ನುವ ಪ್ರಜ್ಞೆ ಕವಯಿತ್ರಿಯ ಅಭಿವ್ಯಕ್ತಿಯಲ್ಲಿ ಕಾಣಿಸಿಕೊಳ್ಳುತ್ತಿದೆ. ಅಂತರಂಗದ ಅನುಭವಗಳನ್ನು ಅಭಿವ್ಯಕ್ತಿಯಾಗಿಸುವಲ್ಲಿ, ಸಾಹಿತ್ಯವಾಗಿಸುವಲ್ಲಿ ಧೀಮಂತಿಕೆಯನ್ನು, ಧೈರ್ಯ, ಸ್ಥೈರ್ಯ, ದಿಟ್ಟತನಗಳನ್ನು ಆಕೆ ಈಗೀಗಷ್ಟೆ, ಅದೂ ಬಲು ನಿಧಾನವಾಗಿ ರೂಢಿಸಿಕೊಳ್ಳುತ್ತಿದ್ದಾಳೆ. ಹೊಸ ಸಂವೇದನೆಗಳನ್ನು ಸಾಯಗೊಡದೆ ಪ್ರಾಮಾಣಿಕ ಕಾವ್ಯಸೃಷ್ಟಿಯಾಗಿಸುವತ್ತ ಆಕೆಯ ವಿಚಾರಶಕ್ತಿ, ವಿಮರ್ಶನ ಪ್ರಜ್ಞೆ ಇನ್ನೂ ಧೀಮಂತವಾಗಿ ಬೆಳೆಯಬೇಕಾಗಿದೆ. ಆಂತರಿಕ ತುಮುಲ ಭಾವ ಬುಗ್ಗೆಗಳನ್ನು, ಅನುಭವಗಳ ಸೂಕ್ಷ್ಮ ಸಂಕೀರ್ಣತೆಗಳ ಸಮೇತವಾಗಿ ಬರೆಯುವುದನ್ನು ಮಹಿಳೆ ರೂಢಿಸಿಕೊಂಡು ಸಾಹಿತ್ಯಕ್ಷೇತ್ರವನ್ನು ಕಲಾತ್ಮಕವಾಗಿಸಬೇಕಾಗಿದೆ.

ಅನಸೂಯಾದೇವಿ
ಮುಖ್ಯಸ್ಥೆ, ಕನ್ನಡ ವಿಭಾಗ, ಬಿಎಚ್‌ಎಸ್ ಪ್ರಥಮ ದರ್ಜೆ ಕಾಲೇಜು,
ಜಯನಗರ ನಾಲ್ಕನೇ ಬಡಾವಣೆ, ಬೆಂಗಳೂರು – ೫೬೦ ೦೧೧

# ಛಲ ಬೇಕು ಮನುಜಂಗೆ...

ಕೆ. ಎಸ್. ನವೀನ್

೧೯೮೫ರ ಒಂದು ದಿನ ಅಂಚೆಯಲ್ಲಿ ಬಂದ ''...ನಿಮ್ಮನ್ನು ಭಾರತ ಸರ್ಕಾರದ ಸಮಾಜ ಕಲ್ಯಾಣ ಇಲಾಖೆ ಯಶಸ್ವಿ ಅಂಗವಿಕಲ ಸ್ವಉದ್ಯೋಗಿ ಹಾಗೂ ಸಮಾಜ ಸೇವಕ ಎಂದು ಗುರುತಿಸಿ ೮೪ನೇ ಸಾಲಿನ ರಾಷ್ಟ್ರಪ್ರಶಸ್ತಿಗೆ ಆಯ್ಕೆ ಮಾಡಲಾಗಿದೆ'' ಎಂಬ ಒಕ್ಕಣೆಯ ಪತ್ರ, ಅಂಗವಿಕಲರಿಗಾಗಿ ವಾಹನ ತಯಾರಿಸುತ್ತಾ ತಮ್ಮೆಲ್ಲಾ ಬಿಡುವಿನ ವೇಳೆ ಹಾಗೂ ಹಣವನ್ನು ಅಂಗವಿಕಲರ ಕಲ್ಯಾಣಕ್ಕಾಗಿಯೇ ಮೀಸಲಿಟ್ಟ ಶ್ರೀ ಕಾಳಿ ವಿನೋದ್ ತಿವಾರಿಯವರಿಗೆ ತಮ್ಮ ಹಿಂದಿನ ಜೀವನದ ಕಷ್ಟನಷ್ಟಗಳನ್ನೆಲ್ಲಾ ನೆನಪಿಗೆ ತಂದವು. ಸ್ಥಳ : ಉತ್ತರ ಪ್ರದೇಶದ ಕಾನ್ಪುರ ಸಮೀಪದ ಉನ್ನಾವ್ ಗ್ರಾಮ.

ತಿವಾರಿಯವರದ್ದು ಬಹಳ ಕಷ್ಟದಿಂದ ಕೂಡಿದ ಬಾಲ್ಯ. ತಮ್ಮ ಮೂರನೇ ವಯಸ್ಸಿನಲ್ಲಿ (೧೯೪೯) ಪೋಲಿಯೊ ಪೀಡಿತರಾಗಿ ಎರಡೂ ಕಾಲುಗಳು ನಿಶ್ಚೇಷ್ಟಿತವಾದವು. ತೆವಳಿಕೊಂಡೇ ತಮ್ಮ ಪ್ರಾಥಮಿಕ ಶಾಲೆಯ ಶಿಕ್ಷಣ ಮುಗಿಸಿದರು. ಅವರ ಗೆಳೆಯರು 'ಅಷ್ಟಾವಕ್ರ' ಎಂದು ಹಾಸ್ಯ ಮಾಡುತ್ತಿದ್ದರಂತೆ. ಅಂದೇ ಅವರಲ್ಲಿ ಏನಾದರೂ ಅಪರೂಪವಾದ್ದನ್ನು ಮಾಡಿ ತೋರಿಸುವ ಛಲ ಹುಟ್ಟಿತು. ತಂದೆಯೇ ಶಾಲೆಯ ಮುಖ್ಯೋಪಾಧ್ಯಾಯರು. ಅಧ್ಯಾತ್ಮದ ಒಲವಿದ್ದ ಮನೆತನ. ತಂದೆ ರಾಮನಾರಾಯಣ ತಿವಾರಿ ಮಗನಿಗೆ ಸಂಸ್ಕೃತ ಕಲಿಸಿ 'ಇವನು ಇದರಲ್ಲೇ ತನ್ನ ಜೀವನವನ್ನು ನಿರ್ವಹಿಸುತ್ತಾನೆ' ಎಂದಿದ್ದರು. ಸ್ವಲ್ಪ ದಿನಗಳಲ್ಲಿ ತಂದೆ ನಿಧನರಾದರು. ಮುಂದಿನ ಜೀವನ ಮಲ ಅಣ್ಣನ ಮನೆಯಲ್ಲಿ. ಆಗ ಒಬ್ಬ ವೈದ್ಯರು ಇವರನ್ನು ಪರೀಕ್ಷಿಸಿ ಒಂದು ಶಸ್ತ್ರಚಿಕಿತ್ಸೆ ನಡೆಸಿ ತೆವಳುತ್ತಿದ್ದ ಇವರನ್ನು ಕ್ಯಾಲಿಪರ್ ಹಾಗೂ ಕೋಲಿನ ಸಹಾಯದಿಂದ ನಡೆಯುವಂತೆ ಮಾಡಿದರು. ಆ ಘಳಿಗೆಯನ್ನು ನೆನೆಸಿಕೊಂಡು ತಿವಾರಿ ಹೇಳುತ್ತಾರೆ : ''ನಾನಂದು ವಿಶ್ವವನ್ನೇ ಗೆದ್ದಂತೆ ಬೀಗಿದೆ. ಸ್ವತಃ ನನ್ನ ಕಾಲುಗಳ ಮೇಲೆ ನಿಲ್ಲುವುದು ಅದೆಂತಹ ಅನುಭವ !'' ಆಗ ಅವರ ವಯಸ್ಸು ೧೫.

ತಿವಾರಿಯವರದ್ದು ಬಹಳ ಕಷ್ಟದಿಂದ ಕೂಡಿದ ಬಾಲ್ಯ. ತಮ್ಮ ಮೂರನೇ ವಯಸ್ಸಿನಲ್ಲಿ (೧೯೪೯) ಪೋಲಿಯೊ ಪೀಡಿತರಾಗಿ ಎರಡೂ ಕಾಲುಗಳು ನಿಶ್ಚೇಷ್ಟಿತವಾದವು. ತೆವಳಿಕೊಂಡೇ ತಮ್ಮ ಪ್ರಾಥಮಿಕ ಶಾಲೆಯ ಶಿಕ್ಷಣ ಮುಗಿಸಿದರು. ಅವರ ಗೆಳೆಯರು 'ಅಷ್ಟಾವಕ್ರ' ಎಂದು ಹಾಸ್ಯ ಮಾಡುತ್ತಿದ್ದರಂತೆ. ಅಂದೇ ಅವರಲ್ಲಿ ಏನಾದರೂ ಅಪರೂಪವಾದ್ದನ್ನು ಮಾಡಿ ತೋರಿಸುವ ಛಲ ಹುಟ್ಟಿತು.

ಮುಂದೆ ಕಷ್ಟಪಟ್ಟು ಓದಿ ಹಿಂದಿ ಹಾಗೂ ಇಂಗ್ಲಿಷ್ ಎಂ.ಎ. ಪದವಿ ಗಳಿಸಿದರು. ಮಲ ಅಣ್ಣ ಒಂದು ವರ್ಕ್‌ಶಾಪ್ ನಡೆಸುತ್ತಿದ್ದರು. ಮೊದಲಿನಿಂದಲೂ ಈ ಕಾರ್ಯಾಗಾರದ ಕೆಲಸಗಳಲ್ಲಿ ಆಸಕ್ತಿ ವಹಿಸುತ್ತಿದ್ದ ತಿವಾರಿ ಈಗ ಇಲ್ಲಿಯೇ ಸಹಾಯಕರಾಗಿ ಸೇರಿದರು. ಕ್ರಮೇಣ ಒಂದೊಂದೇ ಕೆಲಸಗಳಲ್ಲಿ ಪರಿಣತಿ ಸಾಧಿಸಿದರು. ಮನದಲ್ಲಿದ್ದ ಆಸೆ: ತಾನು ಇತರರಂತೆ ವಾಹನ ನಡೆಸಬೇಕೆಂಬುದು! ಆದರೆ ಅಂದು ೭೦ರ ದಶಕದಲ್ಲಿ ಅಂಗವಿಕಲರಿಗೆ ಯಾವ ವಾಹನಗಳೂ ದೊರೆಯುತ್ತಿರಲಿಲ್ಲ. ಮುಂಬೈಯಂತಹ ನಗರದಲ್ಲಿ ಕಂಡಿದ್ದ ಕೈಯಿಂದ ನಡೆಸುವ ವಾಹನ – ನಿಜದಲ್ಲಿ ಸೈಕಲ್ – ಎಷ್ಟು ಕಷ್ಟದಾಯಕ ಎಂಬುದನ್ನು ಅನುಭವದಿಂದ ಅರಿತಿದ್ದರು. ಆಗ ತಾನೇ ಯಾಕೆ ಒಂದು ಮೋಟಾರ್ ಜೋಡಿಸಿದ ವಾಹನವನ್ನು ತಯಾರಿಸಬಾರದೆಂದು ಆ ನಿಟ್ಟಿನಲ್ಲಿ ತಕ್ಷಣ ಕಾರ್ಯಪ್ರವೃತ್ತರಾದರು. ಮೂರು ಚಕ್ರದ ಸೈಕಲ್ಲಿಗೆ ಎಂಜಿನ್ ಜೋಡಿಸಿ ಪ್ರಯೋಗಗಳನ್ನು ಮಾಡಿದರು. ಈ ಸಂದರ್ಭದಲ್ಲಿ ಅಣ್ಣನ ಕಾರ್ಯಾಗಾರ ಮುಚ್ಚಿತು. ಇವರೂ ಹೊರಬರಬೇಕಾಯಿತು. ಧೃತಿಗೆಡದ ಇವರು ತಮ್ಮದೇ ಒಂದು ಕಾರ್ಯಾಗಾರ ಮಾಡಿಕೊಂಡು ತಮ್ಮ ಪ್ರಯೋಗವನ್ನು ಮುಂದುವರಿಸಿದರು. ಈಗ ಹೊಟ್ಟೆಯ ಸಮಸ್ಯೆಯೂ ಇದ್ದುದರಿಂದ ಹೆಚ್ಚಿನ ಸಮಯ ಇದಕ್ಕೆ ಕೊಡಲಾಗುತ್ತಿರಲಿಲ್ಲ. ತಮ್ಮೆಲ್ಲಾ ಬಿಡುವಿನ ವೇಳೆಯನ್ನು ಅದಕ್ಕಾಗಿ ಮೀಸಲಿಟ್ಟಿದ್ದರು. ಕೊನೆಗೆ ೧೯೭೫ರಲ್ಲಿ ಒಂದು ಮಾದರಿ ವಾಹನವನ್ನು ಸಿದ್ಧಪಡಿಸಿದರು. ಇದನ್ನು ಪರೀಕ್ಷಿಸುವುದು ಹೇಗೆ? ರಾತ್ರಿ ಎಲ್ಲರೂ ಮಲಗಿದ ಮೇಲೆ ಖಾಲಿ ರಸ್ತೆಯಲ್ಲಿ ಇದನ್ನು ಚಾಲಿಸುತ್ತ ಅದರ ಲೋಪದೋಷಗಳನ್ನು ಪತ್ತೆ ಹಚ್ಚುವುದರೊಂದಿಗೆ ತಾವೂ ಚಾಲನೆ ಕಲಿತರು! ಹಿಂದಿದ್ದ ದೊಡ್ಡ ಸೈಕಲ್ ಚಕ್ರಗಳ ವಾಹನಕ್ಕೆ ಎಂಜಿನ್ ಜೋಡಿಸಿ ಬ್ರೇಕು ಉತ್ಕರ್ಷಕಗಳನ್ನು ಕೈಗಳಿಗೆ ಸಿಗುವಂತೆ ಅಳವಡಿಸಿದರು. ಎಲ್ಲರೂ ಈ ವಿಚಿತ್ರ ವಾಹನವನ್ನು ನೋಡಿ ನಗುವವರೆ! ಮುಂದೆ ಆದರಲ್ಲಿನ ಸಮಸ್ಯೆಗಳನ್ನು ಸರಿಪಡಿಸಿ ಒಬ್ಬ ಅಂಗವಿಕಲ ಯಾವುದೇ ತೊಂದರೆ ಇಲ್ಲದಂತೆ ಬಳಸುವಂತಹ ವಾಹನವನ್ನು ಸಿದ್ಧಪಡಿಸಿದರು. ಇದಕ್ಕೆ ಬೇಕಾದ ಅನುಮತಿಯನ್ನೂ ಪಡೆದುಕೊಂಡರು. ಮೊದಲಿನಿಂದಲೂ ಸಮಾಜ ಸೇವೆಯ ಕಾರ್ಯಗಳನ್ನು ಮಾಡಿಕೊಂಡುಬಂದಿದ್ದ ಇವರಿಗೆ, ಇದನ್ನು ದುಬಾರಿ ಬೆಲೆಗೆ ಮಾರಲು ಮನಸ್ಸಾಗಲಿಲ್ಲ. ಅಲ್ಲದೆ, ಬಡವರಿಗೆ ಇದು ಸಿಗದಿದ್ದರೆ ತನ್ನ ಸಂಶೋಧನೆಯು ವ್ಯರ್ಥ ಎಂದು ಬಗೆದು ತಮ್ಮ ಜೀವನ ನಿರ್ವಹಣೆಗೆ – ಅಂದಿನ ಅಗತ್ಯಗಳಿಗಷ್ಟೇ – ಆದ್ಯತೆ ನೀಡಿ ಮಾರಾಟ



ಮಾಡಿದರು. ನಂತರ ಈ ವಾಹನಗಳನ್ನು ಅನುಕರಿಸುವವರು ಹುಟ್ಟಿಕೊಂಡರು! ಇವರು ಯಾವ ಆಕ್ಷೇಪವನ್ನೂ ವ್ಯಕ್ತಪಡಿಸಲಿಲ್ಲ! ಎಲ್ಲವೂ ಅಂಗವಿಕಲರನ್ನೇ ತಲುಪುವುದಷ್ಟೆ ಎಂದುಕೊಂಡು ಸುಮ್ಮನಾದರು. ಕೊನೆಗೆ ಇವರು ತಯಾರಿಸಿದ ವಾಹನದ ಗುಣಮಟ್ಟ ಹಾಗೂ ಬೆಲೆಯನ್ನು ಹಣಕ್ಕಾಗಿ ಅನುಕರಣ ಮಾಡಿದವರು ನೀಡಲಾಗಲಿಲ್ಲ.

''ನನ್ನ ವಾಹನದ ವೈಶಿಷ್ಟ್ಯ ಎಂದರೆ ನಾನೇ! ಸ್ವತಃ ಅಂಗವಿಕಲನಾಗಿರುವ ನನಗೆ ಒಬ್ಬ ಅಂಗವಿಕಲನ ಸಮಸ್ಯೆಗಳೇನು ಎನ್ನುವುದು ಚೆನ್ನಾಗಿ ಅರ್ಥ ವಾಗುತ್ತದೆ. ಹಾಗಾಗಿ, ನಾನು ಗಾಡಿ ಮಾಡುವಾಗಲೇ ಗ್ರಾಹಕನೊಂದಿಗೆ ಮಾತಾಡಿ ಅವನ ಅಂಗವೈಕಲ್ಯವನ್ನು ಚೆನ್ನಾಗಿ ಅರ್ಥಮಾಡಿಕೊಂಡು ಅವನ ವಾಹನವನ್ನು ವಿನ್ಯಾಸ ಮಾಡುತ್ತೇನೆ. ಹೀಗಾಗಿ ಯಾವ ಎರಡು ವಾಹನಗಳೂ ಒಂದರಂತೆ ಇರುವುದಿಲ್ಲ'' ಎನ್ನುತ್ತಾರೆ. ಇದೇ ಅವರ ಯಶಸ್ಸಿನ ಗುಟ್ಟು!

ಆನಂತರ ಇವರು ಅಂಗವಿಕಲರ ಸಂಸ್ಥೆಗಳನ್ನು ಸ್ಥಾಪಿಸಿದರು. ಅಂಗವಿಕಲರಿಗೆ ಬೇಕಾಗುವ ಮಾಹಿತಿ ನೀಡುವುದು, ಸ್ವಂತ ಉದ್ಯೋಗಕ್ಕಾಗಿ ಮಾರ್ಗದರ್ಶನ ಮಾಡುವುದು ಇದರ ಮುಖ್ಯ ಉದ್ದೇಶ. ಜೊತೆಗೆ ಎಲ್ಲ ರೀತಿಯ ಸಮಾಜ ಸೇವೆ. ಅನಕ್ಷರತೆ ಮುಖ್ಯ ಸಮಸ್ಯೆ ಯಾಗಿರುವ ಉತ್ತರ ಪ್ರದೇಶ ರಾಜ್ಯಗಳಲ್ಲಿ ಇವರು ಹಲವಾರು ಕಡೆ ಜನರನ್ನು ಸೇರಿಸಿ ಸಂಜೆ ಶಾಲೆಗಳನ್ನು ಅನೌಪಚಾರಿಕವಾಗಿ ನಡೆಸಲು ಪ್ರಾರಂಭಿಸಿದರು. ಒಂದು ಪತ್ರಿಕೆಯನ್ನು ಅಂಗವಿಕಲರಿಗಾಗಿ ಪ್ರಾರಂಭಿಸಿ ಕೈ ಸುಟ್ಟುಕೊಂಡರು.

ಮುಂದೆ ೧೯೮೧ನೇ ವರ್ಷವನ್ನು 'ವಿಶ್ವ ಅಂಗವಿಕಲರ ವರ್ಷ'ವೆಂದು ಆಚರಿಸಲಾಯಿತು. ಇವರು ಅದನ್ನು ವಿಶಿಷ್ಟವಾಗಿ ಆಚರಿಸಬೇಕೆಂದು ಕಾನ್ಪುರ-ದೆಹಲಿ ರ್‍ಯಾಲಿ ಏರ್ಪಡಿಸಿದರು. ಇವರೇ ತಯಾರಿಸಿದ ವಾಹನಗಳಲ್ಲಿ. ಇದು ಯಶಸ್ವಿಯಾಗಿ ಅನೇಕರಲ್ಲಿ ಸ್ಫೂರ್ತಿ ತಂದಿತು. ಆಗ ಅಂಗವಿಕಲ ರಿಗಾಗಿ ಇದ್ದ ಆಟವೆಂದರೆ ಬಡಿಗೆ ಇಟ್ಟುಕೊಂಡು ವೇಗವಾಗಿ ನಡೆಯುವುದು ಇತ್ಯಾದಿ. ಇವರುಗಳಲ್ಲಿ ಎದ್ದುಕಾಣುವುದು ಅಂಗವೈಕಲ್ಯ ಎಂದರಿತು ರ್‍ಯಾಲಿಯ ನಂತರ ವಾಹನ ರೇಸ್ ಸಹ ಏರ್ಪಡಿಸಿದರು.

ಈ ವಾಹನ ಪಡೆದ ಅನೇಕರು ದಿನೋಪಯೋಗಿ ವಸ್ತುಗಳ ಮಾರಾಟ ಇತ್ಯಾದಿ ಉದ್ಯೋಗಗಳನ್ನು ಮಾಡಿಕೊಂಡು ಸ್ವಾವಲಂಬಿಗಳಾಗಿದ್ದಾರೆ. ನಿಜದಲ್ಲಿ ಇವರ ಗ್ರಾಹಕರೆ ಇವರ ಜಾಹೀರಾತು. ಉತ್ತರ ಪ್ರದೇಶ ಸರ್ಕಾರ ನಂತರ ಭಾರತ ಸೈನಿಕ ಕಲ್ಯಾಣ ಹಾಗೂ ಪುನರ್ವಸತಿ ಇಲಾಖೆ ಇವರಿಂದ ವಾಹನಗಳನ್ನು ಮಾಡಿಸತೊಡಗಿದವು. ''ಇದರಿಂದ ನನ್ನ ಸಮಾಜ ಸೇವಾ ಕಾರ್ಯಗಳಿಗೆ ಸಾಕಷ್ಟು ಸಹಾಯವಾಯಿತು'' ಎನ್ನುತ್ತಾರೆ ತಿವಾರಿ.

**ಕನ್ನಡನಾಡಿನ ನಂಟು...**

ಇವರ ಸಮಾಜ ಸೇವೆ, ಸಾಹಸಗಳು ಅನೇಕ ಪತ್ರಿಕೆಗಳಲ್ಲಿ ಬರತೊಡಗಿದವು. ದೂರದರ್ಶನ ಇವರ ಬಗ್ಗೆ ಒಂದು ಕಾರ್ಯಕ್ರಮವನ್ನು ಸಹ ನಿರ್ಮಿಸಿ ಪ್ರಸಾರ ಮಾಡಿತು. ಇವನ್ನು ನೋಡಿ ಕನ್ನಡತಿಯೊಬ್ಬರು ಇವರಿಗೆ ಬರೆದ ಅಭಿನಂದನ ಪತ್ರ ಮುಂದೆ ಇವರಿಬ್ಬರನ್ನು ಬಾಳಸಂಗಾತಿಗಳನ್ನಾಗಿಸಿತು! (೮೫) ಇಂದು ಪತ್ನಿ ರಮಾ ತಿವಾರಿ, ಮೂರು ಮಕ್ಕಳನ್ನೊಳಗೊಂಡ ಸುಂದರ ಸಂಸಾರ ಇವರದು. ಹಿರಿಯ ಮಗ ಐಯಾಶ್ ತಿವಾರಿ ಬೆಂಗಳೂರಿನಲ್ಲಿ ಓದುತ್ತಿದ್ದಾನೆ.

ಸದಾ ಹಲವಾರು ಯೋಜನೆಗಳನ್ನು ತಲೆಯಲ್ಲಿ ತುಂಬಿಕೊಂಡೇ ಓಡಾಡುವ ಇವರ ಮುಂದಿನ ಯೋಜನೆ ಸೌರವಾಹನ ಹಾಗೂ ಕೈಗಳಿಲ್ಲದವರಿಗೆ ಸೂಕ್ತವಾಹನ. ಈಗ ಇದರಲ್ಲಿ ಸಂಪೂರ್ಣವಾಗಿ ಲೀನರಾಗಿದ್ದಾರೆ.

**ದೇಶ ಪರ್ಯಟನೆ**

ದೇಶದಲ್ಲಿನ ಅಂಗವಿಕಲರನ್ನು, ಸೇವಾಸಂಸ್ಥೆ ಗಳನ್ನೂ ಭೇಟಿ ಮಾಡಬೇಕು, ಅವರಲ್ಲಿ ಧೈರ್ಯ ಆತ್ಮವಿಶ್ವಾಸ ತುಂಬಬೇಕು ಹಾಗೂ ತಾನೂ ದೇಶ ನೋಡಬೇಕೆಂಬ ಹಂಬಲದೊಂದಿಗೆ 'ವಿಕಲತೆಯನ್ನು ಗೆಲ್ಲಿರಿ' ಅಭಿಯಾನವನ್ನು ತಾವೇ ಇದಕ್ಕಾಗಿಯೇ ನಿರ್ಮಿಸಿದ ಒಂದು ಹೆಚ್ಚುವರಿ ಎಂಜಿನ್ ಹೊಂದಿದ್ದ ವಾಹನವನ್ನು ಸಿದ್ಧಪಡಿಸಿದರು. 'ಹಣಕ್ಕಾಗಿ ಏನು ಮಾಡುವೆ?' ಎಂಬ ಗೆಳೆಯರ ಪ್ರಶ್ನೆಗೆ ಅವರ ಉತ್ತರ: ''ನನ್ನ ಯೋಜನೆಗಳು ಹಣದ ಅಭಾವದಿಂದ ವಿಳಂಬವಾಗಿದೆಯಾದರೂ, ಎಂದೂ ನಿಂತಿಲ್ಲ. ಹಾಗಾಗಿ ನಾನು ಅದರ ಬಗ್ಗೆ ಯೋಚಿಸುವುದೇ ಇಲ್ಲ'' ಇಲ್ಲೂ ಹಾಗೆಯೇ ಆಯಿತು! ಉತ್ತರ ಪ್ರದೇಶದ ಅಂಗವಿಕಲರ ಪುನರ್ವಸತಿ ಕೇಂದ್ರದ ಅಧ್ಯಕ್ಷರು ''ನೀವು ಪ್ರಾರಂಭಿಸಿ, ನಾನು ಸಹಾಯ ಮಾಡುತ್ತೇನೆ ಹಾಗೂ ಎಲ್ಲಾ ರಾಜ್ಯಗಳ ಪುನರ್ವಸತಿ ಕೇಂದ್ರಗಳಿಗೆ ಕಾಗದ ಬರೆದು ನಿಮಗೆ ಸಹಾಯ ಮಾಡಲು ಸೂಚಿಸುತ್ತೇನೆ'' ಎಂದರು. ಅಂತೆಯೇ ನಡೆದರು. ಖಾಸಗಿ ವಲಯದಲ್ಲಿ ರೋಟರಿ ಸಂಸ್ಥೆ ನೆರವಿಗೆ ಬಂದು ಕೇವಲ ಐದು ಸಾವಿರ ಕಿ.ಮೀ. ಎಂದುಕೊಂಡಿದ್ದ ಯಾತ್ರೆ ೧೨,೫೯೮ ಕಿ.ಮೀ.ಗೆ ಮುಂದುವರಿದು ದೇಶದ ಹದಿಮೂರು ರಾಜ್ಯಗಳನ್ನು ಸುತ್ತಿಕೊಂಡು ಬಂದರು. ಮುಂಬೈ ಪ್ರವೇಶಿಸುತ್ತಿದ್ದಂತೆ ಸ್ವಾಗತಿಸಿದ್ದು ೧೯೯೦ರ ದಾಖಲೆ ಮಳೆ! ಇವೆಲ್ಲವನ್ನೂ ದಾಟಿಕೊಂಡು ಸಾಧ್ಯವಾದಷ್ಟೂ ಹಳ್ಳಿಗಳನ್ನು ತಿರುಗಿ ಅಂಗವಿಕಲರನ್ನು ಭೇಟಿ ಮಾಡಿ ಅವರನ್ನು ಹುರಿದುಂಬಿಸಿದರು. ಸ್ಥಳೀಯ ಗ್ಯಾರೇಜುಗಳಿಗೆ ಹೋಗಿ ಅಂಗವಿಕಲರಿಗೆ ವಾಹನ ಮಾಡುವ ತರಬೇತಿ ನೀಡಿದರು. ''ಬಿಹಾರ, ರಾಜಾಸ್ಥಾನಗಳಲ್ಲಿ ಅಂಗವಿಕಲರ ಸ್ಥಿತಿ ಅತ್ಯಂತ ಶೋಚನೀಯ. ಅದರಲ್ಲೂ ಅಂಗವಿಕಲ ಮಹಿಳೆಯರ ಬವಣೆಗಳು ಹೇಳಲಾರದಷ್ಟು ಕೆಟ್ಟದಾಗಿದೆ'' ಎನ್ನುತ್ತಾರೆ. ಈ ಅನುಭವಗಳ ಬಗ್ಗೆ ಒಂದು ಪುಸ್ತಕ ಬರೆಯಬೇಕೆಂದಿದ್ದರೂ ಅದು ಕೈಗೂಡಲಿಲ್ಲ.

ಮನುಷ್ಯನಿಗೆ ಛಲವಿದ್ದರೆ ಸಾಕು. ಅಂಗವಿಕಲನೋ ಅಲ್ಲವೋ ಎಂಬುದು ಎರಡನೆಯ ಸ್ಥಾನಕ್ಕೆ ಸರಿಯುತ್ತದೆ. ಆದರೆ ಸರ್ಕಾರ - ಸಮಾಜ ಗಮನ ನೀಡಬೇಕಾಗಿರುವುದು 'ಸಮಾನತೆ'ಗೆ.

ಪತ್ರಿಕಾ ಸಂದರ್ಶನಗಳಲ್ಲಿ ಅವರು ತಪ್ಪದೇ ಹೇಳುವ ಮಾತು ''ಮನುಷ್ಯನಿಗೆ ಛಲವಿದ್ದರೆ ಸಾಕು. ಅಂಗವಿಕಲನೋ ಅಲ್ಲವೋ ಎಂಬುದು ಎರಡನೆಯ ಸ್ಥಾನಕ್ಕೆ ಸರಿಯುತ್ತದೆ. ಆದರೆ ಸರ್ಕಾರ-ಸಮಾಜ ಗಮನ ನೀಡಬೇಕಾಗಿರುವುದು 'ಸಮಾನತೆ'ಗೆ. ಈಗ ಯಾವುದೇ ಸಾರ್ವಜನಿಕ ಕಛೇರಿ-ಸಂಸ್ಥೆಗಳಿಗೆ ಒಬ್ಬ ಅಂಗವಿಕಲ ಹೋಗಬೇಕೆಂದರೆ ಅದು ತುಂಬಾ ಕಷ್ಟದಾಯಕ ಅನುಭವ. ಕೆಲವು ವೇಳೆ ಸಾಧ್ಯವೇ ಆಗದು. ಎಲ್ಲಾ ಸರ್ಕಾರಿ ಕಛೇರಿಗಳು ಕೆಳ ಅಂತಸ್ತಿನಲ್ಲೇ ಇರಬೇಕು. ಇಲ್ಲದಿದ್ದರೆ, ನನ್ನಷ್ಟು ವಿಕಲತೆ ಇರುವವರು ಅವನ್ನು ಪ್ರವೇಶಿಸುವುದೂ ಅಸಾಧ್ಯ'' ಎನ್ನುತ್ತಾರೆ. ''ಎಷ್ಟೋ ರಾಜ್ಯಗಳಲ್ಲಿ ಅಂಗವಿಕಲ ಕಲ್ಯಾಣ ಇಲಾಖೆಯೇ ಮಹಡಿಯ ಮೇಲಿರುತ್ತದೆ'' ಎಂದು ವಿಷಾದಿಸುತ್ತಾರೆ.

''ಅಂಗವಿಕಲರಿಗೆ ಇತರರಂತೆ ಓಡಾಡುವ ಸೌಕರ್ಯ ದೊರೆತರೆ ಅವರ ಸ್ವಾವಲಂಬನೆ ಅಷ್ಟು ಕಷ್ಟವಲ್ಲ. ಆದರೆ, ಜಾಗತೀಕರಣದ ಕರಿನೆರಳು ಕೆಳಮಟ್ಟದ ಉದ್ಯೋಗಗಳನ್ನೂ ಕಬಳಿಸುತ್ತಿದೆ. ಕಾಗದದ ಚೀಲ ಮಾಡಿ ಮಾರುತ್ತಿದ್ದವರಿಗೆ ಪ್ಲಾಸ್ಟಿಕ್ ಚೀಲಗಳು ಜೀವನೋಪಾಯವನ್ನೇ ಕಸಿದಿವೆ. ಗ್ರಾಮೋದ್ಯೋಗ ಉತ್ಪನ್ನಗಳನ್ನು ಮನೆಮನೆಗೆ ಹೊತ್ತೊಯ್ದು ಮಾರುತ್ತಿದ್ದ ಗೆಳೆಯ ಈಗ ಜೀವಿಸಬೇಕಾದರೆ ಬಹುರಾಷ್ಟ್ರೀಯ ಸಂಸ್ಥೆಯ ಪದಾರ್ಥಗಳನ್ನು ಮಾರಬೇಕಾಗಿದೆ. ಸರ್ಕಾರ ಈ ಬಹುರಾಷ್ಟ್ರೀಯ ಸಂಸ್ಥೆಗಳಿಗೆ ಕಡಿವಾಣ ಹಾಕದೇ ತಾನೇ ಇವುಗಳ ಹತೋಟಿಯಲ್ಲಿರುವಂತೆ ವರ್ತಿಸುತ್ತಿದೆ. ಇದು ಹೀಗೆಯೇ ಸಾಗಿದರೆ ಮುಂದೊಂದು ದಿನ ನಾವು ಮತ್ತೆ ನಮ್ಮ ಅಸ್ತಿತ್ವ ಕಳೆದುಕೊಳ್ಳುವೆವೋ ಏನೋ'' ಎಂದು ತಮ್ಮ ಚಿಂತನೆಯನ್ನು ಮಂಡಿಸುತ್ತಾರೆ.

ಸದಾ ಹಲವಾರು ಯೋಜನೆಗಳನ್ನು ತಲೆಯಲ್ಲಿ ತುಂಬಿಕೊಂಡೇ ಓಡಾಡುವ ಇವರ ಮುಂದಿನ ಯೋಜನೆ ಸೌರವಾಹನ ಹಾಗೂ ಕೈಗಳಿಲ್ಲದವರಿಗೆ ಸೂಕ್ತ ವಾಹನ. ಈಗ ಇದರಲ್ಲಿ ಸಂಪೂರ್ಣವಾಗಿ ಲೀನರಾಗಿದ್ದಾರೆ.

***ಇವರ ವಿಳಾಸ:*** *ಶ್ರೀ ಕಾಳಿ ವಿನೋದ ತಿವಾರಿ, ರಿಷಿ ಆಶ್ರಮ, ಶುಕ್ಲಗಂಜ್, ಉನ್ನಾವ್ - ೨೦೯ ೮೬೧. ದೂರವಾಣಿ ೦೫೧೫-೨೮೩೬೦೨೦*

ಕೆ. ಎಸ್. ನವೀನ್
ನಂ. ೩-೩೩/೧೩, ಓಬಳಪ್ಪ ಸ್ಟ್ರೀಟ್, ಚಿಕ್ಕಮಾವಳ್ಳಿ, ಬೆಂಗಳೂರು-೪



'ತಾಯಿ' ಕಾದಂಬರಿಯು ಒಂದು ಉತ್ಕೃಷ್ಟ ಕೃತಿಯಾಗಿದೆ. ಇಲ್ಲಿ ಚಿತ್ರಿತಗೊಂಡಿರುವ ಒಂದೊಂದು ಸನ್ನಿವೇಶ ಮತ್ತು ಪ್ರಸಂಗವೂ ಬದುಕನ್ನು ನೈಜ ನೆಲೆಯಲ್ಲಿ ಅರಿಯುವಂತೆ ಮಾಡುತ್ತದೆ. ಈ ಕಾದಂಬರಿಗೆ ಮುನ್ನುಡಿ ಬರೆದಿರುವ ಸಾಹಿತ್ಯಶಾಸ್ತ್ರಜ್ಞರಾದ ಬರೀಸ್ ಬ್ಯಾಲಿಕ್ ಅವರ ಈ ನುಡಿಗಳು ಮನನ ಯೋಗ್ಯವಾಗಿವೆ: 'ತಾಯಿ' ಪುಸ್ತಕದ ಕಥೆ ತುಂಬ ಅಸಾಮಾನ್ಯವಾದುದು. ಇದರಷ್ಟು ಅಪಾರ ಸಂಖ್ಯೆಯ ಓದುಗರನ್ನು ಹೊಂದಿರುವ ಹಾಗೂ ಲಕ್ಷಾಂತರ ಜನರ ಆಗುಹೋಗುಗಳ ಮೇಲೆ ನೇರ ಪ್ರಭಾವ ಬೀರಿರುವ ಪುಸ್ತಕಗಳು ಜಾಗತಿಕ ಸಾಹಿತ್ಯೇತಿಹಾಸದಲ್ಲಿ ಕೆಲವೇ ಎನ್ನಬಹುದು. ಕಾದಂಬರಿ ಚಿತ್ರಿಸುವುದು ಕೇವಲ ಕ್ರಾಂತಿಕಾರಿ ಹೋರಾಟವನ್ನಲ್ಲ; ಆ ಹೋರಾಟದ ಸಮಯದಲ್ಲಿ ಮಾನವನಲ್ಲಾಗುವ ಒಳ ಬದಲಾವಣೆಗಳ ಪ್ರಕ್ರಿಯೆ, ಅದರ ಶುದ್ಧೀಕರಣ ಜ್ವಾಲೆಯಲ್ಲಿ ಮಾನವ ದ್ವಿತೀಯ ಜನ್ಮ ಪಡೆಯುವುದು ಎಂಬುದನ್ನು ಅರ್ಥಮಾಡಿಕೊಳ್ಳುವುದು ಮುಖ್ಯ. ಮಾನವ ಮನೋಭಾವ ಚಿಂತನೆಗಳಲ್ಲಿ ಆಗುತ್ತಿದ್ದ ಕ್ರಾಂತಿಕಾರಿ ಪರಿವರ್ತನೆಗಳ ಮೇಲೆ, ಆತ್ಮಿಕ ಜೀವನದ ಪ್ರಕ್ರಿಯೆಗಳ ಮೇಲೆ ಗಮನವನ್ನು ಕೇಂದ್ರೀಕರಿಸಿ ಗೋರ್ಕಿ ಈ ಪ್ರಕ್ರಿಯೆಗಳ ಹಾಗೂ ಪರಿವರ್ತನೆಗಳ ವಾಸ್ತವಿಕ ಹಿನ್ನೆಲೆಯನ್ನು ತೋರಿಸಿಕೊಟ್ಟರು.

ಮಾನವ ಜೀವನದ ಹೋರಾಟ ಮಾನವನ ಜೀವನವನ್ನು ವಾಸ್ತವೀಕರಣಗೊಳಿಸುವಲ್ಲಿರುವ ಆಸಕ್ತಿಯಂತೆ ಶುದ್ಧೀಕರಣಗೊಳ್ಳುವಲ್ಲಿರುವುದನ್ನು ಸಹ 'ತಾಯಿ' ಕಾದಂಬರಿ ಎತ್ತಿ ತೋರಿಸುತ್ತದೆ.

ಈ ಕಾದಂಬರಿಯಲ್ಲಿ ಬರುವ ಅನೇಕ ಮಾತುಗಳು ನಮ್ಮ ಒಳ ಧ್ವನಿಯನ್ನು ಚಿಂತನೆಗೆ ಹಚ್ಚಿಸುತ್ತವೆ. ಅಂಥ ಮಾತುಗಳನ್ನು ಇಲ್ಲಿ ಆಯ್ದು ಕೊಡಲಾಗಿದೆ:

''ಮೊದಲು ಕಲಿಯೋದು, ಆಮೇಲೆ ಬೇರೆಯವರಿಗೆ ಕಲಿಸೋದು. ನಾವು ಕೂಲಿಕಾರರು ಕಲಿಯಬೇಕು. ನಮ್ಮ ಬಾಳ್ವೆ ಯಾಕೆ ಇಷ್ಟೊಂದು ಕಷ್ಟಮಯವಾಗಿದೆ ಎಂಬುದನ್ನು ನಾವರಿತುಕೊಳ್ಳಬೇಕು.''

# ಮಾನವ ಭವಿಷ್ಯತ್ತಿನ ಭರವಸೆಯ ಮಾತುಗಳು

ಒಂದು ಸಾಹಿತ್ಯ ಕೃತಿಯು ಮೌಲ್ಯ ಸಾಹಿತ್ಯಿಕ ಮೌಲ್ಯ ಜೊತೆಗೆ ಮಾನವನ ಜೀವನದ ಯಥಾರ್ಥವಾದ ಬದುಕಿನ ನಾನಾ ಮುಖಗಳನ್ನು, ವಾಸ್ತವ ಮತ್ತು ಆದರ್ಶ ಧ್ಯೇಯಗಳನ್ನು ಒಳಗೊಂಡಿದ್ದಲ್ಲಿ ಅದಕ್ಕೊಂದು ಸಾರ್ವತ್ರಿಕ ಬೆಂಬಲ ದೊರೆಯುತ್ತದೆ. ಸಾಹಿತ್ಯಿಕ ಲೋಕದ ವಿಶ್ವದ ಕೃತಿ 'ತಾಯಿ'. ಅದು ಪ್ರಕಟವಾಗಿ ಇಂದಿಗೆ ನೂರು ವರ್ಷಗಳು ಕಳೆದಿವೆ. ಮಕ್ಸಿಂ ಗೋರ್ಕಿಯು ಮಾನವ [illegible]

ಸ. ರಾ. ಸುಳಕೂಡೆ

''ನಮ್ಮನ್ನು ಹಾಳುಮಾಡಿರೋದು ಈ ಹೆದರಿಕೆಯೇ. ನಮ್ಮ ಮೇಲೆ ದರ್ಬಾರು ಮಾಡುವವರು ಈ ಹೆದರಿಕೆಯಿಂದ ಲಾಭ ಪಡೀತಾರೆ. ನಮ್ಮನ್ನು ಇನ್ನೂ ಜಾಸ್ತಿ ಹೆದರಿಸ್ತಲೇ ಇರ್ತಾರೆ.''

''ನೀವಿನ್ನೂ ಎಳೆ ವಯಸ್ಸಿನವರು, ಸಾಕಷ್ಟು ಉಪ್ಪು ನೀರು ಕುಡಿದಿಲ್ಲ; ಇನ್ನೂ. ಒಬ್ಬ ಮನುಷ್ಯನಿಗೆ ಜನ್ಮ ಕೊಡೋದು ಪ್ರಯಾಸದ ಕೆಲಸ. ಆತನಿಗೆ ಸಭ್ಯತನ ಕಲಿಸೋದಂತೂ ಇನ್ನೂ ಪ್ರಯಾಸದ ಕೆಲಸ.''

''ಎಲ್ಲವನ್ನು ತಿಳಿಯಬೇಕೆಂದು ಹೇಳುವುದೇ ಸರಿ. ನಾವು ನಮ್ಮಲ್ಲೇ ವಿಚಾರದ ದೀಪವನ್ನು ಬೆಳಗಬೇಕು. ತಿಳಿವಳಿಕೆಯಿಲ್ಲದ ಮನಸ್ಸನ್ನು ಕತ್ತಲು ಆವರಿಸಿದವರಿಗಾಗಿ ಆ ದೀಪ ಬೆಳಗಬೇಕು. ಪ್ರತಿಯೊಂದು ವಿಷಯಕ್ಕೂ ನಿಜವಾದ ಪ್ರಾಮಾಣಿಕವಾದ ಉತ್ತರ ನಮಗೆ ದೊರೆಯಲೇಬೇಕು. ಪೂರ್ಣ ಸತ್ಯವನ್ನೂ, ಪೂರ್ಣ ಮಿಥ್ಯವನ್ನೂ ನಾವು ತಿಳಿದುಕೊಳ್ಳಲೇಬೇಕು.''

''ಅವರು ವ್ಯಕ್ತಿತ್ವವನ್ನೇ ಮುರೀತಾರಮ್ಮ. ವ್ಯಕ್ತಿತ್ವದ ಮೇಲೆ ಅವರು ತಮ್ಮ ಕೊಳಕು ಕೈ ಇಟ್ಟಾಗ ಎಲ್ಲದಕ್ಕಿಂತ ಹೆಚ್ಚು ನೋವಾಗುತ್ತೆ...''

''ಅವರು ಬದುಕೋದು ದುರಾಶೆ ಮತ್ತು ಹೊಟ್ಟೆಕಿಚ್ಚಿನಲ್ಲೇ. ಒಬ್ಬರನ್ನೊಬ್ಬರು ನೋಯಿಸೋದೆಂದರೆ ಖುಷಿ ಅವರಿಗೆ. ಅವರನ್ನು ಬಯಲಿಗೆಳೆದು ಖಂಡಿಸೋಕೆ ಒಮ್ಮೆ ನೀನು ಶುರು ಮಾಡಿದೆ ಅಂದರೆ ಅವರು ನಿನ್ನನ್ನು ದ್ವೇಷಿಸಿ ಧ್ವಂಸ ಮಾಡೋದು ಖಂಡಿತ.''

''ಪ್ರಪಂಚದಲ್ಲಿ ನ್ಯಾಯ ಅನ್ನೋದು ಒಂದಿದೆ ಅಂತ ನಾನು ತಿಳಿದಾಗ, ಜನ ಒಳ್ಳೆಯವರ ಹಾಗೆ ಕಂಡರು.''

''ನಮಗೆ ಬೇಕಾದ್ದೇನು ? ತುಂಬಿದ ಹೊಟ್ಟೆ ಮಾತ್ರವೊ ? ಖಂಡಿತ ಅಲ್ಲ!'' ಎಂದು ಆತ ಶಾಂತವಾಗಿ ಆ ಮೂವರನ್ನು ನೋಡುತ್ತ ಹೇಳಿದ. ''ನಮ್ಮ ಬೆನ್ನ ಮೇಲೆ ಹೊರೆ ಹೇರಿ ಕಣ್ಣಿಗೆ ಪರದೆ ಹಾಕಿರುವವರಿಗೆ, ನಾವು ತೋರಿಸಿಕೊಡಲೇಬೇಕು – ನಮಗೆ ಪ್ರತಿಯೊಂದೂ ಕಾಣಿಸುತ್ತೆ, ಎಂದು. ನಾವು ಮೂರ್ಖರಲ್ಲ; ತುಂಬಿದ ಹೊಟ್ಟೆಗಾಗಿ ಮಾತ್ರ ಆಸೆ ಪಡೋಕೆ ನಾವೇನೂ ಮೃಗಗಳಲ್ಲ. ಮಾನವರಿಗೆ ಯೋಗ್ಯವಾದ ಬಾಳ್ವೆ ನಡೆಸೋದು ನಮಗೆ ಬೇಕಾಗಿದೆ. ನಮ್ಮ ವೈರಿಗಳು ಕಷ್ಟದ ದುಡಿಮೆಯ ಹೊರೆ ನಮ್ಮ ಮೇಲೆ ಹೊರಿಸಿದರೇನಂತೆ ? ಬೌದ್ಧಿಕವಾಗಿ ಅವರ ಸಮಾನರಾಗೋಕೆ, ಅವರನ್ನು ಮೀರಿಸೋಕೆ ಕೂಡಾ ಅದರಿಂದೇನೂ ತಡೆ ಇಲ್ಲಾಂತ ನಾವು ಅವರಿಗೆ ಸಿದ್ಧ ಮಾಡಿ ತೋರಿಸಿಕೊಡಬೇಕು !''

''ಸಾಕಷ್ಟು ತಿನ್ನೋಕೆ ಸಿಗುವವರು ಬೇಕಾದಷ್ಟು ಜನರಿದ್ದಾರೆ. ಆದರೆ ಪ್ರಾಮಾಣಿಕರಾದವರು ಮಾತ್ರ

ಬಹಳ ಕಡಿಮೆ. ಸಹೃದಯ ಮಾನವೀಯ ಸೋದರತಾ ಭಾವನೆಯಿರುವ ರಾಜ್ಯದೆಡೆಗೆ, ಈ ಕೊಳಕು ಜೀವನದ ಕೆಸರಿನ ಮೇಲೆ, ನಾವು ಸೇತುವೆ ಕಟ್ಟಬೇಕು. ಸಂಗಾತಿಗಳೇ! ಅದೇ ನಮ್ಮೆದುರಿಗಿರುವ ಕಾರ್ಯಭಾರ.''

''ನಾವೆಲ್ಲ ಒಂದೇ ತಾಯಿಯ ಮಕ್ಕಳು. ಪ್ರಪಂಚದ ಶ್ರಮಿಕ ಸೋದರತ್ವದ ಅಜೇಯ ಕಲ್ಪನೆಯ ಅಂಶಗಳು. ಈ ವಿಚಾರದಿಂದಲೇ ನಮ್ಮ ಹೃದಯ ಅರಳೋದು. ನ್ಯಾಯವಿರುವ ಆಕಾಶದಲ್ಲಿ ಬೆಳಗುವ ಸೂರ್ಯನಿದ್ದ ಹಾಗೆ. ಆ ಸರ್ವವಿರೋದು ಕೂಲಿಕಾರರ ಹೃದಯದಲ್ಲಿ. ಅವರು ಯಾರೇ ಇರಲಿ, ತಮ್ಮನ್ನು ಏನೆಂದು ಬೇಕಾದರೂ ಕರಕೊಳ್ಳಲಿ, ಎಲ್ಲ ಕಾಲದವರೆಗೂ ನಿನ್ನೆ, ಇವತ್ತು ಮತ್ತೆ ಮುಂದೆ ಎಂದೆಂದಿಗೂ ಸಮಾಜವಾದಿಗಳು ನಮ್ಮ ಮಾನವ ಸೋದರರು !''

''ನೋವಾಗದೆ ಇರುವವರು ಈ ಪ್ರಪಂಚದಲ್ಲಿ ಯಾರಾದರೂ ಇದ್ದಾರಾ ? ಅವರು ನನ್ನನ್ನು ನೋಯಿಸಿ ನೋಯಿಸಿ ಎಲ್ಲಿಗೆ ಬಂದಿದೇ ಅಂದರೆ, ಈಗ ಅದನ್ನು ನಾನು ಗಮನಿಸೋದೇ ಇಲ್ಲ ಜನ ಹಾಗೆಯೇ ಇರತಕ್ಕವರೆಂದ ಮೇಲೆ ನಾವೇನು ತಾನೆ ಮಾಡಲು ಸಾಧ್ಯ ? ನೋವಾಗೋದನ್ನು ಗಮನಿಸ್ತಾ ಹೋದರೆ ಕೆಲಸಕ್ಕೆ ತಡೆಯಾಗ್ತದೆ. ಆಗಿರೋ ನೋವಿನ ಬಗ್ಗೆ ಯೋಚಿಸ್ತಾ ಕೂತಿರೋದು ಶುದ್ಧ ಕಾಲ ವ್ಯಯ. ಬಾಳು ಇರೋದೇ ಹಾಗೆ! ಮುಂಚೆ ನಾನೂ ಜನರನ್ನು ಕಂಡಾಗ ಹುಚ್ಚಾಪಟ್ಟೆ ರೇಗ್ತಿದ್ದೆ. ಆಮೇಲೆ ಅದರಿಂದೇನೂ ಪ್ರಯೋಜನ ವಿಲ್ಲ ಅನ್ನೋದನ್ನ ಕಂಡುಕೊಂಡೆ. ತನ್ನ ನೆರೆಯಾತ ತನ್ನನ್ನೆಲ್ಲಿ ಅಪ್ಪಳಿಸ್ತಾನೆ ಅನ್ನೋದೇ ಪ್ರತಿಯೊಬ್ಬನಿಗೂ ಇರೋ ಹೆದರಿಕೆ. ಆದ್ದರಿಂದ ತಾನೇ ಮುಂಚಿತವಾಗಿ ಪಕ್ಕದವನ ಮುಖದ ಮೇಲೆ ಹೊಡೆಯಲು ಪ್ರಯತ್ನಿಸ್ತಾನೆ. ಜೀವನ ಸಾಗ್ತಿರೋದೇ ಹಾಗೆ, ನನ್ನವ್ವಾ.''

''ಅದು ನಿಜ ! ಜನರ ಹೃದಯ ಪೂರ್ಣ ಸ್ವಚ್ಛವಾಗ್ಬೇಕು. ಒಬ್ಬ ಮನುಷ್ಯ ಹೇನು ತುಂಬಿ ಕೊಳಕಾದಾಗ, ಅವನನ್ನು ಬಚ್ಚಲು ಮನೆಗೆ ಎಳಕೊಂಡು ಹೋಗಿ ಚೆನ್ನಾಗಿ ಮೈಯುಜ್ಜಿ ಸ್ನಾನ ಮಾಡಿಸಿ, ಚೊಕ್ಕಟವಾದ ಬಟ್ಟೆ ಹಾಕ್ಬೇಕು. ಆಗ ಅವನನ್ನು ನೋಡೋ ಹಾಗಿರುತ್ತೆ, ಅಲ್ವೇ ? ಆದರೆ ಆ ಮನುಷ್ಯನ ಅಂತರ್ಯವನ್ನು ಚೊಕ್ಕಟ ಮಾಡೋದು ಹ್ಯಾಗೆ ? ಅದೀಗ ಮುಖ್ಯ !''

''ವಿಚಾರ ಪ್ರಜ್ಞೆ ಮನುಷ್ಯನಿಗೆ ಶಕ್ತಿ ಕೊಡೋದಿಲ್ಲ! ಶಕ್ತಿ ಕೊಡೋದು ಹೃದಯ, ತಲೆಯಲ್ಲ!''

''ಪವಿತ್ರ ಸ್ಥಾನವನ್ನು ಖಾಲಿ ಬಿಡೋಕಾಗೋದಿಲ್ಲ. ಮಾನವ ಹೃದಯದಲ್ಲಿ ದೇವರು ಹಿಡಿದಿರೋ ಸ್ಥಾನ ತೀರ ಸೂಕ್ಷ್ಮವಾದದ್ದು. ಅದನ್ನು ಕತ್ತರಿಸಿದರೆ ಅಲ್ಲಿ ದೊಡ್ಡ ಗಾಯ ಉಳಿಯುತ್ತೆ. ಹೊಸದೊಂದು ಧರ್ಮ ಕಂಡುಹಿಡಿಯಲೇಬೇಕು, ಪಾವೆಲ್. ಮನುಷ್ಯನಿಗೆ ಸ್ನೇಹಿತನಾಗಿರೋ ಒಬ್ಬ ದೇವರನ್ನು ಸೃಷ್ಟಿಸ್ಬೇಕು. ಅದೀಗ ಆಗಬೇಕಾದ್ದು!''

''ಒಬ್ಬ ಕುಲಮೆ ಕೆಲಸಗಾರನ ಮಾತಿನಲ್ಲಿ ದೇವರು ಒಂದು ಜ್ವಾಲೆ. ಆತ ಜೀವಿಸೋದು ಹೃದಯದಲ್ಲಿ. ಮೊದಲಿಗೆ ಇದ್ದದ್ದು ನುಡಿ – ಆ ನುಡಿಯೇ ದೇವರು ಎಂದು ಹೇಳಿದಾರಲ್ಲಾ, ಆದ್ದರಿಂದ ನುಡಿಯೇ ಚೇತನ.''

''ವಿಷಯವನ್ನು ಈಗ ಇರೋ ಹಾಗೆ ಮಾತಾಡ್ಬೇಕು. ಮುಂದೆ ಇರಬಹುದಾದ ರೀತಿಯಲ್ಲಲ್ಲ, ಮುಂದೆ ಹೇಗಿರುತ್ತೋ ಯಾರಿಗೆ ಗೊತ್ತು? ಒಮ್ಮೆ ಜನರಿಗೆ ಸ್ವಾತಂತ್ರ್ಯ ಸಿಕ್ಕೊಂದರೆ ತಮಗೆ ಯಾವುದು ಅತ್ಯಂತ ಹಿತ ಅಂತ ಅವರೇ ನಿರ್ಧರಿಸ್ತಾರೆ. ಅವರು ಕೇಳದೇನೇ ಅವರ ತಲೆಯೊಳಕ್ಕೆ ಬೇಕಾದಷ್ಟು ಮಣ್ಣು ತುರುಕಿದ್ದಾರೆ. ತಮ್ಮ ಯೋಚನೆಯನ್ನು ತಾವೇ ಮಾಡೋಕೆ ಈಗಲಾದರೂ ಅವರಿಗೆ ಅವಕಾಶ ದೊರೀಲಿ. ಪ್ರತಿಯೊಂದನ್ನು, ಇಡೀ ಜೀವನವನ್ನು, ವಿಜ್ಞಾನವನ್ನು ತಳ್ಳಿಹಾಕೋಕೆ ಅವರು ಇಚ್ಛಿಸಬಹುದು. ಪ್ರಾಯಶಃ ಚರ್ಚಿನ ದೇವರು ಹಾಗೆ ಎಲ್ಲವನ್ನು ತನ್ನ ವಿರುದ್ಧವೇ ಇಟ್ಟಿದ್ದಾನೆ ಅನ್ನೋದು ಅವರಿಗೆ ಗೊತ್ತಾಗಬಹುದು. ಅವರ ಕೈಗೆ ಪುಸ್ತಕ ಕೊಡಿ, ತಮಗೆ ಬೇಕಾದ ಉತ್ತರಾನಾ ಅವರೇ ಕಂಡುಹಿಡಿತಾರೆ.''

''ಒಮ್ಮೊಮ್ಮೆ ಹೃದಯ ತುಂಬಿ ಬರುತ್ತೆ... ಎಂಥ ಅನುಭವ ಆಗ ! ನೀನು ಎಲ್ಲಿಗೆ ಹೋದರೂ ಸರಿಯೇ, ಪ್ರತಿಯೊಬ್ಬನೂ ನಿನ್ನ ಸಂಗಾತಿ ಎಂದೇ ಅನಿಸುತ್ತೆ. ಎಲ್ಲರನ್ನು ಬೆಳಗಿಸ್ತಿರೋದು ಒಂದೇ ಜ್ಯೋತಿ. ಎಲ್ಲರೂ ಒಳ್ಳೆಯವರು, ದಯಾಶೀಲರು, ಸಂತೋಷ ಪ್ರಿಯರು. ಅಲ್ಲಿ ಒಬ್ಬರನ್ನೊಬ್ಬರು ತಿಳಿಕೊಳ್ಳೊಕೆ, ಮಾತಾಡಬೇಕಾದ ಅಗತ್ಯವಿಲ್ಲ. ಪ್ರತಿಯೊಂದು ಹೃದಯ ತನ್ನದೇ ಹಾಡು ಹಾಡಿದರೂ ಎಲ್ಲವೂ ಸೇರಿದ ಮಹಾ ಪಲ್ಲವಿಯ ಹಾಗೆ ಅವರು ಜೀವಿಸ್ತಾರೆ, ಆ ಎಲ್ಲ ಹಾಡುಗಳೂ ಒಂದೇ ನದಿಗೆ ಹರಿಯುವ ತೊರೆಗಳ ಹಾಗೆ. ಆ ನದಿ ಹೊಸ ಬಾಳಿನ ಸಂತೋಷ ಸಾಗರಕ್ಕೆ ವಿಸ್ತಾರವಾಗಿ ಸ್ವಚ್ಛಂದವಾಗಿ ಹರೀತದೆ.''

''ಅದು ಸ್ಪಷ್ಟವಾಗಿದೆ. ಕಾನೂನು ನಮ್ಮ ವಿಷಯಕ್ಕಿಂತ ಅವರಿಗೇ ಹೆಚ್ಚು ಕನಿಕರ ತೋರಿಸುತ್ತೆ. ನಮಗಿಂತಲೂ ಹೆಚ್ಚಾಗಿ ಅವರಿಗೇ ಉಪಯೋಗಕ್ಕೆ ಬರುತ್ತೆ. ಒಮ್ಮೊಮ್ಮೆ ಅವರ ಮೇಲೆ ಆ ಕಾನೂನು ಮುನಿದು ಬಿದ್ದರೆ ಸ್ವಲ್ಪ ತುಟಿ ಕಚ್ಕೋತಾರೆ. ಆದರೆ ರಂಪ ಮಾಡೋದಿಲ್ಲ. ಇನ್ನೊಬ್ಬರ ದೊಣ್ಣೆಯ ಏಟಿಗಿಂತಲೂ ನಮ್ಮ ದೊಣ್ಣೆಯಿಂದಲೇ ಏಟು ತಿನ್ನೋದು ಹೆಚ್ಚು ಸುಲಭ ನೋಡು !''

''ನಿನಗೆ ಏನಾದರೂ ಹೇಳಬೇಕೂಂತ ನಾನು ಬಯಸೋದೂ ಇಲ್ಲ. ಆದರೆ ಈಗಿನ ನಿನ್ನ ಸ್ಥಿತಿ ಬದಲಾಗುತ್ತೆ ಅಂತ ನನಗೆ ಗೊತ್ತು. ಪೂರ್ಣವಾಗಿ ಅಲ್ದೆ ಹೋದರೂ ಬದಲಾಗೋದೇನೋ ನಿಜ.''

''ನಾವು ಯಾವಾಗ ಹೋರಾಟ ಶುರುಮಾಡ್ತೀವೋ ನನಗೆ ಗೊತ್ತಿಲ್ಲ. ಆದರೆ ಅದಕ್ಕಿಂತ ಮುಂಚೆ ಎಷ್ಟೋ ಸಾರಿ ನಮಗೆ ಮೇಲಿಂದ ಮೇಲೆ ಏಟು ಬೀಳುತ್ತೆ ಅನ್ನೋದು ಗೊತ್ತಿದೆ. ಕೈಗಳನ್ನು ಸಜ್ಜುಗೊಳಿಸೋಕೆ ಮುಂಚೆ ತಲೇನ ಸಜ್ಜುಗೊಳಿಸಬೇಕು.''

''ಅಯ್ಯೋ... ಪ್ರಪಂಚದಲ್ಲಿ ಎಷ್ಟೊಂದು ಜನರಿದ್ದಾರೆ. ಎಲ್ಲರೂ ತಂತಮ್ಮ ರೀತಿಯಲ್ಲಿ ನರಳ್ತಾನೇ ಇದ್ದಾರೆ. ಸುಖವಾಗಿರೋರು ಯಾರಪ್ಪಾ ?''

''ಇದು ಇರಬೇಕಾದ್ದೇ ಹಾಗೆ! ಯಾಕೇಂತಂದ್ರೆ ಒಂದು ಹೊಸ ಹೃದಯಾನೇ ಹುಟ್ತಿದೆ ನನ್ನವ್ವ. ಒಂದು ಹೊಸ ಹೃದಯ ಬೆಳಕಿಗೆ ಬರ್ತಿದೆ. ಮನುಷ್ಯ ಮುಂದಕ್ಕೆ ನುಗ್ತಿದ್ದಾನೆ. ವಿಚಾರದ ದೀಪದಿಂದ ಎಲ್ಲಕ್ಕೂ ಬೆಳಕು ತೋರಿಸ್ತಿದ್ದಾನೆ.''

''ಜನರು ಇನ್ನೂ ಅನುಭವಿಸಬೇಕಾದ ಸಂಕಷ್ಟ ಎಷ್ಟೋ ಇದೆ. ಇನ್ನೂ ಎಷ್ಟೋ ರಕ್ತ ಸುರೀಬೇಕಾಗಿದೆ. ನನ್ನ ಹೃದಯದಲ್ಲೂ ಮೆದುಳಲ್ಲೂ ಏನೇನಿಲ್ಲ! ಅದಕ್ಕೆ ಸರಿಯಾಗಿ ನಾನೆಷ್ಟು ಸಂಕಟ ಅನುಭವಿಸಿದರೂ ರಕ್ತ ಸುರಿದರೂ ಅದು ಅಲ್ಪವೇ. ನಾನು ನಕ್ಷತ್ರದ ಹಾಗೆ ಸಮೃದ್ಧವಾಗಿದ್ದೀನಿ. ಆದರೆಲ್ಲ ಕಿರಣಗಳೂ ಸುತ್ತಲೂ ಇವೆ. ಯಾರೂ ಏನೂ ನಾಶ

## ಅಕ್ಕ

'ಈ ಸಾವ ಕೆಡುವ ಗಂಡರನೊಯ್ದು
ಒಲೆಯೊಳಗಿಕ್ಕೆಂದೆಯಲ್ಲಾ ?'
ನಾಲ್ಕು ಗೋಡೆಯೊಳಗಿದ್ದರು ಶಾಂತಿಯಿಲ್ಲ
ಗಾಣದೆತ್ತಿನಂತೆ ದುಡಿದರು ನೆಮ್ಮದಿಯಿಲ್ಲ

ನದಿ-ನೀರಿನ ಗದ್ದಲವಾಗಲಿ
ಮಂದಿರ-ಮಸೀದಿಯ ದ್ವೇಷ ಎದ್ದೇಳಲಿ
ಜ್ವಾಲೆ ದಳ್ಳುರಿಗೆ ಆಹಾರವಾದೆ

ನನ್ನ ಮೇಲೆ ಏರಿದ ಸವಾರಿಗಳೆಷ್ಟೊ
ತುಳಿದು ಮೆಟ್ಟಿ ನಿಂತವರೆಷ್ಟೊ

ಆಸೆಯ ಬಿಗಿ ಮುಷ್ಟಿಯಲಿ ನಲುಗಿದ
ನನ್ನ ಆಕ್ರಂದನದ ಕಣ್ಣೀರು
ಕಾಡಿನ ಕಾಳ್ಗಿಚ್ಚಿನಂತೆ

ಸುಟ್ಟ ಮನೆ-ಮಠ-ಮಸೀದಿಗಳಿಗೆ
ಸತ್ತವರ ಹಿತೈಷಿಗಳಿಗೆ
ಪರಿಹಾರ ನೀಡಬಹುದು

ನನ್ನದೆಲ್ಲವನು ಕೊಟ್ಟ
ನನಗೆ
ನೀಡುವುದಾದರು ಏನು ?



ಅಂದನೂರು ಶೋಭ, ಅಂಚೆ ತೆರಪಿನ ಹಾಗೂ ದೂರ ಶಿಕ್ಷಣ ನಿರ್ದೇಶನಾಲಯ, ಸೆಂಟ್ರಲ್ ಕಾಲೇಜು ಆವರಣ, ಡಾ|| ಅಂಬೇಡ್ಕರ್ ಬೀದಿ, ಬೆಂ - 1

ಮಾಡೋದು ಸಾಧ್ಯವೇ ಇಲ್ಲದಂಥ ಮಹಾ ಸಂತೋಷ ನನ್ನೊಳಗಿದೆ. ಆದ್ದರಿಂದ ನಾನು ಏನನ್ನೂ ಸಹಿಸಬಲ್ಲೆ, ಏನನ್ನೂ ಅನುಭವಿಸಬಲ್ಲೆ, ನನ್ನ ಶಕ್ತಿ ಅಡಗಿರೋದು ಆ ಸಂತೋಷದಲ್ಲೇ !''

''ನನಗೆ ಗೊತ್ತಿದೆ. ಜನ ತಮ್ಮ ಸೌಂದರ್ಯದ ಬಗೆಗೆ ತಾವೇ ಆಶ್ಚರ್ಯ ಪಡುವ ಒಂದು ದಿನ, ಪ್ರತಿಯೊಬ್ಬನೂ ಮಿನುಗುವ ನಕ್ಷತ್ರದ ಹಾಗೆ ಉಳಿದವರಿಗೆ ತೋರುವ ಒಂದು ದಿನ ಮುಂದೆ ಬಂದೀತು. ಭೂಮಿಯ ಮೇಲೆಲ್ಲ, ಸ್ವತಂತ್ರರಾದ, ತಮ್ಮ ಸ್ವಾತಂತ್ರ್ಯದಲ್ಲಿ ಮಹಾ ಘನತೆ ಪಡೆದ ಜನ ಆಗ ಕಾಣಿಸ್ತಾರೆ. ಎಲ್ಲರ ಹೃದಯಗಳೂ ತೆರೆದಿರ್ತವೆ. ಯಾವ ಹೃದಯದಲ್ಲೂ ಅಸೂಯೆ ಕಿಂಚಿತ್ತೂ ಇರದು. ದ್ವೇಷ ಏನೇನೂ ಇರದು. ಸ್ವತಂತ್ರರಾದವರಿಗೆ ಎಟುಕದ ಎತ್ತರ ಉಂಟೆ ? ಆಕಾಶದೆತ್ತರಕ್ಕೆ ಮನುಷ್ಯನ ಮೂರ್ತಿ ಆಗ ಏರ್ತದೆ. ಜೀವನವೆಲ್ಲ ಆ ಮಹಾ ಮಾನವನ ಸೇವೆಗಾಗಿ ಆಗ ಪರಿವರ್ತನೆ ಯಾಗ್ತದೆ. ಸೌಂದರ್ಯಕ್ಕೋಸ್ಕರ ಜನ ಸತ್ಯವಂತರಾಗಿಯೂ ಸ್ವತಂತ್ರರಾಗಿಯೂ ಬಾಳ್ತಾರೆ. ವಿಶ್ವವನ್ನೇ ಅಪ್ಪಿಕೊಳ್ಳಲು ಪ್ರೀತಿಸಲು ಅತ್ಯಂತ ಹೆಚ್ಚು ಸಮರ್ಥರಾದವರು, ಅತ್ಯಂತ ಹೆಚ್ಚು ಸ್ವತಂತ್ರರಾದವರು, ಪುರುಷೋತ್ತಮರಾಗ್ತಾರೆ. ಯಾಕೆಂದರೆ ಅತಿ ಹೆಚ್ಚು ಸೌಂದರ್ಯ ಅವರಲ್ಲಿರ್ತದೆ ! ಅವರು ನವಜೀವನದ ಮಹಾ ವ್ಯಕ್ತಿಗಳಾಗ್ತಾರೆ !''

''ಇದು ಜೀವನ ! ಒಬ್ಬರನ್ನೊಬ್ಬರು ನೋಡಿ ಜನ ಹ್ಯಾಗೆ ದ್ವೇಷಿಸೋ ಹಾಗಾಗಿದೆ ! ಇಷ್ಟವಿಲ್ದೇ ಇದ್ದರೂ ಹೋಗಿ ಯಾರನ್ನಾದರೂ ಹೊಡೀತೇವಿ. ಹೊಡಿಯೋದೂ ಯಾರನ್ನ? ನಮ್ಮಷ್ಟೇ ನಿರ್ಗತಿಕವಾದ ಇನ್ನೊಂದು ಪ್ರಾಣಿಯನ್ನು. ಆತನೋ ನಮಗಿಂತಲೂ ಹೆಚ್ಚು ನಿರ್ಭಾಗ್ಯ.''

''ಸಾವಿನಿಂದ ಸಾವನ್ನೇ ಜಯಿಸುತ್ತೇವೆ ! ಬೇರೆ ರೀತಿ ಹೇಳೋದಾದರೆ ಜನರಿಗೆ ಪುನರ್ಜನ್ಮ ಕೊಡೋಕೋಸ್ಕರ ಸಾಯೋದು ! ಪ್ರಪಂಚದಲ್ಲೆಲ್ಲಾ ಕೋಟ್ಯಾಂತರ ಜನರಿಗೆ ಪುನರ್ಜನ್ಮ ಕೊಡಿಸೋದಕ್ಕೋಸ್ಕರ ನಾವು ಸಹಸ್ರಾರು ಜನ ಸಾಯೋಣ ! ಇದೀಗ ವಿಷಯ ! ಸುಲಭವಾಗಿ ನಗುನಗ್ತಾ ಸಾಯೋದು – ಜನರ ಪುನರ್ಜನ್ಮಕ್ಕಾಗಿ ! ಜನರ ಜಾಗೃತಿಗಾಗಿ !''

''ಸಂಗಾತಿಗಳೇ ! ನಾವೊಂದು ತೀರ್ಮಾನ ಮಾಡಿ ಈ ದಿನ ಇಲ್ಲಿಗೆ ಬಂದಿದ್ದೀವಿ. ನಾವು ಯಾರು ಅನ್ನೋದನ್ನ ಈ ದಿನ ಘೋಷಿಸ್ಬೇಕು; ವಿಚಾರದ, ನ್ಯಾಯದ, ಸ್ವಾತಂತ್ರ್ಯದ ನಮ್ಮ ಬಾವುಟಾನ ಈ ದಿನ ಹಾರಿಸ್ಬೇಕು ಅನ್ನೋದೇ ಆ ನಿರ್ಧಾರ !''

''ಸಂಗಾತಿಗಳೇ ! ನಾವೊಂದು ಹೊಸ ದೇವರ ಹೆಸರಿನಲ್ಲಿ ಧರ್ಮಯುದ್ಧ ಹೂಡಿದ್ದೀವಿ. ಬೆಳಕಿನ ವಿಚಾರದ ದೇವರು. ಒಳಿತಿನ ಸತ್ಯದ ದೇವರು. ನಮ್ಮ ಅಂತಿಮ ಗುರಿ ದೂರವಿದೆ. ಆದರೆ ನಮ್ಮ ಮುಳ್ಳಿನ ಕಿರೀಟ ಸಮೀಪವಾಗಿಯೇ ಇದೆ !''

''ಜಗತ್ತಿನಲ್ಲಿ ಸ್ವತಂತ್ರರಾಗಿರೋ ಜನರು ಕೆಲವರು ಮಾತ್ರ – ಇದು ದುಃಖದ ವಿಷಯ.''

''.....ಜಗತ್ತಿನಲ್ಲೆಲ್ಲಾ ಎಲ್ಲಾ ಶಹರಗಳಲ್ಲೂ ಎಲ್ಲಾ ಜಾಗಗಳಲ್ಲೂ ಒಳ್ಳೇ ಜನರು ಈ ಕೆಲಸ ಮಾಡ್ತಾನೇ ಇದ್ದಾರೆ. ಅದಕ್ಕೆ ಇತಿಮಿತಿಯಿಲ್ಲ, ತೂಕ-ಅಳತೆ ಇಲ್ಲ. ಅದು ಬೆಳೀ ತಾನೇ ಇರ್ತದೆ. ವಿಜಯದ ಗಳಿಗೆ ಬರೋವರೆಗೂ ಬೆಳೀತದೆ....'' ''ಸತ್ಯದ ನ್ಯಾಯದ ಬೀಜಗಳನ್ನು ನನ್ನಲ್ಲಿ ಬಿತ್ತಿ, ನಿಮ್ಮ ಶ್ರಮಕ್ಕೆ ನೂರು ಪಾಲಷ್ಟು ಉತ್ಪನ್ನ ನಾನು ಕೊಡುವೆ'' ಎಂದು, ಸ್ವತಂತ್ರರಾದ ಪ್ರಾಮಾಣಿಕರಾದ ಜನರೊಡನೆ ಆ ಹೊಲ ಹೇಳುವಂತಿತ್ತು.

''ಎಷ್ಟೊಂದು ಭಯಾನಕ ! ಜನರ ಮೇಲಿನ ಹಿಡಿತವನ್ನು ಉಳಿಸಿಕೊಳ್ಳೋ ಹುಚ್ಚಿನಲ್ಲಿ ಕೆಲವು ಜನ ಮೂರ್ಖರು, ಬೇರೆಯವರನ್ನೆಲ್ಲಾ ಹಿಸುಕ್ತಾ ಹೊಡೀತಾ ತುಳೀತಾ ಹೋಗ್ತಾರೆ ! ಅಮಾನುಷತೆ ಜಾಸ್ತಿಯಾಗ್ತಿದೆ. ಕ್ರೌರ್ಯ ಬದುಕಿನ ನಿಯಮವಾಗ್ತಿದೆ. ಯೋಚಿಸಿ ನೋಡಿ, ಕೆಲವರು ಜನರನ್ನು ಹೊಡೆದು ಮೃಗಗಳ ಹಾಗೆ ವರ್ತಿಸ್ತಾರೆ. ಯಾಕೆಂದರೆ ಕಾನೂನು ತಮಗೇನೂ ಮಾಡೋದಿಲ್ಲಾಂತ ಅವರಿಗೆ ಗೊತ್ತಿದೆ. ಬೇರೆಯವರಿಗೆ ಚಿತ್ರಹಿಂಸೆ ಕೊಡ್ಬೇಕು ಅನ್ನೋ ಬಯಕೆಯಿಂದ ಅವರು ಅಸ್ವಸ್ಥರಾಗ್ತಾರೆ. ಇದು ಗುಲಾಮರಿಗೆ ಅಂಟಿಕೊಂಡಿರೋ ಅಸಹ್ಯರೋಗ. ತಮ್ಮ ಗುಲಾಮ ಭಾವನೆ ಮೃಗೀಯ ಅಭ್ಯಾಸಗಳನ್ನು ಹರಿಬಿಡೋಕೆ ಅವಕಾಶ ದೊರೆತಾಗ ಅವರು ಮಾಡೋದೇ ಹೀಗೆ. ಇತರರು ಪ್ರತೀಕಾರದ ಬಯಕೆ ಯಿಂದ ಕಲುಷಿತರಾಗಿದ್ದಾರೆ. ಇನ್ನೂ ಇತರರು ತಮಗೆ ದೊರೆಯೋ ಹೊಡೆತ ಸಹಿಸಿ ಸಹಿಸಿ ಕಿವುಡರಾಗಿದ್ದಾರೆ, ಮೂಕರಾಗಿದ್ದಾರೆ, ಜನರು, ಎಲ್ಲಾ ಜನರು, ಕೆಟ್ಟು ಹೋಗ್ತಿದ್ದಾರೆ !''

''ಈ ಮೃಗಜೀವನದಲ್ಲಿ ನಾವು ಅಪೇಕ್ಷೆ ಪಡದೇ ಇದ್ರೂ ಮೃಗಗಳಾಗ್ತೇವೆ.''

''ತಿಳಿವಳಿಕೆ ಉಳ್ಳೋರು ಎಲ್ಲಾ ಕಡೇನೂ ಇದ್ದಾರೆ. ಅವರನ್ನ ಈ ಸ್ಥಿತಿಗೆ ತರೋದು ಹಸಿವು. ಅಂತವರು ಎಲ್ಲೆಲ್ಲಿಯೂ ಇದ್ದಾರೆ ನಿಜ. ಆದರೆ ಅವರನ್ನು ಹುಡುಕೋದು ಕಷ್ಟ.''

''ಜೀವನ ಎಷ್ಟೊಂದು ತಮಾಷೆಯಾಗಿದೆ ! ಪ್ರತಿದಿನವೂ ಐದು ಸಲ ನಗೋದು ಐದು ಸಲ ಅಳೋದು.''

''ಕುಟುಂಬ ಜೀವನ ಕ್ರಾಂತಿಕಾರಿಯ ಶಕ್ತೀನ ಕಡಿಮೆ ಮಾಡುತ್ತೆ – ಯಾವಾಗಲೂ ಕಡಿಮೆ ಮಾಡುತ್ತೆ ! ಮಕ್ಕಳು ಬಡತನ ಕುಟುಂಬ ಪೋಷಣೆಗಾಗಿ ದುಡಿಯಬೇಕಾದ ಅವಶ್ಯಕತೆ...... ಕ್ರಾಂತಿಕಾರಿ ತನ್ನ ಚಟುವಟಿಕೆಗಳು ವಿಸ್ತಾರವಾಗೋ ಹಾಗೆ, ಎಡಬಿಡದೆ ತನ್ನ ಶಕ್ತೀನ ಹೆಚ್ಚಿಸ್ತಿರಬೇಕು. ಕಾಲಸ್ಥಿತಿ ಅಂಥಾದ್ದು. ಇತರರಿಗಿಂತ ಮುಂದೆ ನಾವು ಸಾಗ್ಬೇಕು. ಯಾಕೆಂದರೆ ಹಳೇ ಜಗತ್ತನ್ನು ನಿರ್ನಾಮ ಮಾಡಿ ಹೊಸ ಜಗತ್ತನ್ನು ನಿರ್ಮಿಸೋ ದಕ್ಕೋಸ್ಕರ ಇತಿಹಾಸ ಆಯ್ದುಕೊಂಡಿರೋ ಕಾರ್ಯಕರ್ತರು ನಾವು. ಆಯಾಸದಿಂದಲೋ ಯಾವುದಾದರೂ ಸಣ್ಣ ವಿಜಯದಿಂದ ಆಕರ್ಷಿತರಾಗಿಯೋ ನಾವು ಹಿಂದುಳಿದರೆ ಧ್ಯೇಯಕ್ಕೆ ದ್ರೋಹ ಬಗೆದಷ್ಟೇ ದೊಡ್ಡ ತಪ್ಪನ್ನು ನಾವು ಮಾಡಿದ ಹಾಗಾಗ್ತದೆ. ನಮ್ಮ ಶ್ರದ್ಧೆಗೆ ಭಂಗ ತಾರದೆ ಇನ್ನೊಬ್ಬರ ಜತೇಲಿ ಮುಂದುವರಿಯೋದು ಸಾಧ್ಯವಿಲ್ಲ. ನಮ್ಮ ಗುರಿ ಸಣ್ಣ ಪುಟ್ಟ ಯಶಸ್ಸಲ್ಲ, ಸಂಪೂರ್ಣವಾದ ವಿಜಯ ಅನ್ನೋದನ್ನ ನಾವು ಯಾವತ್ತೂ ಮರೀ ಬಾರ್ದು.'' 'ಎಳೇ ಹೃದಯಗಳಿಗೆ ಯಾವಾಗಲೂ ಸತ್ಯ ಹೆಚ್ಚು ಬೇಗನೆ ಗೊತ್ತಾಗ್ತದೆ....'

''ನೀವು ಜನರನ್ನ ಗೂಢಚಾರರಾಗೋಕೆ ತರಬೇತು ಮಾಡ್ತೀರಿ. ಸ್ತ್ರೀಯರನ್ನೂ ಎಳೇ ಹುಡುಗಿಯರನ್ನೂ ವ್ಯಭಿಚಾರಕ್ಕಿಳಿಸ್ತೀರಿ. ಗಂಡಸರನ್ನು ಕಳ್ಳರಾಗಿಯೂ ಕೊಲೆಪಾತಕಿ ಗಳಾಗಿಯೂ ಮಾರ್ಪಡಿಸುತ್ತೀರಿ. ಅವರಿಗೆ ವೋಡ್ಕ ಕುಡಿಯುವ ಚಟ ಹತ್ತಿಸ್ತೀರಿ. ಅಂತರರಾಷ್ಟ್ರೀಯ ಯುದ್ಧ, ಸುಳ್ಳು, ವ್ಯಭಿಚಾರ, ಮೃಗಜೀವ ಇದು ನಿಮ್ಮ ನಾಗರೀಕತೆ ! ಇಂಥ ನಾಗರೀಕತೆಗೆ ನಾವು ವೈರಿಗಳು !''

''ಜನರಲ್ಲಿ ಕೆಡುಕಿಗಿಂತಲೂ ಮೂರ್ಖತನ ಹೆಚ್ಚಾಗಿದೆ. ಕಣ್ಣ ಮುಂದಿರೋದನ್ನು, ಬೇಗ್ನೆ ಕೈಗೆಟಕುವಂಥಾದನ್ನು ಮಾತ್ರ ಅವರು ಕಾಣ್ತಾರೆ. ಆದರೆ ಕೈಗೆ ಸಮೀಪವಾಗಿ ರೋದೇಲ್ಲಾ ಅಗ್ಗ - ದೂರವಿರೋದು ಮಾತ್ರ ತುಟ್ಟಿ. ಸ್ಪಷ್ಟವಾಗಿ ನೋಡಿದಾಗ ತೋರೋದೇನು ? ಬದುಕು ಹೆಚ್ಚು ಸುಲಭವಾಗಿದ್ರೆ ಜನರು ಹೆಚ್ಚು ವಿಚಾರಿಗಳಾಗಿದ್ರೆ, ಪ್ರತಿಯೊಬ್ಬರೂ ಇನ್ನೂ ಹೆಚ್ಚು ಸುಖವಾಗಿಯೂ ಚೆನ್ನಾಗಿಯೂ ಇರಬಹುದು. ಆದರೆ ಇದನ್ನ ಸಾಧಿಸೋಕೆ ಸ್ವಲ್ಪ ಕಷ್ಟಪಡಬೇಕಾದ್ದು ಅಗತ್ಯ.'' ''ನಮ್ಮ ಮಕ್ಕಳು ಸತ್ಯದ ವಿಚಾರದ ಹಾದಿ ತುಳೀತಿದಾರೆ. ಮಾನವರ ಹೃದಯಗಳಿಗೆ ಪ್ರೇಮವನ್ನು ತರ್ತಿದ್ದಾರೆ. ಭೂಮಿಗೆ ಹೊಸ ಸ್ವರ್ಗದ ಸೇತುವೆ ಕಟ್ತಿದ್ದಾರೆ. ಹೊಸ ಬೆಂಕಿಯಿಂದ ಭೂಮಿಯನ್ನು ಬೆಳಗ್ತಿದ್ದಾರೆ. ಅದು ಆತ್ಮಶಕ್ತಿಯ ಅಳಿಸಲಾಗದ ಬೆಂಕಿ. ಅದರ ಜ್ವಾಲೆಗಳಿಂದ ಮಾನವ ಕೋಟಿಯ ವಿಷಯದಲ್ಲಿ ನಮ್ಮ ಮಕ್ಕಳಿಗಿರುವ ಪ್ರೇಮದಿಂದ ಹುಟ್ಟಿದ ಹೊಸ ಬದುಕು ಚಿಮ್ಮುತ್ತಿದೆ. ಈ ಜ್ವಾಲೆಗಳನ್ನು ನಂದಿಸೋ ಸಾಮರ್ಥ್ಯ ಯಾರಿಗಿದೆ ? ಯಾರಿಗೆ ? ಯಾವ ಶಕ್ತಿ ಅವರನ್ನು ನಾಶ ಮಾಡೀತು ? ಯಾವ ಶಕ್ತಿ ಅವರನ್ನು ವಿರೋಧಿಸೀತು ? ಅವರು ಭೂಮಿಯಿಂದ ಹುಟ್ಟಿದ್ದಾರೆ. ಎಲ್ಲ ಬದುಕೂ – ಬದುಕೆಲ್ಲವೂ – ಅವರ ವಿಜಯಕ್ಕಾಗಿ ಹಾತೊರೀತಿದೆ !''

''ಇದು, ಜನರೆಡೆಯಲ್ಲಿ ಹೊಸ ದೇವರು ಹುಟ್ಟಿದ ಹಾಗೆ ! ಪ್ರತಿಯೊಂದೂ ಎಲ್ಲರಿಗಾಗಿ, ಎಲ್ಲವೂ ಪ್ರತಿಯೊಬ್ಬರಿಗಾಗಿ ! ಅದೀಗ ನನಗೆ ಅರ್ಥವಾಗೋ ರೀತಿ. ಸತ್ಯದಲ್ಲೇ ನಾವೆಲ್ಲ ಸಂಗಾತಿಗಳು; ಎಲ್ಲರೂ ಸಂಬಂಧಿಕರು; ಎಲ್ಲರೂ ಒಂದೇ ತಾಯಿಯ ಮಕ್ಕಳು. ಸತ್ಯವೇ ಆ ತಾಯಿ !''

''ಬಡತನ, ಹಸಿವು, ರೋಗ – ಇದೇ ಈಗ ತಮ್ಮ ಕೆಲಸಕ್ಕೆ ಜನರಿಗೆ ಸಿಗೋ ಪ್ರತಿಫಲ ! ಪ್ರತಿಯೊಂದು ನಮಗೆ ಇದಿರಾಗಿದೆ. ಜೀವಮಾನವೆಲ್ಲಾ ನಾವು ಪ್ರತಿದಿನವೂ ನಮ್ಮ ಶಕ್ತಿಯ ಕೊನೇ ಗುಲಗಂಜಿ ತೂಕವನ್ನೂ ಉಪಯೋಗಿಸಿ ದುಡೀತೇವೆ. ಯಾವಾಗಲೂ ಹೊಲಸಾಗಿರ್ತೇವೆ. ಯಾವಾಗಲೂ ಮೋಸ ಹೋಗ್ತೇವೆ ! ಬೇರೆಯವರು, ಸಂಕೋಲೆಯಲ್ಲಿ ಕಟ್ಟಿದ ನಾಯಿಯ ಹಾಗೆ ನಮ್ಮನ್ನು ಅಜ್ಞಾನದಲ್ಲಿ ಇರಿಸಿ, ತಾವು ನಮ್ಮ ದುಡಿಮೆಯಿಂದ ಎಲ್ಲ ಸೌಕರ್ಯವನ್ನೂ ಪಡೀತಾರೆ. ನಮಗೆ ಏನೂ ಗೊತ್ತಿರೋದಿಲ್ಲ. ನಾವು ದಿಗಿಲು ಬೀಳ್ತೇವೆ. ಪ್ರತಿಯೊಂದಕ್ಕೂ ಹೆದರ್ತೇವೆ ! ನಮ್ಮ ಬದುಕು ಬೆಳಕೇ ಹರಿಯದಂಥ ಉದ್ದನೆಯ ಕತ್ತಲಿನ ರಾತ್ರಿಯ ಹಾಗೆ !''

''ಯಾವುದೂ ನಿಮ್ಮನ್ನು ಭಯಪಡಿಸದಿರಲಿ ! ನೀವು ಬದುಕಿರೋ ಜೀವನಕ್ಕಿಂತ ಹೆಚ್ಚು ಕಹಿಯಾದದ್ದು ಇನ್ನೊಂದು ಇರಲಾರದು !''

ಜೀವನ ನೈಜತೆಯ ಕೆಚ್ಚನ್ನು ಗಟ್ಟಿಗೊಳಿಸುವ ಯಾವ ಕಾಲವೂ ತ್ಯಾಗ ಬಲಿದಾನದ ಶ್ರಮದ ದಾರಿಯಾಗಿರುವ ಜೊತೆಗೆ ಜಡ್ಡುಗಟ್ಟಿದ ಭಾವನೆಗಳನ್ನು ಪಲ್ಲಟಗೊಳಿಸುವ ಶಕ್ತಿಯಂತಿರುತ್ತದೆ. ತಾಯಿ ಕಾದಂಬರಿಯನ್ನು ಓದಿಗಾಗಿ ಓದುವುದಲ್ಲ, ಬಾಳಿನ ಶ್ರಮದ ಶಕ್ತಿಯನ್ನು ಒಗ್ಗೂಡಿಸಿಕೊಂಡು ನೆಲದ ಸತ್ಯವನ್ನು ಆಚರಿಸುವುದೇ ಆಗಿದೆ. ಬೆಳಕಿನ ಭಾಗವಾದ ಮಾನವ ಜೀವನವನ್ನು ಅರ್ಥೈಸಿಕೊಂಡಷ್ಟು ಜಗದ ಬಾಳು ಎತ್ತರ ಗೊಳ್ಳುತ್ತದೆ; ಎತ್ತಿಕೊಳ್ಳುತ್ತದೆ.

ಸಂಗ್ರಹ : ಸ. ರಾ. ಸುಳಕೂಡೆ
ನಂ. ೧೩೭೯, ರಾಮತೀರ್ಥನಗರ, ಬೆಳಗಾಂ - ೫೯೦ ೦೧೫

# ಪ್ರಸ್ತುತವಿದೆ
# ಹಿಂದೆಂದಿಗಿಂತಲೂ
# ಉತ್ತಮವಾದ ಹೊಸ
# ಸಂತೂರ್



ಇದೀಗ ಹೊಸ ಸಂತೂರ್ ಬಳಸಲು ಇನ್ನಷ್ಟು ಕಾರಣಗಳು

**ನ್ಯಾಚುರಲ್ ಸ್ಕಿನ್ ಸಾಫ್ಟನರ್ಸ್**
ನೀಡುವುದು ಕೋಮಲ
ಹಾಗೂ ನುಣುಪಾದ ತ್ವಚೆ

ಮೈಮರೆಸುವ **ಹೊಸ ಪರಿಮಳ**
ನೀಡುವುದು, ಆಹ್ಲಾದಕರ
ಸ್ನಾನದ ಅನುಭವ

**ಚಂದನ ಮತ್ತು ಅರಿಸಿನದ**
**ಅಡ್ವಾನ್ಸ್ಡ್ ಎಕ್ಸ್‌ಟ್ರಾಕ್ಟ್ಸ್**
ನೀಡುವುದು
ತಾರುಣ್ಯ ಭರಿತ ತ್ವಚೆ




ಹೊಸ **ಸಂತೂರ್**

ನಿಮಗೆಂದೇ ವಿಶೇಷವಾಗಿ

**HOSATHU** Kannada Monthly / July 2004 Rs. 10

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14

# ಹಿಂದೆಂದೂ ಕಂಡು ಕೇಳರಿಯದ ವೈಭವ !

ಚಿತ್ತಾಕರ್ಷಕ ವಿನ್ಯಾಸದ, ಕಾಳಜಿಯುಕ್ತ
ಕುಸುರಿ ನೇಯ್ಗೆಯ ಬೆರಗುಗೊಳಿಸುವ
ಅಪ್ಪಟ ರೇಷ್ಮೆ ಸೀರೆಗಳ ಭಂಡಾರ

- ಕಾಂತಾ
- ವರ್ಣ ಚಿತ್ತಾರದ ಸೀರೆಗಳು
- ಬ್ರೊಕೇಡ್
- ಜ್ಯೊಡಿಯಾಕ್
- ಮಾಡರ್ನ್ ಪ್ರಿಂಟ್ಸ್
- ಗಂಡಭೇರುಂಡ
- ಜಮ್ದಾನಿ
- ಕಲಾಂಜಲಿ
- ಚೌಕಳಿ
- ಕಪ್ಪು ಬಿಳುಪು ಪ್ರಿಂಟ್ಸ್

ದೊರೆಯುವ ಏಕೈಕ ಸ್ಥಳ

**ಸೀರೆ Saree**

ಪ್ರಿಯದರ್ಶಿನಿಯವರ ಉತ್ಪನ್ನ
ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ
**ಕೈಮಗ್ಗದ ತವರು**



ಎಲ್ಲಾ ಪ್ರಿಯದರ್ಶಿನಿ ಹ್ಯಾಂಡ್‌ಲೂಮ್ಸ್‌ಗಳಲ್ಲಿ ಲಭ್ಯ : **ಬೆಂಗಳೂರು :** • **"ಶರ್ಟ್ ಶಾಪ್"**, ನಂ ೧, ಟ್ಯಾಂಕ್ ರಸ್ತೆ, ಅಲಸೂರು, ಫೋನ್ : ೨೫೫೭೫೪೨೪ • ನಂ. ೨೨, **ಕಮರ್ಷಿಯಲ್ ಸ್ಟ್ರೀಟ್**, ಫೋನ್ : ೨೫೩೨೧೧೦೮ • ನಂ. ೨೪, ೫ನೇ ಮುಖ್ಯರಸ್ತೆ, ಜಯಮಹಲ್ ಎಕ್ಸ್‌ಟೆನ್‌ಶನ್, ಫೋನ್ : ೨೩೫೩೫೭೪೭ • ಬಿಡಿಎ ಶಾಪಿಂಗ್ ಕಾಂಪ್ಲೆಕ್ಸ್, **ಕೋರಮಂಗಲ**, ಫೋನ್ : ೨೫೬೩೧೭೫೮ • ೧೧ನೇ ಕ್ರಾಸ್, **ಮಲ್ಲೇಶ್ವರಂ**, ಫೋನ್ : ೨೩೪೬೪೪೨೪ • ಕೆಎಚ್‌ಡಿಸಿ ಶಾಪಿಂಗ್ ಕಾಂಪ್ಲೆಕ್ಸ್, **ಎಮ್.ಜಿ ರಸ್ತೆ**, ಫೋನ್ : ೨೫೩೨೧೧೭೨ • ಸಫೀನಾ ಪ್ಲಾಝಾ, **ಇನ್‌ಫೆಂಟ್ರಿ ರಸ್ತೆ**, ಫೋನ್ : ೨೫೩೨೫೪೮೩ • ಕಾರ್ಪೊರೇಶನ್ ಶಾಪಿಂಗ್ ಕಾಂಪ್ಲೆಕ್ಸ್, **ಸುಭಾಷ್ ನಗರ**, ಫೋನ್ : ೨೨೨೯೯೪೭೬ • **ಜಯನಗರ ಶಾಪಿಂಗ್ ಕಾಂಪ್ಲೆಕ್ಸ್**, ೪ನೇ ಬ್ಲಾಕ್, ಫೋನ್ : ೨೬೫೫೯೦೫ • ಮಹಾವೀರ ಶಾಪಿಂಗ್ ಕಾಂಪ್ಲೆಕ್ಸ್, ಕೆ. ಜಿ. ರಸ್ತೆ, ಫೋನ್ : ೨೨೨೬೨೮೩೬ • ರಲ್ಲಾರಾಮ್ ಬಿಲ್ಡಿಂಗ್, ಪಿ. **ಕಾಳಿಂಗರಾವ್ ರಸ್ತೆ**, ಫೋನ್ : ೨೨೨೯೯೧೦೯ • ಇಎಸ್‌ಐ ಹಾಸ್ಪಿಟಲ್ ಹತ್ತಿರ, **ರಾಜಾಜಿನಗರ**, ಫೋನ್ : ೨೩೪೦೦೦೧೧ **ಬೆಳಗಾವಿ :** • ಶಾನಬಾಗ್ ಚೇಂಬರ್ , **ಕಿರ್ಲೋಸ್ಕರ್ ರಸ್ತೆ**, ಫೋನ್ : ೯೫೮೩೧ ೨೪೬೪೧೨೬ **ಹುಬ್ಬಳ್ಳಿ** • **ಎಚ್‌ಡಿಎಮ್‌ಸಿ ಕಾಂಪ್ಲೆಕ್ಸ್**, ಇಂದಿರಾ ಗ್ಲಾಸ್ ಹೌಸ್ ಎದುರಿಗೆ, ಬಸ್ ನಿಲ್ದಾಣದ ಹತ್ತಿರ, ಫೋನ್ : ೯೫೮೩೬ ೨೩೫೨೨೪ • **ನ್ಯೂ ಕಾಟನ್ ಮಾರ್ಕೆಟ್**, ಫೋನ್ : ೯೫೮೩೬ ೨೩೫೨೬೦ **ಮಂಗಳೂರು :** • **ಕಾರ್ನಾಡ್ ಸದಾಶಿವ ರಾವ್ ರಸ್ತೆ**, ಫೋನ್ : ೯೫೮೨೪ ೨೪೪೧೧೮೩ **ಮೈಸೂರು :** • **ಮುನಸಿಪಲ್ ಶಾಪಿಂಗ್ ಕಾಂಪ್ಲೆಕ್ಸ್**, ಧನ್ವಂತ್ರಿ ರಸ್ತೆ, ಫೋನ್ : ೯೫೮೨೧ ೨೪೨೩೪೧೩ **ತುಮಕೂರು :** • **ಬಿಹೆಚ್ ರಸ್ತೆ**, ಫೋನ್ : ೯೫೮೧೬ ೨೨೭೩೧೧

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna